

ಶ್ರೀಮತಿ ನೇಮಿಚಂದ್ರ ಅವರ
ಸುಪ್ರಸಿದ್ಧ ಅಂಕಣ ಬರಹ
‘ಬದುಕು ಬದಲಿಸಬಹುದು’ ಮಾಲಿಕೆಯ
ಭಾಗ -2 ಮತ್ತು 3
ಇದೀಗ ಪುಸ್ತಕ ರೂಪದಲ್ಲಿ ಪ್ರಕಟ




**ಉಡುಪಿ**

15.08.2015 ಸಂಜೆ 5 ಗಂಟೆಗೆ
ನೂತನ ರವೀಂದ್ರ ಮಂಟಪ
ಎಂ.ಜಿ.ಎಂ. ಕಾಲೇಜು ಆವರಣ

ಉಡುಪಿಯಲ್ಲಿ
ಮತ್ತು
ಬೆಂಗಳೂರಿನಲ್ಲಿ
ಎರಡೂ ಕೃತಿಗಳ
ಲೋಕಾರ್ಪಣೆ

**ಬೆಂಗಳೂರು**

6.09.2015 ಬೆಳಿಗ್ಗೆ 10 ಗಂಟೆಗೆ
ಶ್ರೀ ಕೃಷ್ಣರಾಜ ಪರಿಷನ್ಮಂದಿರ
ಕನ್ನಡ ಸಾಹಿತ್ಯ ಪರಿಷತ್ತು










ಮೂರು ವರ್ಷದ ‘ಹೊಸತು’
ಚಂದಾದಾರರಿಗೆ 20% ಸೋಡಿ.
ಇತರರಿಗೆ 10% ಸೋಡಿ. ನಿವ್ವಳ
₹300ಕ್ಕಿಂತ ಕಡಿಮೆ ಮೊತ್ತದ
ಬೇಡಿಕೆಗಳಿಗೆ ಅಂಚೆ/ಕೊರಿಯರ್
ವೆಚ್ಚ ₹40 ಪ್ರತ್ಯೇಕ.

ಆನ್‌ಲೈನ್ ಮೂಲಕವೂ ಲಭ್ಯ  Shop Online www.navakarnataka.com

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com http://navakarnataka.blogspot.in

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ಶ್ರೀ ಹರಿ, ವಿ. ಗೋಪಾಲ್,
ತನು, ರಾಂಚಂದ್ರ ಕೊಪ್ಪಲು
**ಮುಖಪುಟ :** ಸ್ವಾತಂತ್ರ್ಯ ದಿನಾಚರಣೆಯ ಸ್ಮರಣೆ,
ಮರಳು ಶಿಲ್ಪ – ಡಾ॥ ಶಿವಾನಂದ ಬಂಟನೂರು
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಯೋಗದಿವಸದ ಆಚರಣೆಯ ವೈಭವದ ನಂತರ ಅದನ್ನು ಆಯೋಜಿಸಿದ ವಿಧಾನವನ್ನು ಪರಿಶೀಲಿಸುವುದು ಅಗತ್ಯ. ಹಿಂದೊಮ್ಮೆ ಬೆಂಗಳೂರಿನಲ್ಲಿ ಕಲ್ಲಿನ ಗಣೇಶ ಹಾಲು ಕುಡಿದಿದ್ದರಿಂದ ರಾಜ್ಯದಲ್ಲೆಲ್ಲಾ ಅವನಿಗೆ ಹಾಲು ಕುಡಿಸಲು ಜನ ಓಡಿದರು ಮತ್ತು ಎಲ್ಲ ಕಡೆಯಲ್ಲೂ ಅವನು ಹಾಲು ಕುಡಿದ. ಅದರನಂತರ ಅವನಿಗೆ ಹಾಲು ಬೇಕೆನಿಸಲಿಲ್ಲ, ಜನ ಹಾಲು ಕುಡಿಸಲು ಹೋಗಲಿಲ್ಲ. ಆ ಪ್ರಸಂಗದ ಹಿಂದೆ ಒಂದು ಯೋಜನೆ ಇತ್ತು : ಈ ರೀತಿಯ ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ಕರೆ ಕೊಟ್ಟರೆ ಜನ ಎಷ್ಟು ಜಾಗ್ರತೆ ಮತ್ತು ಯಾವ ಪ್ರಮಾಣದಲ್ಲಿ ಕೂಡಲೆ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ತಿಳಿದುಕೊಳ್ಳುವುದು. ಅದನ್ನು ತಿಳಿದು ನಂತರ ರಾಜಕೀಯ ಪ್ರಣಾಲಿಕೆಗಳನ್ನು ರೂಪಿಸಿಕೊಳ್ಳುವುದು ಸಾಧ್ಯ. ಈಗಿನ ಯೋಗದಿನದ ಸಂದರ್ಭದಲ್ಲಿ ನಡೆದಿದ್ದೇನು ? ದೆಹಲಿಯ ಕೇಂದ್ರ ಸರ್ಕಾರದ ನೌಕರರಿಗೆ ಒಂದು ಆಜ್ಞೆ ನೀಡಲಾಯಿತು, ಇಂತಹ ದಿನ ಇಷ್ಟು ಗಂಟೆಗೆ ಇಂಥ ಕಡೆ ಜಮಾಯಿಸಿ ಯೋಗ ಮಾಡಬೇಕು, ಎಂದು. ಅನೌಪಚಾರಿಕವಾಗಿ ಅವರಿಗೆ ತಿಳಿಯಹೇಳಿದ್ದು, 'ನೀವು ಹಾಜರಾಗದಿದ್ದರೆ ಮುಂದೆ ನಿಮಗೆ ತೊಂದರೆಯಾಗಬಹುದು', ಎಂದು. ಸರ್ಕಾರಿ ನೌಕರರ ಪ್ರಜ್ಞೆಯ ಮಾಪನ ನಡೆಯಿತು. ಸ್ವಯಂಪ್ರೇರಣೆಯಿಂದ ಹತ್ತು ಮಂದಿ ಬಂದರೆ, ಅನೌಪಚಾರಿಕ ಎಚ್ಚರಿಕೆ ನೀಡಿದ್ದರಿಂದ ನಲವತ್ತು ಮಂದಿ ಬಂದರು. ಮೋದಿಯವರ ವೈಯ್ಯಕ್ತಿಕ ಸ್ಥಾನ ಮತ್ತು ಅವರ ಕರೆಯ ಪ್ರಭಾವ ಎರಡೂ ಸೇರಿ ರಾಜಪಥದ ಗಿನಿಸ್ ದಾಖಲೆ ಸಾಧ್ಯವಾಯಿತು. ನಮ್ಮ ರಾಜ್ಯದ ಕಾಲೇಜುಗಳಿಗೆ ನೇರವಾಗಿ ಯು.ಜಿ.ಸಿ.ಯಿಂದ (ವಿಶ್ವವಿದ್ಯಾಲಯ ಧನಸಹಾಯ ಆಯೋಗದಿಂದ) ಪತ್ರಗಳು ಬಂದಿದ್ದವು. ಯೋಗದಿನವನ್ನು ಆಚರಿಸಬೇಕೆಂಬ ಸೂಚನೆಯನ್ನು ಹೇಗೆ ಪಾಲಿಸಲಾಗುತ್ತದೆ ಎಂಬುದನ್ನು ತಿಳಿಯುವುದರಿಂದ ವಿದ್ಯಾಸಂಸ್ಥೆಗಳನ್ನು ಪ್ರತ್ಯೇಕಿಸಿ, ಅವುಗಳನ್ನು ಮಾಪನ ಮಾಡಿ, ವಿಧೇಯತೆಯ ಪರಿಮಾಣವನ್ನು ಗುರುತಿಸಬಹುದು. ಆ ಮಾಹಿತಿಯನ್ನು ಹೇಗೆ ಬಳಸಿಕೊಳ್ಳಬೇಕೆಂಬುದನ್ನು ಯು.ಜಿ.ಸಿ. ತಿಳಿಯದಿದ್ದರೂ ಬೇರೆ ಗುಪ್ತ ದಳಗಳು ತಿಳಿದುಕೊಳ್ಳುತ್ತವೆ. ಅಧಿಕಾರದಲ್ಲಿರುವವರಿಗೆ ಇಂತಹ ತಿಳಿವು ಮುಂದೆ ಆಯುಧವಾಗಬಲ್ಲದು.

ಯೋಗದಿನವನ್ನು ಚೀಣಾದಲ್ಲಿ ವ್ಯಾಪಕವಾಗಿ ಆಚರಿಸಲಾಯಿತು. ಏಕೆಂದರೆ ಅಲ್ಲಿ ಯೋಗಶಿಬಿರಗಳನ್ನು ನಡೆಸುವ "ಫ್ರಾಂಚೈಸಿ ಜಾಲ" ಬಹಳ ದೊಡ್ಡದಿದೆ. ಪ್ರಧಾನ ಸಭೆ ನಡೆದಿದ್ದು ಬೀಜಿಂಗಿನಿಂದ ದೂರದಲ್ಲಿರುವ ಊರಿನಲ್ಲಿ. ಅಲ್ಲಿಗೆ ಭಾರತದ ನಾಲ್ಕೈದು ಯೋಗ ಸಂಸ್ಥೆಗಳ ಪ್ರತಿನಿಧಿಗಳು ಹೋಗಿದ್ದರು. ಮೈಸೂರಿನ ಪಟ್ಟಾಭಿ ಜೋಯಿಸರ ಸಂಸ್ಥೆಯ ಪ್ರತಿನಿಧಿ ಅವರಲ್ಲೊಬ್ಬರು. ಸಮಾವೇಶದಲ್ಲಿ ಅವರು ಎದುರಿಸಬೇಕಾಗಿಬಂದ ಪ್ರಶ್ನೆ ಇದು : "ಪತಂಜಲಿಯ ಹಾದಿಯನ್ನು ಕೈಬಿಟ್ಟು ನೀವು ನಿಮ್ಮದೇ ಕಸರತ್ತಿನ ಯೋಗ ಹೇಳಿಕೊಡುತ್ತಿದ್ದೀರಿ ? ಅದು ಯುಕ್ತವೇ ?" ಆ ಪ್ರಶ್ನೆಯು ಮೂಲಭೂತವಾದುದು ಮತ್ತು ಅನೇಕ ಯೋಗ ಸಂಸ್ಥೆಗಳು ಅದಕ್ಕೆ ಉತ್ತರ ಕೊಟ್ಟುಕೊಳ್ಳಬೇಕು. ಆಗ ಹಾಟ್ ಯೋಗ, ಸುದರ್ಶನ ಕ್ರಿಯಾ, ಮಲ್ಲಕಂಭ ಯೋಗ, ಮುಂತಾದುವೆಲ್ಲಾ ಪತಂಜಲಿಯಿಂದ ಎಷ್ಟು ದೂರ ಸರಿದಿವೆ ಎಂಬುದು ತಿಳಿಯುತ್ತದೆ. ಯೋಗ ಸ್ಪರ್ಧೆಗಳು ಸಹ ನಡೆಯುತ್ತವೆ, ಅಲ್ಲಿ ಯೋಗಪಟುಗಳು ಕ್ಲಿಷ್ಟವಾದ ಆಸನ ಮಾಡುತ್ತಾರೆ, ಆದರೆ ಆ ಆಸನಸ್ಥಿತಿಯನ್ನು ೧೫ ಸೆಕೆಂಡುಗಳಿಗಿಂತಲೂ ಜಾಸ್ತಿ ಉಳಿಸಿಕೊಳ್ಳುವುದಿಲ್ಲ. ಮುಖವನ್ನೆಲ್ಲಾ ಕಿವುಚಿಕೊಂಡು ಆಸನ ಮಾಡಿ ಮುಗಿಸುವುದು ಪತಂಜಲಿಯ "ಸ್ಥಿರ ಸುಖಂ ಆಸನಂ" ಎಂಬುದಕ್ಕೆ ಉದಾಹರಣೆಯಾಗುವುದಿಲ್ಲ. ಮೋದಿಯವರು ಯೋಗಪಟುಗಳಾಗಿ ಮೌನಿಬಾಬಾ ಆಗಿಬಿಟ್ಟಿದ್ದಾರೆ, ಯಾವುದಕ್ಕೂ ಉತ್ತರ ಕೊಡುವುದಿಲ್ಲ, ಮಧ್ಯಪ್ರದೇಶದ ವ್ಯಾಪಂ ಸಂಬಂಧಿ ಕೊಲೆಗಳಿಂದ ವಿಚಲಿತರಾಗುವುದಿಲ್ಲ, ಜೈಲಿನಲ್ಲಿದ್ದುಕೊಂಡೇ ಸಾಕ್ಷಿಗಳನ್ನು ಕೊಲ್ಲಿಸುವ ಆಸಾರಾಂ ಬಾಪುವಿನ ಹೀನಕೃತ್ಯಗಳನ್ನು ಗಮನಿಸುವುದಿಲ್ಲ. ಅವರಿಗೆ ಅದೇ ಸಮಾಧಿ ಸ್ಥಿತಿ !

* * *

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಲ್ಸೋಡಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೭ ಸಂಚಿಕೆ-೧ ಆಗಸ್ಟ್ ೨೦೧೫

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಲ್. ಗೋಪಾಲಕೃಷ್ಣಯ್ಯ

ರಾಮಲಿಂಗಪ್ಪ ಟಿ. ಬೇಗೂರು

ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ಆರ್. ಉಡುಪ

■ ***ಮುದ್ರಕ-ಪ್ರಕಾಶಕ***

ಆರ್. ಎಸ್. ರಾಜಾರಾಮ್

ವ್ಯವಸ್ಥಾಪಕ ನಿರ್ದೇಶಕ

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ ***ಮುದ್ರಣ***

**ನವಕರ್ನಾಟಕ ಪ್ರಿಂಟರ್ಸ್**

೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ

೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ

ಬೆಂಗಳೂರು – ೫೬೦ ೦೫೮

ದೂರವಾಣಿ : ೨೮೩೯೭೪೭೬

■ ***ಹೊಸತು ಕಚೇರಿಯ ವಿಳಾಸ***



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

ದೂರವಾಣಿ: ೩೦೫೭೮೦೨೯, ೨೨೨೦೩೫೮೦

ಫ್ಯಾಕ್ಸ್: ೩೦೫೭೮೦೨೩

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**




# ಸಂಪಾದಕೀಯ

## ಕೃಷಿಕನನ್ನು ಕೃಷಿಯಿಂದ ಓಡಿಸುವ ಹುನ್ನಾರ

ರೈತರ ಸಮಸ್ಯೆ ಸಾರ್ವಜನಿಕವಾಗಿಯಾಗಲೀ, ಶಾಸನಸಭೆಗಳಲ್ಲಾಗಲೀ ಚರ್ಚೆಯಾಗಬೇಕಾದರೆ ರೈತರ ಸಾವುಗಳೇ ಆಗಬೇಕು, ಅದೂ ನೂರಾರು ಸಂಖ್ಯೆಯಲ್ಲಿ ಎಂಬ ವಾತಾವರಣ ನಿರ್ಮಾಣವಾಗಿದೆ. ಕಳೆದ ಒಂದು ತಿಂಗಳಿನಿಂದ ರೈತರ ಸಾವಿನ ಸಂಖ್ಯೆ ಏರುತ್ತಲೇ ಇದೆ. ಮೊದಲು ಕಬ್ಬು ಬೆಳೆಗಾರರ ಸಮಸ್ಯೆಯಿಂದ ಆರಂಭವಾದ ಕೃಷಿಕ್ಷೇತ್ರದ ಸದ್ಯದ ಬಿಕ್ಕಟ್ಟುಗಳು ಈಗ ರಾಜ್ಯದಾದ್ಯಂತ ಇರುವ ಎಲ್ಲ ರೀತಿಯ ಬೆಳೆಗಾರರ ಸಮಸ್ಯೆಗಳಾಗಿ ಆತ್ಮಹತ್ಯೆಯ ರೂಪದಲ್ಲಿ ಹೊರಬರುತ್ತಿವೆ. ಇವು ವ್ಯಾಪಕವಾಗಿ ಚರ್ಚೆಯಾಗುತ್ತಿರುವಂತೆ ಕೇವಲ ಸಾಲದ ಕಾರಣದಿಂದ ಮಾತ್ರ ನಡೆಯುತ್ತಿರುವ ಆತ್ಮಹತ್ಯೆಗಳಲ್ಲ. ಮಳೆ, ಬೆಳೆ, ಬೆಲೆ ಹೀಗೆ ಬೇರೆ ಬೇರೆ ಆಯಾಮಗಳು ಈ ಸಾವುಗಳ ಹಿಂದಿವೆ. ಸರಕಾರ, ವಿರೋಧ ಪಕ್ಷಗಳು ಆರೋಪ ಪ್ರತ್ಯಾರೋಪ ಮಾಡುತ್ತ ಕೇವಲ ಪರಿಹಾರದ ಕುರಿತು, ಸಾಲ ಮನ್ನಾ ಕುರಿತು ಮಾತನಾಡುತ್ತಿವೆ. ಈ ಮಧ್ಯೆ ಸರಕಾರ ಬಡ್ಡಿ ಲೇವಾದೇವಿಗಾರರನ್ನು ಬಂಧಿಸುವ ಕೆಲಸ ಆರಂಭಿಸಿದೆ. ಆತ್ಮಹತ್ಯೆ ಮಾಡಿಕೊಂಡವರಿಗೆ ಲಕ್ಷಗಳ ಲೆಕ್ಕದಲ್ಲಿ ಪರಿಹಾರ ಕುರಿತು ಮಾತನಾಡುತ್ತಿವೆ. ವಿರೋಧ ಪಕ್ಷಗಳು 'ಸಹಾಯವಾಣಿ' ಆರಂಭಿಸುವ ಕಸರತ್ತು ನಡೆಸಿ ಆಳುವ ಪಕ್ಷದ ನಿಷ್ಕ್ರಿಯತೆಯನ್ನು ಖಂಡಿಸುತ್ತಿವೆ. ರೈತ ಸಂಘಗಳು ಸಾಂಪ್ರದಾಯಿಕವಾಗಿ ಖಂಡನೆ, ಮಂಡನೆ, ಪ್ರತಿಭಟನೆಯಲ್ಲಿ ನಿರತವಾಗಿವೆ. ಇದೆಲ್ಲದರ ಮಧ್ಯೆಯೂ ಪ್ರತಿನಿತ್ಯ ಆತ್ಮಹತ್ಯೆಯ ವರದಿ, ಸಾವಿನ ಸಂಖ್ಯೆ ಏರುತ್ತಲೇ ಇದೆ.

ಆಳುವ ಪಕ್ಷ ಮತ್ತು ವಿರೋಧ ಪಕ್ಷಗಳು ಪರಸ್ಪರ ಕಾಲೆಳೆಯುವ ರಾಜಕಾರಣವನ್ನು ಬದಿಗಿಟ್ಟು, ಇನ್ನೊಬ್ಬರ ಮೇಲೆ ಆರೋಪ ಹೊರಿಸಿ ಸಾವಿನ ಮನೆಯಲ್ಲಿಯೂ ರಾಜಕೀಯ ಮಾಡುವ ತಮ್ಮ ನೀಚ ಪರಂಪರೆಯನ್ನು ಕೈಬಿಟ್ಟು ರೈತರ ಆತ್ಮಹತ್ಯೆಗಳ ವರ್ಷವಾರು ಅಂಕಿ ಸಂಖ್ಯೆಗಳ ಕುರಿತು ಸ್ವಲ್ಪ ಗಮನ ಹರಿಸಿದರೆ ಸಮಸ್ಯೆ ಅರಿವಿಗೆ ಬರುತ್ತದೆ. ೨೦೦೦ದಿಂದ ಇಂದಿನವರೆಗೆ ಕೇವಲ ಒಂದೂವರೆ ದಶಕದಲ್ಲಿ ಆತ್ಮಹತ್ಯೆ ಮಾಡಿಕೊಂಡ ರೈತರ ಸಂಖ್ಯೆ ೫೦೦೦ವನ್ನು ದಾಟುತ್ತದೆ. ಈ ಒಂದೂವರೆ ದಶಕದ ಅವಧಿಯಲ್ಲಿ ರಾಜ್ಯದಲ್ಲಿ ಈಗಿನ ಆಳುವ ಪಕ್ಷವಾದ ಕಾಂಗ್ರೆಸ್, ವಿರೋಧ ಪಕ್ಷಗಳಾದ ಜೆ.ಡಿ.ಎಸ್., ಬಿ.ಜೆ.ಪಿ. ಎಲ್ಲರೂ ಆಡಳಿತ ಮಾಡಿದ್ದಾರೆ. ಆದರೆ ಯಾರೂ ಸುಸ್ಥಿರ ಕೃಷಿನೀತಿ, ವೈಜ್ಞಾನಿಕ ಬೆಲೆ, ಕೃಷಿಕ್ಷೇತ್ರದ ಮಾಫಿಯಾಗಳಾದ ಬೀಜ, ರಸಗೊಬ್ಬರ, ರಾಸಾಯನಿಕ ಕಂಪನಿಗಳ ಕುರಿತು ನಿರ್ದಿಷ್ಟವಾದ ಕ್ರಮಗಳನ್ನು ಕೈಗೊಂಡಿಲ್ಲ. ಎಲ್ಲರೂ ಬೆಂಬಲ ಬೆಲೆ ಕುರಿತು ಮಾತನಾಡುತ್ತಾರೆ, ವೈಜ್ಞಾನಿಕ ಬೆಲೆ ಕುರಿತು ಮಾತನಾಡುವುದಿಲ್ಲ. ಬೆಳಗಾವಿಯ ಅಧಿವೇಶನದಲ್ಲಿ ನಡೆದ ಕಬ್ಬು ಬೆಳೆಗಾರರ ಸಮಸ್ಯೆಯನ್ನೇ ಗಮನಿಸಿದರೆ ಇದು ಇನ್ನೂ ಸ್ಪಷ್ಟವಾಗುತ್ತದೆ. ಕಬ್ಬು ಬೆಳೆಗಾರರ ಸಮಸ್ಯೆಗಳಿಗೆ ಸಕ್ಕರೆ ಕಾರ್ಖಾನೆಗಳೂ ಕಾರಣವಾಗಿವೆ. ಬಹುತೇಕ ಕಾರ್ಖಾನೆಗಳ ಮಾಲೀಕರಲ್ಲಿ, ಆಡಳಿತ ಮಂಡಲಿಯಲ್ಲಿ ರಾಜ್ಯದ ಮೂರೂ ಪ್ರಮುಖ ರಾಜಕೀಯ ಪಕ್ಷಗಳ ಮಂತ್ರಿಗಳೂ, ಶಾಸಕರೂ, ಮುಖಂಡರೂ ಇದ್ದಾರೆ. ಖಾಸಗಿ ಲೇವಾದೇವಿಗಾರರನ್ನು ಬಂಧಿಸುವ ಸರಕಾರ ವಿಧಾನಸೌಧದೊಳಗೇ ಈ 'ಸಕ್ಕರೆ ರೋಗ'ಕ್ಕೆ ಕಾರಣರಾದವರಿದ್ದಾಗಲೂ ಮೌನವಾಗುತ್ತದೆ. ಆಡಳಿತ ಪಕ್ಷದವರೂ, ವಿರೋಧ ಪಕ್ಷದವರೂ ಆ ಕುರಿತು ಮಾತನಾಡುವುದಿಲ್ಲ. ಆದರೆ ಮಾಧ್ಯಮಗಳ ಮುಂದೆ ರೈತರ ಆತ್ಮಹತ್ಯೆಗೆ ಬಕೆಟುಗಟ್ಟಲೆ ಕಣ್ಣೀರು ಸುರಿಸುತ್ತಾರೆ, ಸದನ ಸಮಿತಿ ನೇಮಕಕ್ಕೆ ಆಗ್ರಹಿಸುತ್ತಾರೆ.

ಈ ಹಿಂದೆ ಕೃಷಿ ತಜ್ಞ ಡಾ॥ ವೀರೇಶ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ಮಾಡಿ ರೈತರ ಆತ್ಮಹತ್ಯೆಗಳಿಗೆ ಕಾರಣ ಕಂಡುಹಿಡಿಯಲು ಹೇಳಿದರೆ ಆ ತಜ್ಞ ಪರಿಹಾರ ರೂಪದಲ್ಲಿ ದೊರೆವ ಲಕ್ಷ ರೂಪಾಯಿಗಳ ಆಸೆಗಾಗಿ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆಂದು ಹೇಳಿದ. ಅದು ವಿವಾದಕ್ಕೂ ಕಾರಣವಾಯಿತು. ಅದೇ ಸಮಿತಿ ರೈತರು ಕೇವಲ ಕೃಷಿಗಾಗಿ ಸಾಲ ಮಾಡುವುದಿಲ್ಲ, ಮದುವೆ, ಮನೆ, ಮಕ್ಕಳ ವಿದ್ಯಾಭ್ಯಾಸ ಹೀಗೆ ವಿವಿಧ ಕಾರಣಗಳಿಗೆ ಸಾಲ ಮಾಡುತ್ತಾರೆಂದೂ ಹೇಳಿತು. ಇತ್ತೀಚೆಗೆ ಬಂದ ಎನ್.ಸಿ.ಆರ್.ಬಿ. ಸಮೀಕ್ಷೆಯೂ ಅದನ್ನೇ ಹೇಳಿದೆ. ಇದರರ್ಥ ಕೃಷಿಯನ್ನು ನಂಬಿದ ನಮ್ಮ ರೈತರು ತಮ್ಮ ಮಕ್ಕಳ ವಿದ್ಯಾಭ್ಯಾಸ, ಮದುವೆ, ಕುಟುಂಬದ ಕನಿಷ್ಠ ಆರೋಗ್ಯ, ಮೂಲಭೂತ ಅವಶ್ಯಕತೆಗಳನ್ನೂ ಪೂರೈಸಿಕೊಳ್ಳಲಾಗದ ಸ್ಥಿತಿಯಲ್ಲಿ ಇದ್ದಾರೆ, ಅವು ದೊರೆಯದಿದ್ದರೆ ಅದನ್ನು ಕೃಷಿಕ್ಷೇತ್ರದ ಸಮಸ್ಯೆ ಅಲ್ಲ ಎಂದು ಹೇಳಲಾಗುತ್ತದೆಯೆ ? ಅಂಥ ಕಾರಣಗಳಿಗಾಗಿಯೇ ಸಮಸ್ಯೆಗೊಳಗಾಗಿ ಆತ್ಮಹತ್ಯೆಗೆ ಶರಣಾಗುವ ರೈತ ಪರಿಹಾರಕ್ಕೆ ಅಯೋಗ್ಯನೇ ? ಬ್ಯಾಂಕ್ ಸಾಲವನ್ನೂ ಮಾಡದೆ, ಲೇವಾದೇವಿಗಾರರ ಹತ್ತಿರ ಹೆಚ್ಚಿನ ಬಡ್ಡಿಗೆ ಹಣವನ್ನೂ ಪಡೆಯದೆ, ತನ್ನಲ್ಲಿರುವ ಬಂಡವಾಳವನ್ನೇ ಹಾಕಿ, ಕೈಬರಿದು ಮಾಡಿಕೊಂಡು ಬಿತ್ತನೆ ಮಾಡಿ, ಬೀಜ, ಗೊಬ್ಬರ, ರಾಸಾಯನಿಕಗಳ ವ್ಯಾಪಾರಿಗಳ ಮೋಸದಿಂದ ಹಾನಿಗೊಳಗಾದ ರೈತರು, ಬಿತ್ತಿದ ಬೀಜ ನೆಲ ಬಿಟ್ಟು ಏಳದೆ ಕಂಗಾಲಾದ ರೈತರು, ಅರ್ಧ ಬೆಳೆದ ಬೆಳೆ ಮಳೆಯಿಲ್ಲದೆ ಒಣಗಿ ನಿಂತಾಗ ನಿರಾಶರಾದ ರೈತರು, ಬೆಳೆದ ಬೆಳೆಗೆ ಬೆಲೆಯಿಲ್ಲದೆ ದಿಕ್ಕೇ ತೋಚದಾದ ರೈತರು ಬೇರೆ ದಾರಿ ಕಾಣದೆ ಆತ್ಮಹತ್ಯೆ ಮಾಡಿಕೊಂಡಾಗ ಅದು ಕೃಷಿ ಬಿಕ್ಕಟ್ಟಿನ ವ್ಯಾಪ್ತಿಗೆ ಬರುವುದಿಲ್ಲವೆ ? ಇಂಥ ಬಿಕ್ಕಟ್ಟುಗಳಿಗೆ ಸರಕಾರಗಳು, ಜನ ಪ್ರತಿನಿಧಿಗಳೂ ರೈತರ ಆತ್ಮಹತ್ಯೆಗಳಾದಾಗ

ಮೊಸಳೆ ಕಣ್ಣೀರು ಸುರಿಸುವುದನ್ನು ಬಿಟ್ಟು ಶಾಶ್ವತ ಪರಿಹಾರಗಳನ್ನು ಕಂಡುಕೊಳ್ಳಲು ವಿಫಲವಾಗಿವೆ. ಈಗಾಗಲೇ ಪ್ರತಿಶತ ಐವತ್ತಕ್ಕಿಂತ ಹೆಚ್ಚು ಜನ ಕೃಷಿಕ್ಷೇತ್ರದಿಂದ ದೂರವಾಗಿದ್ದಾರೆ. ೧೯೯೦–೯೧ರಲ್ಲಿ ದೇಶದ ಒಟ್ಟು ಆದಾಯದಲ್ಲಿ (ಜಿ.ಡಿ.ಪಿ.) ಶೇ. ೨೩.೩೦ ಇದ್ದ ಕೃಷಿಕ್ಷೇತ್ರದ ಪಾಲು ೨೦೧೩–೧೪ರಲ್ಲಿ ಶೇ. ೧೩.೯೦ಕ್ಕಿಳಿದಿದೆ. ಇದರರ್ಥ ನಮ್ಮ ದೇಶ ಕೃಷಿ ವ್ಯವಸ್ಥೆಯ ಅಭಿವೃದ್ಧಿಯನ್ನು ನಿರ್ಲಕ್ಷಿಸಿದೆ ಎಂದು. ಈ ನಿರ್ಲಕ್ಷ್ಯ ಉದ್ದೇಶಪೂರ್ವಕವಾಗಿಯೇ ನಡೆದಿದೆ ಎಂಬ ಅನುಮಾನಗಳು ಗಟ್ಟಿಗೊಳ್ಳುತ್ತಿವೆ. ಕೃಷಿಯನ್ನೂ ಒಳಗೊಂಡು ಬಹುತೇಕ ಕ್ಷೇತ್ರಗಳಲ್ಲಿ ಕಾರ್ಪೊರೇಟ್ ವಲಯವನ್ನು ಸ್ವಾಗತಿಸುತ್ತಿರುವ ಸರಕಾರಗಳು ಅವುಗಳಿಗೆ ಭೂಮಿಯನ್ನು ಒದಗಿಸಲು ಸ್ಪರ್ಧೆಯನ್ನೇ ನಡೆಸಿವೆ. ಅದಕ್ಕಾಗಿ ಕೇಂದ್ರದ ಮೋದಿ ಸರಕಾರ ರೈತನ ಒಪ್ಪಿಗೆ ಪಡೆಯದೆ ಅವನ ಭೂಮಿ ಕಬಳಿಸಲು ಭೂಸ್ವಾಧೀನ ಕಾಯ್ದೆಯ ಹೆಸರಿನಲ್ಲಿ ಮುಂದಾಗಿದೆ. ಕೃಷಿ ತನ್ನ ಬದುಕಿಗೆ ಪೂರಕವಾಗಿಲ್ಲ ಎಂದು ಸ್ವತಃ ರೈತನೇ ಭೂಮಿಬಿಟ್ಟು ಓಡಿಹೋಗುವಂತೆ ಮಾಡುವ ಹುನ್ನಾರ ಈ ಕೃಷಿಕ್ಷೇತ್ರವನ್ನು ಮತ್ತು ಕೃಷಿಕರನ್ನು ನಿರ್ಲಕ್ಷಿಸುವ ನೀತಿಯ ಹಿಂದಿದೆ.

ಸರಕಾರಗಳೇನೋ ಕಾರ್ಪೊರೇಟ್ ಕಂಪನಿಯ ಪರವಾಗಿವೆ, ಆದರೆ ರೈತ ಸಂಘಟನೆ, ರೈತ ಚಳುವಳಿಗಳಿಗೆ ಏನಾಗಿದೆ ? ಯಾವುದೇ ಮನುಷ್ಯ ಆತ್ಮಹತ್ಯೆ ಮಾಡಿಕೊಳ್ಳಬೇಕಾದರೆ ಯಾವುದೇ ದಾರಿ ಕಾಣದ ಹತಾಶೆ, ನನಗಾಗಿ ಯಾರೂ ಇಲ್ಲ, ನಮ್ಮ ಸಾವಿರಾರು ದೇವರುಗಳೂ ಇಲ್ಲ ಎಂಬ ಅನಾಥಪ್ರಜ್ಞೆಗೊಳಗಾಗುತ್ತಾನೆ. ಅಂಥ ಸಂದರ್ಭದಲ್ಲಿ ರೈತ ಸಂಘಟನೆಗಳು, ರೈತ ಚಳುವಳಿಗಳು ಅವನಿಗೆ ಆಧಾರಸ್ತಂಭಗಳಾಗಬೇಕು. ಎಂಥ ಸಂದರ್ಭವನ್ನೂ ಎದುರಿಸಿ ನಿಲ್ಲುವ ಛಲ ತುಂಬಬೇಕು. ಆದರೆ ನಾಯಕನಿಗೊಂದು, ಜಾತಿಗೊಂದು, ಪಕ್ಷಕ್ಕೊಂದು ರೈತ ಸಂಘಗಳಾಗಿ ಅವು ತಮ್ಮ ಅಸ್ತಿತ್ವಕ್ಕಾಗಿ ಪರದಾಡುವ ಸ್ಥಿತಿಯಲ್ಲಿವೆ. ಸರಕಾರಗಳು ಖಂಡಿತ ರೈತನ, ಕೃಷಿಕ್ಷೇತ್ರದ ಪರವಾಗಿಲ್ಲ. ಅವರೆಲ್ಲ ಕಾರ್ಪೊರೇಟ್ ಕಂಪನಿಗಳ ಪರವಾಗಿದ್ದಾರೆ. ದೇಶದ ಸಾಂಪ್ರದಾಯಿಕ ಕೃಷಿ ವ್ಯವಸ್ಥೆ ನಾಶವಾಗಿ ಆ ಸ್ಥಳದಲ್ಲಿ ಕಾರ್ಪೊರೇಟ್ ಕೃಷಿ ವ್ಯವಸ್ಥೆಗೆ ಪೂರಕವಾದ ಸ್ಥಿತಿ ನಿರ್ಮಿಸಲು ಕಾತರರಾಗಿದ್ದಾರೆ. ಇಂಥ ಸಂದರ್ಭದಲ್ಲಿ ಕೃಷಿ, ಕೃಷಿಕ್ಷೇತ್ರವನ್ನು ಕಾಪಾಡುವ, ಬೆಳೆಸುವ, ಲಾಭದಾಯಕವನ್ನಾಗಿಸಿಕೊಳ್ಳುವ ಕೆಲಸವನ್ನು ಸ್ವತಃ ರೈತರೇ ಮಾಡಿಕೊಳ್ಳಬೇಕಾಗಿದೆ, ಅದು ಸಂಘಟಿತರಾಗುವ ಮೂಲಕ. ಯಾವ ದೇವರೂ, ನಾಯಕರೂ, ಜಾತಿಯೂ, ಧರ್ಮವೂ, ಸರಕಾರವೂ ದಿವಾಳಿಯಾದ ರೈತನನ್ನು ಕಾಪಾಡುವುದಿಲ್ಲ, ಅವನ ಸಮಸ್ಯೆಗಳಿಗೆ ಪರಿಹಾರ ಕಂಡುಕೊಂಡು ಕೃಷಿಕ ಮತ್ತು ಕೃಷಿಕ್ಷೇತ್ರದ ಅಭಿವೃದ್ಧಿಗೆ ನಿಲ್ಲುವುದಿಲ್ಲ ಎಂಬ ಸತ್ಯವನ್ನು ಮನಗಾಣಬೇಕು. ಈ ಹಿನ್ನೆಲೆಯಲ್ಲಿ ಕೇವಲ ರೈತರು ಮಾತ್ರವಲ್ಲ, ಸಮಾಜದ ಹಲವಾರು ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ರೈತ ಮಕ್ಕಳು, ರೈತ ಪರವಾದ ಮನಸುಗಳು ಈಗ ರೈತರ ನೆರವಿಗೆ ಧಾವಿಸಬೇಕಿದೆ. ಕೃಷಿಯನ್ನೂ, ಕೃಷಿಕನನ್ನೂ ಉಳಿಸಿ – ಬೆಳೆಸುವ ಮಾರ್ಗಗಳನ್ನು ಕಂಡುಕೊಳ್ಳಬೇಕಿದೆ.

## ಭ್ರಷ್ಟಾಚಾರದ ವಿರುದ್ಧ ಸಮರಕ್ಕೆ ಪಣ ತೊಡೋಣ

ಕಳೆದ ವರ್ಷ ಸ್ವಾತಂತ್ರ್ಯ ದಿನದಂದು ಪ್ರಧಾನಿ ನರೇಂದ್ರ ಮೋದಿ ದೆಹಲಿಯ ಕೆಂಪುಕೋಟೆ ಮೆಟ್ಟಿಲೇರಿ 'ಭಾರತದಲ್ಲೇ ತಯಾರಿಸಿ' ಎಂಬ ಘೋಷಣೆ ನೀಡಿ ವಿದೇಶೀ ಬಂಡವಾಳಗಾರರಿಗೆ ಆಮಂತ್ರಣ ನೀಡಿದರು. ಇದು ದೇಶವನ್ನು ಪರಾವಲಂಬನೆಗೆ ದೂಡುವಂಥದ್ದು. ಈ ವರ್ಷ ಯಾವ ಘೋಷಣೆ ಮಾಡುತ್ತಾರೋ ನೋಡೋಣ. ಏಕೆಂದರೆ ಈತ ಆಕರ್ಷಕ ಪದಗುಚ್ಛಗಳನ್ನು ನೀಡುವುದರಲ್ಲಿ ನಿಸ್ಸೀಮ. ಒಳ್ಳೆ ಆಡಳಿತದ ಭರವಸೆ ನೀಡಿದ ಈತ ಜನರಲ್ಲಿ 'ಅಚ್ಛೇ ದಿನ್' ಕನಸು ಮೂಡಿಸಿದವ. ಒಂದು ವರ್ಷದಲ್ಲೇ ಮೋದಿ ಎಂಥಾ ಬುರುಡೆ ಆಸಾಮಿ ಎಂಬುದು ಸಾಬೀತಾಗಿದೆ. ಚುನಾವಣೆ ಕಾಲದಲ್ಲಿ ನೀಡಿದ್ದ ಭರವಸೆಗಳೆಲ್ಲ ಗಾಳಿಪಟವಾಗಿದೆ. ಬೇಕಾದಾಗ 'ಮನ ಬಿಚ್ಚಿ' ಮಾತನಾಡುವ, ಹಾವಭಾವಗಳಿಂದ ಜನರನ್ನು ಮರಳುಗೊಳಿಸುವ ಈತ ಇರಸು ಮುರುಸಾದಾಗ ಮೌನಿ.

ಭ್ರಷ್ಟಾಚಾರ ಮುಕ್ತ ಭಾರತದ ಆಶ್ವಾಸನೆ ನೀಡಿದ್ದ ಭಾಜಪ ಈಗ ಅದರಲ್ಲೇ ಮುಳುಗಿರುವುದು ಹೊಸ ವಿಷಯವೇನಲ್ಲ. ಮಧ್ಯಪ್ರದೇಶದ ವ್ಯಾಪಂ ಹಗರಣ ಎಳೆ ಎಳೆಯಾಗಿ ಬಿಚ್ಚಿಕೊಳ್ಳುತ್ತಿದೆ. ಕರ್ನಾಟಕದ ಜನರಿಗೆ ಭಾಜಪ ಆಡಳಿತದ ವೈಖರಿ ಚೆನ್ನಾಗಿ ಪರಿಚಯವಿದೆ. ಭಾರತ ಸ್ವಾತಂತ್ರ್ಯಗೊಂಡು ಅರವತ್ತೆಂಟು ವರ್ಷಗಳು ಕಳೆದಿವೆ. ಈ ಸಂದರ್ಭದಲ್ಲಿ ಹಿಂದಿರುಗಿ ನೋಡಿದಾಗ ನಿರೀಕ್ಷಿತ ಮಟ್ಟದಲ್ಲಿ ಪ್ರಗತಿಯಾಗಿಲ್ಲ ಎಂಬುದು ಸ್ಪಷ್ಟವಾಗಿದೆ. ಸ್ವಾತಂತ್ರ್ಯಾನಂತರ ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿದಾಗ ಆರ್ಥಿಕವಾಗಿ ಸ್ವಾವಲಂಬನೆ ಸಾಧಿಸುವ ಗುರಿಯಿಂದ ಸ್ಥಾಪಿತವಾದ ಉದ್ಯಮಗಳು ಹಿಂದೆ ಸರಿದು ಈಗ ವಿದೇಶೀ ಬಂಡವಾಳಕ್ಕೆ ನಡೆಮುಡಿ ಕಟ್ಟಿ ಮಣಿಯಲು ಸಿದ್ಧವಾಗಿದ್ದೇವೆ. ಇದು ಮತ್ತೊಮ್ಮೆ ದೇಶವನ್ನು ವಿದೇಶೀ ಬಂಡವಾಳಗಾರರ ನಿಯಂತ್ರಣಕ್ಕೆ ಒಡ್ಡಿದಂತಾಗುತ್ತದೆ. ಇಷ್ಟು ವರ್ಷಗಳಲ್ಲಿ ಕಾರ್ಪೊರೇಟ್ ವಲಯ ಭಾರತದಲ್ಲಿ ಬೃಹದಾಕಾರವಾಗಿ ಬೆಳೆದಿದ್ದರೂ, ಅನ್ಯದೇಶಗಳಲ್ಲಿ ಬಂಡವಾಳ ಹೂಡುವ ಸ್ಥಿತಿಯಲ್ಲಿದ್ದರೂ, ವಿದೇಶೀ ಬಂಡವಾಳದ ವ್ಯಾಮೋಹ ಏಕೆ ಎಂಬ ಪ್ರಶ್ನೆ ಕಾಡುತ್ತದೆ. ಈ ವಿದ್ಯಮಾನಗಳನ್ನು ಗಮನಿಸಿದರೆ ಮುಂದೆ ಏನಾದೀತು ಎಂಬುದನ್ನು ಊಹಿಸಬಹುದಾಗಿದೆ. ಈಗಾಗಲೇ ಒಂದು ಕಡೆ ಅಪಾರವಾದ ಶ್ರೀಮಂತಿಕೆ, ಇನ್ನೊಂದು ಕಡೆ ಕಡುಬಡತನ ಎದ್ದುಕಾಣುತ್ತಿದೆ. ಇದು ಹಾಗೆಯೇ ಮುಂದುವರಿಯುವುದಂತೂ ಖಚಿತ.



ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪–೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪–೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧–೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨–೨೨೪೩೦೨

ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಅಗಾಧವಾಗಿ ಬೆಳೆದಿರುವ, ಜನಜೀವನವನ್ನು ಆತಂಕಕ್ಕೀಡುಮಾಡಿರುವ ಒಂದು ಸಂಗತಿ ಎಂದರೆ ಎಲ್ಲೆಲ್ಲೂ ವ್ಯಾಪಕವಾಗಿ ಹರಡಿರುವ ಭ್ರಷ್ಟಾಚಾರ. ಲಂಚ ನೀಡದೆ ಹುಲ್ಲುಕಡ್ಡಿಯೂ ಚಲಿಸದು ಎಂಬಂತಾಗಿದೆ ಬದುಕು. ಸರಕಾರ ರೂಪಿಸುವ ಯೋಜನೆಗಳು, ಅದಕ್ಕಾಗಿ ವಿನಿಯೋಗಿಸುವ ಹಣದಲ್ಲಿ ಕಾಲುಭಾಗ ಕಾರ್ಯಗತವಾದರೂ ಎಷ್ಟೋ ಪ್ರಗತಿ ಸಾಧಿಸಬಹುದು. ಈಗ ಅದಕ್ಕೂ ಸಂಚಕಾರ ಆಗುತ್ತಿದೆ. ಸರಕಾರದ ಹಣ ಲಪಟಾಯಿಸುವುದು ಹಕ್ಕು ಎನ್ನುವಂತಾಗಿದೆ ಕೆಲವರಿಗೆ. ಅದರಲ್ಲೂ ರಾಜಕಾರಣಿಗಳಿಗೆ ಹಾಗೂ ಅಧಿಕಾರಿಗಳಿಗೆ. ಇದು ಹಾಗೇ ಮುಂದುವರಿದರೆ ಪ್ರಜಾಪ್ರಭುತ್ವಕ್ಕೇ ಆತಂಕಕಾರಿ. ಇದನ್ನು ಮೆಟ್ಟಿ, ಇದರ ವಿರುದ್ಧ ಹೋರಾಟ ನಡೆಸಲು ಜನಾಂದೋಳನವೊಂದೇ ಮಾರ್ಗ. ಭ್ರಷ್ಟಾಚಾರದ ವಿರುದ್ಧ ಹೋರಾಟಗಳು ಅಲ್ಲಲ್ಲಿ ನಡೆಯುತ್ತಿದ್ದರೂ ಅದನ್ನು ಇನ್ನಷ್ಟು ತೀವ್ರಗೊಳಿಸುವುದು ಅಗತ್ಯ.

ಈಚೆಗೆ ಭ್ರಷ್ಟಾಚಾರದ ನಿಯಂತ್ರಣಕ್ಕಾಗಿ ಸ್ಥಾಪಿತವಾಗಿರುವ ಲೋಕಾಯುಕ್ತ ಸಂಸ್ಥೆಗಳೇ ಆರೋಪಕ್ಕೆ ಗುರಿಯಾಗುತ್ತಿರುವುದು ಕಳವಳಕಾರಿ ಸಂಗತಿ. ತನಿಖೆ ನಡೆಸಲು ನೇಮಕವಾಗಿರುವ ಈ ಸಂಸ್ಥೆಯ ಅಧಿಕಾರಿಗಳೇ ಭ್ರಷ್ಟರಾದರೆ ಬೇಲಿಯೇ ಎದ್ದು ಹೊಲ ಮೇಯ್ದಂತಾಗುತ್ತದೆ. ಪೊಲೀಸು ವ್ಯವಸ್ಥೆಯಲ್ಲಿ, ನ್ಯಾಯಾಂಗದಲ್ಲಿ ಜನ ವಿಶ್ವಾಸವನ್ನು ಕಳೆದುಕೊಳ್ಳುತ್ತಿರುವುದರಲ್ಲಿ ಆಶ್ಚರ್ಯವೇನಿಲ್ಲ. ಕರ್ನಾಟಕದಲ್ಲಿ ಲೋಕಾಯುಕ್ತರಾಗಿರುವ ನ್ಯಾಯಮೂರ್ತಿ ವೈ. ಭಾಸ್ಕರ ರಾವ್ ಗಂಭೀರವಾದ ಆರೋಪವನ್ನು ಎದುರಿಸುತ್ತಿದ್ದಾರೆ. ಅವರ ಪುತ್ರ ಅಶ್ವಿನ್ ರಾವ್ ಭ್ರಷ್ಟಾಚಾರದಲ್ಲಿ ನಿರತನಾಗಿದ್ದ ಎಂಬ ಆರೋಪವಿದೆ. ಈತ ಲೋಕಾಯುಕ್ತರ ಕಚೇರಿಯನ್ನೇ ಅವ್ಯವಹಾರಗಳಿಗೆ ಉಪಯೋಗಿಸುತ್ತಿದ್ದ. ಇಂಥ ಪರಿಸ್ಥಿತಿಯಲ್ಲಿ ನ್ಯಾಯಮೂರ್ತಿಗಳು ರಾಜೀನಾಮೆ ನೀಡಿ ಮುಕ್ತವಾದ ತನಿಖೆಗೆ ಅವಕಾಶ ಮಾಡಿಕೊಡುವುದಕ್ಕೆ ಬದಲಾಗಿ ಕುರ್ಚಿಗೆ ಅಂಟಿಕೊಂಡಿರುವುದು ಕಳವಳ ಉಂಟುಮಾಡುವ ಸಂಗತಿ. ಹಲವು ಸಂಘಟನೆಗಳು ಲೋಕಾಯುಕ್ತರ ರಾಜೀನಾಮೆಗೆ ಒತ್ತಾಯಿಸಿ ಪ್ರದರ್ಶನಗಳನ್ನು ನಡೆಸುತ್ತಿದ್ದರೂ ಅವರು ನಿರಾಕರಿಸುತ್ತಿದ್ದಾರೆ. ಹಾಗಿರುವಾಗ ಜನರಲ್ಲಿ ನಂಬಿಕೆ ಹೇಗೆ ತಾನೆ ಉಳಿದೀತು ? ಸರಕಾರ ಈ ವಿಷಯದಲ್ಲಿ ಕೈಕಟ್ಟಿ ಕುಳಿತಿರುವುದು ಖಂಡನೀಯ. ಸರಕಾರ ಕೂಡಲೇ ಎಚ್ಚೆತ್ತು ಇಡೀ ಪ್ರಕರಣವನ್ನು ಕುರಿತು ತನಿಖೆ ನಡೆಸಲು ಸ್ವತಂತ್ರ ಏಜನ್ಸಿಯೊಂದಕ್ಕೆ ವಹಿಸುವುದು ಅಗತ್ಯ. ಲೋಕಾಯುಕ್ತದಲ್ಲಿ ಜನರ ವಿಶ್ವಾಸವನ್ನು ಕಾಪಾಡಲು ಈಗಿರುವ ಲೋಕಾಯುಕ್ತರು ಕೂಡಲೇ ತಮ್ಮ ಹುದ್ದೆಗೆ ರಾಜೀನಾಮೆ ನೀಡಬೇಕೆಂದು ಒತ್ತಾಯಿಸೋಣ. ಅದಕ್ಕಾಗಿ ವಿಶಾಲವಾದ ತಳಹದಿಯ ಮೇಲೆ ಚಳವಳಿಯನ್ನು ನಡೆಸುವುದು ಅಗತ್ಯವಿದೆ.

ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ದೇಶದ ಪ್ರತಿ ನಾಗರಿಕನೂ ಭ್ರಷ್ಟಾಚಾರದ ವಿರುದ್ಧ ಹೋರಾಡಲು ಪಣ ತೊಡಗಬೇಕಾಗಿದೆ. ಸರಕಾರದ ಕ್ರಮಗಳನ್ನೇ ನಂಬಿಕೊಂಡಿದ್ದರೆ ಸಾಲದು. ಇದರ ವಿರುದ್ಧವಾಗಿ ಪ್ರಬಲವಾದ ಜನಾಂದೋಳನವನ್ನು ಸಂಘಟಿಸಬೇಕು.

---

*(ಈ ತಿಂಗಳು : ೩ನೇ ಪುಟದಿಂದ)*

ವ್ಯಾಪಂ ಹಗರಣದ ಸಂದರ್ಭದಲ್ಲಿ ಮಧ್ಯಪ್ರದೇಶ ಮುಖ್ಯಮಂತ್ರಿ ಚೌಹಾಣರು ಶಾಸನಸಭೆಗೆ ತಪ್ಪು ಮಾಹಿತಿ ಕೊಡುತ್ತಾ ಬಂದಿದ್ದಾರೆಂದು ದಾಖಲೆ ಸಮೇತ 'ದಿ ಹಿಂದು' ಪತ್ರಿಕೆ ಸಾಬೀತುಗೊಳಿಸಿದೆ. ಈಗ ಎಲ್ಲೆಲ್ಲೂ ವ್ಯಾಪಂ ವ್ಯಾಪಿಸಿದೆ, ಹೊರಗೆ ಬರದೆ ಉಳಿದ ಇನ್ನೆಷ್ಟು ವ್ಯಾಪಂಗಳು ಯಾವಾವ ರಾಜ್ಯಗಳಲ್ಲಿವೆ ಎಂಬುದನ್ನು ಊಹಿಸಿಕೊಳ್ಳಬೇಕು. ವೆಂಕಟೇಶ್ವರನ ತಿರುಪತಿ, ತಿರುವನಂತಪುರದ ಪದ್ಮನಾಭ, ಶಿರ್ಡಿಯ ಸಾಯಿಬಾಬ, ಎಲ್ಲೆಲ್ಲೂ ಇರುವ ಅಯ್ಯಪ್ಪ, ಅಯೋಧ್ಯೆಯ ರಾಮಲಲ್ಲಾ, ಅಜ್ಮೀರಿನ ದರ್ಗಾ, ಬೆಂಗಳೂರಿನ ಶಿಶು ಜೀಸಸ್ ಚರ್ಚು, ಎಲ್ಲ ಮತಧರ್ಮಗಳ ಸಾವಿರಾರು ಮಠಗಳು, ಮುಂತಾದೆಡೆ ಶೇಖರಣೆಯಾಗಿರುವ ಹಣವನ್ನು ಹೊರತೆಗೆದು ನಮ್ಮ ದೇಶದಲ್ಲಿ ನೂರು ಉನ್ನತ ಮಟ್ಟದ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸಬಹುದು, ಅತಿಕಡಿಮೆ ಶುಲ್ಕ ವಿಧಿಸಿ ವಿದ್ಯಾರ್ಥಿಗಳಿಗೆ ಬೋಧನೆ ಮಾಡಬಹುದು, ದೇಶಕ್ಕೆ ಬೇಕಾದಷ್ಟು ವೈದ್ಯರನ್ನು ಅಣಿಗೊಳಿಸಬಹುದು. ಅಂತೆಯೇ, 'ಮೇಕ್ ಇನ್ ಇಂಡಿಯ' ಬದಲು "ಮೇಡ್ ಇನ್ ಇಂಡಿಯ, ಮೇಡ್ ಫಾರ್ ಇಂಡಿಯ" ಯೋಜನೆಗಳನ್ನು ಅನುಷ್ಠಾನಕ್ಕೆ ತಂದರೆ ಸಾವಿರಾರು ಉದ್ಯೋಗಗಳು ಸೃಷ್ಟಿಯಾಗುತ್ತವೆ. ಇವೆಲ್ಲಾ ವ್ಯಾಪಂ ಹಗರಣಗಳು ತಲೆಯೆತ್ತದಂತೆ ಮಾಡಲು ಇರುವ ಏಕೈಕ ಮಾರ್ಗ. ೭೦೦ ಮಂದಿಗೆ ಪ್ರವೇಶಾವಕಾಶ ವಿರುವಾಗ ೫೦,೦೦೦ ಅಭ್ಯರ್ಥಿಗಳು ವೈದ್ಯಕೀಯ ಶಿಕ್ಷಣ ಪಡೆಯಲು ಮಧ್ಯಪ್ರದೇಶದಲ್ಲಿ ಪರೀಕ್ಷೆಗೆ ಹಾಜರಾಗುತ್ತಾರೆ. ಅದರಿಂದಾಗಿ ವ್ಯವಹಾರ ಕುದುರಿಸುವ ಚತುರರು ಹುಟ್ಟಿಕೊಳ್ಳುತ್ತಾರೆ. ಕಡೆಗೆ ಅವರು ಮುಖ್ಯಮಂತ್ರಿಗಳ ಕುರ್ಚಿಯನ್ನು ಅಲುಗಾಡಿಸುವ ಭೂತಗಳಾಗಿ ಮಾರ್ಪಟ್ಟಿದ್ದಾರೆ. ಶಿವರಾಜ ಸಿಂಗ್ ಚೌಹಾಣ್ ಅತ್ಯಂತ ಸಭ್ಯ ಮುಖ್ಯಮಂತ್ರಿ ಎಂದು ಕಳೆದ ಹಲವು ವರ್ಷಗಳಿಂದ ನಮ್ಮ ಮಾಧ್ಯಮಗಳು ಹೇಳುತ್ತಾ ಬಂದವು. ಇದೀಗ ಸತ್ಯವು ಬಯಲಾಗಿದೆ. ಮೋದಿ ಪಕ್ಷದ ಅತ್ಯಂತ ದೊಡ್ಡ ಸಭ್ಯನ ಬೇಳೆಕಾಳು ಇದಾದರೆ ಇನ್ನು ಗಡ್ಕರಿ, ವಸುಂಧರಾ ರಾಜೆ, ಅರುಣ್ ಜೇಟ್ಲಿ, ಅನಂತಕುಮಾರ, ರಮಣ ಸಿಂಗ್, ಸುಷ್ಮಾ ಸ್ವರಾಜ್, ಮುಂತಾದವರ ಕಪಾಟಿನಲ್ಲಿ ಏನೇನು ಅಡಗಿರಬಹುದು ! ಭಾರತೀಯ ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ಪಕ್ಷ ಅದೆಂದು ಮೋಹನ್ ಭಾಗವತ್ ಅರ್ಹತಾ ಪತ್ರ ನೀಡುತ್ತಾರೆ. ಚೌಹಾಣ್ ಮುಂತಾದವರೆಲ್ಲಾ ಭಾಗವತರ ನಾಗಪುರ ಗರಡಿಯಲ್ಲಿ ತರಬೇತಿ ಪಡೆದವರು. ಆ ಗರಡಿಯ ಸಂಸ್ಕೃತಿ ಬೇರೇನೇ ಇದ್ದರೂ "ಭಾರತೀಯ" ಎನಿಸಿಕೊಳ್ಳಲು ಅರ್ಹವಲ್ಲ. ಆ ಗರಡಿಯಲ್ಲಿ "ಜೈ ಶ್ರೀರಾಂ" ಎಂದು ಘೋಷಿಸಿ ಅಲ್ಪಸಂಖ್ಯಾತರನ್ನು ದ್ವೇಷಿಸಿದರೆ ಸಾಕು, ಬೇರಾವ ದುರ್ಗುಣ ಮತ್ತು ದುಷ್ಟಗುಣಗಳನ್ನು ಬೇಕಾದರೂ ಅಂತರ್ಗತಗೊಳಿಸಿಕೊಳ್ಳಬಹುದು, ಅಡ್ಡಿಯಿಲ್ಲ.

ಅಸಹ್ಯವಾದ ವ್ಯಾಪಂ ಕೊಚ್ಚೆಗುಂಡಿಯ ವಿವರಗಳು ಪ್ರತಿದಿನ ಹೊರಕ್ಕೆ ಬರುತ್ತಿವೆ. ಅಷ್ಟನ್ನೂ ಸಂಗ್ರಹಿಸುವ ಅಗತ್ಯವಿಲ್ಲ. ೨೦೦೭ರಿಂದಲೂ ಈ ಭ್ರಷ್ಟತೆ, ವಿದ್ಯಾರ್ಥಿಗಳಿಂದ ಹಣವನ್ನು ಪಡೆದು ಮೋಸ ಮಾಡುವುದು, ಉದ್ಯೋಗದ ಭರವಸೆ ನೀಡಿ ಯುವಕರಿಂದ ಹಣ ಸೆಳೆಯುವುದು, ಅದರ ಗುಟ್ಟನ್ನು ಬಿಟ್ಟರೆ ಕೊಲ್ಲಲಾಗುತ್ತದೆಂಬ ಬೆದರಿಕೆ ಹಾಕುವುದು, ಇವೆಲ್ಲಾ ಸರ್ಕಾರದ ಬೆಂಬಲವಿಲ್ಲದೆ ನಡೆದಿಲ್ಲ ಮತ್ತು ಭಾರತೀಯ ಜನತಾ ಪಕ್ಷದ ನಾಯಕರ ನೇರ ಭಾಗವಹಿಸುವಿಕೆ ಇಲ್ಲದೆ ಜರುಗಿಲ್ಲ. ಆದರೆ ಹಗರಣವು ಸಾರ್ವಜನಿಕ ವಲಯದ ಗಮನಕ್ಕೆ ಬಂದು ವಿಚಾರಣೆ ಆರಂಭವಾದ್ದು ೨೦೧೩ರಲ್ಲಿ. ಆವರೆಗಿನ ಆರು ವರ್ಷಗಳ ಕತ್ತಲಲ್ಲಿ ಎಷ್ಟು ಸಾವಿರ ಕೋಟಿ ನುಂಗಲಾಯಿತೆಂದು ಊಹಿಸಿಕೊಳ್ಳಬೇಕು. ಅದು ೨೦,೦೦೦ ಕೋಟಿಗಳನ್ನು ಮೀರಿದೆಯೆಂದು 'ದಿ ವೀಕ್' ಪತ್ರಿಕೆ ವರದಿ ಮಾಡಿದೆ, ಬೇಕಾದಷ್ಟು ಪೂರಕ ಪುರಾವೆಗಳನ್ನು ಒದಗಿಸಿದೆ. "ವ್ಯಾಪಂ" ಎಂದರೆ ವ್ಯಾವಸಾಯಿಕ ಪರೀಕ್ಷಾ ಮಂಡಲಿ. ವೈದ್ಯಕೀಯ ಕಾಲೇಜುಗಳಲ್ಲಿ ಪ್ರವೇಶ ಮತ್ತು ಉದ್ಯೋಗ ದೊರಕಿಸಿಕೊಡುವ ಆಮಿಷ ಒಡ್ಡಿ ಅತಿಹೇಯ ಭ್ರಷ್ಟತೆ ನಡೆದುಬಂದಿದೆ. "ಸ್ಕ್ಯಾಮ್‌ಗಳಿಲ್ಲದ ಆಡಳಿತ ಕೊಟ್ಟಿದ್ದೇವೆ" ಎನ್ನುವ ಪ್ರಧಾನಿ ಮೋದಿಯವರು ಇನ್ನೂ ತುಟಿ ಬಿಚ್ಚಿಲ್ಲ. ಗುಜರಾತಿನಲ್ಲಿ ಮತೀಯ ಹಿಂಸೆಯಲ್ಲಿ ಜನರು ಕೊಲ್ಲಲ್ಪಟ್ಟರು, ಮಧ್ಯಪ್ರದೇಶದಲ್ಲಿ ಭ್ರಷ್ಟತೆಯನ್ನು ಬಹಿರಂಗಗೊಳಿಸಲು ಸಮರ್ಥರಿದ್ದವರ ಹತ್ಯೆ ನಡೆಯಿತು. ಇದು ಭಾರತೀಯ ಸಂಸ್ಕೃತಿಯ ಉಜ್ವಲ ಪ್ರತೀಕವೆ ? ಪೊಲೀಸ್, ಶಿಕ್ಷಣ, ಬ್ಯಾಂಕು, ಮುಂತಾದ ಸೇವೆಗಳಲ್ಲಿ ನೌಕರಿ ಕೊಡಿಸುವುದಾಗಿ ಹೇಳಿ ಹಣ ಕಿತ್ತಿರುವುದು ಹಾಗೂ ಭ್ರಷ್ಟ ಹಾದಿಗಳಲ್ಲಿ ನೌಕರಿ ಕೊಡಿಸಿರುವುದು ಎರಡೂ ಉಂಟು. ಲಂಚಗಳ ಮೊತ್ತವೇ ೨೦೦೦ ಕೋಟಿಯನ್ನು ದಾಟಿದೆ ಎನ್ನಲಾಗಿದೆ. ಹಗರಣವು ಬಯಲಾದ ನಂತರ ಕಳೆದ ಎರಡು ವರ್ಷಗಳಲ್ಲಿ ಎರಡು ಸಾವಿರ ಮಂದಿ ದಸ್ತಗಿರಿಯಾಗಿದ್ದಾರೆ ಮತ್ತು ಇನ್ನೂ ಏಳುನೂರು ಮಂದಿ ತಲೆತಪ್ಪಿಸಿಕೊಂಡು ಓಡಾಡಿಕೊಂಡಿದ್ದಾರೆ. ಭಾರತೀಯ ಜನತಾ ಪಕ್ಷದ ಕೆಲವು ಸಂಪುಟ ಸಚಿವರು ಮತ್ತು ರಾಜ್ಯದ ರಾಜ್ಯಪಾಲರು ಸಹ ಆಪಾದಿತರ ಪಟ್ಟಿಗೆ ಸೇರುತ್ತಾರೆ. ಅದನ್ನೆಲ್ಲಾ ಮುಚ್ಚಿಹಾಕಿಬಿಡುವ ಯತ್ನ ನಡೆದಿದೆ. ಕಾಟಾಚಾರಕ್ಕೆ ಸಿ.ಬಿ.ಐ. ತನಿಖೆ ಆದರೂ ಗುಜರಾತಿನ ಆಪಾದಿತರಿಗೆಲ್ಲಾ ಬಿಡುಗಡೆ ದೊರಕಿಸಿ ಕೊಟ್ಟಂತೆ ಇಲ್ಲೂ ಸಿ.ಬಿ.ಐ. ಮಾಡುವುದು ಸಾಧ್ಯ. ಸರ್ವೋಚ್ಚ

ನ್ಯಾಯಾಲಯದ ಉಸ್ತುವಾರಿಯಲ್ಲಿ ತನಿಖೆ ನಡೆದರೆ ಬಹುಶಃ ಅಲ್ಪಸ್ವಲ್ಪ ನ್ಯಾಯ ದೊರಕುತ್ತದೆಂಬ ಆಶಯವಿದೆ. ಅದೂ ಕೇವಲ ಆಶಯವೇ. ಏಕೆಂದರೆ ನಮ್ಮ ದೇಶವನ್ನು ಭ್ರಷ್ಟಾಚಾರದ ನರಕ ಕೂಪವನ್ನಾಗಿಸ ಲಾಗಿದೆ. ಅದು ಅತ್ಯಂತ ಶೋಚನೀಯ ಮತ್ತು ಖಂಡನೀಯ. ರಾಜಕಾರಣಿಗಳಂತೆ ಸರ್ಕಾರದ ಉನ್ನತ ಮಟ್ಟದ ಅಧಿಕಾರಿಗಳೂ ಈ ಭ್ರಷ್ಟತೆಯಲ್ಲಿ ಭಾಗಿ ಗಳಾಗಿದ್ದಾರೆ. ವ್ಯಾಪಂನಲ್ಲಿ ಈವರೆಗೆ ೪೫ಕ್ಕಿಂತಲೂ ಹೆಚ್ಚು ಮಂದಿ ವಿಚಿತ್ರ ರೀತಿಗಳಲ್ಲಿ ಸತ್ತಿದ್ದಾರೆ; ಅವರೆಲ್ಲಾ ಹಗರಣದ ಸಾಕ್ಷಿದಾರರಾಗಿದ್ದವರು ಇಲ್ಲವೆ ಆಗಬಹು ದಾಗಿದ್ದವರು. ಇದು ದಾವೂದ್ ಇಬ್ರಾಹಿಂ ಶೈಲಿಯ ಪಾತಕವೆಂಬುದು ಮನಸ್ಸನ್ನು ಕುದಿಸುತ್ತದೆ. ಸತ್ತವರಲ್ಲಿ ಕೆಲವರು ರಸ್ತೆ ಅಪಘಾತದಲ್ಲಿ ಮಡಿದರೆಂದು ಪೊಲೀಸರು ಹೇಳಿಬಿಟ್ಟಿದ್ದಾರೆ! ಅಪರಾಧವು ಎಷ್ಟು ಆಳಕ್ಕೆ ಇಳಿದಿದೆ ಎಂಬುದು ಇದರಿಂದ ಗೊತ್ತಾಗುತ್ತದೆ. "ಜಾತಸ್ಯ ಹಿ ಧ್ರುವೋ ಮೃತ್ಯುಃ" (ಹುಟ್ಟಿದವರೆಲ್ಲಾ ಸಾಯಲೇ ಬೇಕು) ಎಂಬ ಗೀತಾವಾಕ್ಯವನ್ನು ಉದ್ಧರಿಸಿ ಮಧ್ಯಪ್ರದೇಶದ ಗೃಹಮಂತ್ರಿ ಬಾಬುಲಾಲ್ ಗೌರ್ ಸಾವುಗಳಿಗೆ ವ್ಯಾಖ್ಯಾನ ನೀಡಿರುವುದು ಅತ್ಯಂತ ಅಮಾನವೀಯವಾಗಿದೆ.

ತಾನೇ ಹಗರಣವನ್ನು ಬಯಲಿಗೆಳೆದಿದ್ದು ಎಂದು ಮುಖ್ಯಮಂತ್ರಿ ಅಪಲಪಿಸಿದ್ದಾರೆ. ನಿಜಕ್ಕೂ ಅವರು ಮೊದಲ ಆಪಾದಿತ ಎನ್ನಬೇಕೇನೊ! ಮಾಧ್ಯಮಗಳು ಅವರನ್ನು ಹೊಗಳಿ ಅಟ್ಟಕ್ಕೇರಿಸಿದ್ದು ಚೌಹಾಣರ ಚಮತ್ಕಾರಕ್ಕೆ ಸಾಕ್ಷಿಯಾಗಿದೆ. ಸಿಬಿಐ ತನಿಖೆಯನ್ನು ವಿರೋಧಿಸಿ ಅದು ಸಾಧ್ಯವೇ ಇಲ್ಲವೆಂದು ಹೇಳಿದ್ದ ಅವರು ಈಗ ತಾವೇ ಅಂತಹ ತನಿಖೆಗೆ ಆಗ್ರಹಿಸಿದ್ದು ಎನ್ನುತ್ತಿದ್ದಾರೆ! ಎಲ್ಲವನ್ನೂ ಮುಚ್ಚಿಹಾಕಲು ದೆಹಲಿ ಮತ್ತು ಭೋಪಾಲ್ ಸಜ್ಜಾಗುತ್ತಿವೆ. ತನಿಖೆ ನಡೆಸುತ್ತಿರುವ ವಿಶೇಷ ಜಾಗೃತ ದಳದ ಇಬ್ಬರು ಹಿರಿಯ ಅಧಿಕಾರಿಗಳು ತಮ್ಮ ಪ್ರಾಣಕ್ಕೆ ಕುತ್ತುಂಟಾಗು ವಂತಹ ಬೆದರಿಕೆಗಳು ಬಂದಿವೆಯೆಂದು ಹೇಳಿದ್ದಾರೆ. ಅದನ್ನು ಮಧ್ಯಪ್ರದೇಶದ ಉಚ್ಚನ್ಯಾಯಾಲಯದ ಗಮನಕ್ಕೆ ತಂದಿರುವುದಾಗಿ ತನಿಖಾ ದಳದ ಮುಖ್ಯಸ್ಥ ನಿವೃತ್ತ ನ್ಯಾಯಾಧೀಶ ಚಂದ್ರೇಶ್ ಭೂಷಣ್ ಹೇಳಿದ್ದಾರೆ. ಇದನ್ನೆಲ್ಲಾ ನೋಡಿದರೆ ನಾವು ವಾಸ್ತವ ಭಾರತದ ಮಾತನಾಡುತ್ತಿದ್ದೇವೋ ಅಥವಾ ಯಾವುದೋ ಹಾಲಿವುಡ್ ಸಿನಿಮಾದ ಕತೆಯನ್ನು ಕೇಳುತ್ತಿದ್ದೇವೋ ಎನಿಸುತ್ತದೆ. ನಮ್ಮ ದೇಶವು ಇಂತಹ ಅಧಃಪತನಕ್ಕೆ ಈಡಾಗಬಾರದಿತ್ತು. ಹಾಗೆಂದು ಕಣ್ಣೀರು ಸುರಿಸಿದರೆ ಸಾಲದು. ಜನರು ಬೀದಿಗಿಳಿದು ರಾಜಕೀಯ ಪಾತಕಿಗಳನ್ನು ವಿರೋಧಿಸಬೇಕು, ಸರ್ವೋಚ್ಚ ನ್ಯಾಯಾಲಯವನ್ನು ಆಗ್ರಹಿಸಿ ಎಲ್ಲ ಖಳರನ್ನೂ ಹಿಡಿದುಹಾಕಬೇಕು, ನಮ್ಮ ದೇಶದ ಮೇಲಿನ ಈ ಕರಾಳ ಕಪ್ಪುಚುಕ್ಕೆಯನ್ನು ಅಳಿಸಿ ಹಾಕಬೇಕು, ಮತ್ತು ಅಂತಹ ಕಪ್ಪು ಚುಕ್ಕೆ ಮತ್ತೆಂದೂ ಕಾಣಿಸಿಕೊಳ್ಳದಂತೆ ಪ್ರಜಾಪ್ರಭುತ್ವದ ವ್ಯವಸ್ಥೆಯನ್ನು ಸ್ವಚ್ಛಗೊಳಿಸಿ ಗಟ್ಟಿಗೊಳಿಸಬೇಕು. ಸ್ವಚ್ಛತೆಯ ಮಾತನ್ನಾಡುವ ಪ್ರಧಾನಿಗೆ ಜನತೆಯು ಸವಾಲು ಎಸೆದಿದೆ. ಅವರು ಹೇಗೆ ಪ್ರತಿಕ್ರಿಯಿಸುತ್ತಾರೋ ನೋಡೋಣ. ನಮ್ಮ ಪ್ರತಿಕ್ರಿಯೆಯು ಭಾರತದ ಒಳಿತಿಗಾಗಿ ಮಾತ್ರವೇ ಇರುತ್ತದೆ.

* * *

ಧೋನಿ ಎಂಬ ಕ್ರಿಕೆಟ್ ರತ್ನ ಇತ್ತೀಚೆಗೆ ಸ್ವಾಗತಾರ್ಹವಾದ ಕಳಪೆ ಆಟ ಆಡಿ ತಾನಿನ್ನು ನಿವೃತ್ತಿ ಪಡೆಯಬೇಕೆಂದಿದ್ದನಂತೆ, ಆದರೆ ಕೆಲವರು ಆತನಿಗೆ 'ಭಾರತ ರತ್ನ' ಪದವಿ ಸಿಗುವತನಕ ನಿವೃತ್ತಿಯ ಮಾತೇ ಆಡಬಾರದೆಂಬಂತೆ ಪ್ರತಿಕ್ರಿಯಿಸಿದ್ದಾರೆ. ಎಲ್ಲ ನಿವೃತ್ತ ಕ್ರಿಕೆಟ್ ಧಾಂಡಿಗರು (ಅಂದರೆ ಬ್ಯಾಟ್ಸ್‌ಮನ್‌ಗಳು), ಹಲವು ಪತ್ರಕರ್ತರು, ಮತ್ತು ಪುಡಿ ಕ್ರಿಕೆಟಿಗರು ಧೋನಿಯ ನಿರ್ಗಮನವೂ ಒಂದೇ, ಹಿಮಾಲಯವು ಅಗ್ನಿಪರ್ವತವಾಗಿ ಲಾವಾ ಹರಿಸುವುದೂ ಒಂದೇ ಎಂಬ ಶೈಲಿಯಲ್ಲಿ ಆತನ ನೆರವಿಗೆ ನಿಂತಿದ್ದಾರೆ. ಇದರಿಂದ ಅವರಿಗೇನು ಲಾಭವೋ ತಿಳಿಯುವಂತಿಲ್ಲ. ೪೫ ವರ್ಷ ವಯಸ್ಸಿನವರು ಸಹ ನಿವೃತ್ತರಾಗಬಾರದಂತೆ, ಅವರು ಹೈಕೋರ್ಟ್ ನ್ಯಾಯಮೂರ್ತಿಗಳಂತೆ ೬೨ನೆಯ ವಯಸ್ಸಿನವರೆಗೂ ಕುಟ್ಟು-ಕುಟ್ಟು ಮಾಡುತ್ತಿರಬೇಕು. ಇಂತಹ ಹಾಸ್ಯಾಸ್ಪದ ಮಾತುಗಳನ್ನಾಡುವವರಿಗೆ ೧೮-೨೦ ವರ್ಷ ವಯಸ್ಸಿನ ಕ್ರಿಕೆಟ್ ಆಟಗಾರರು ಪ್ರಕಾಶಕ್ಕೆ ಬರುವುದು ಹೇಗೆ ಮತ್ತು ಎಂದು ಎಂಬ ಪ್ರಶ್ನೆ ಕಾಡುವುದಿಲ್ಲ. ಧೋನಿ ಮಹಾತ್ಮನು ನಿವೃತ್ತ ನಾಗುವ ವೇಳೆಗೆ ಅವರಿಗೆ ೬೫ ವರ್ಷಗಳಾಗಿರುತ್ತದೆ ಎಂದಿಟ್ಟುಕೊಳ್ಳಿ. ಆ ವಯಸ್ಸಿನವರನ್ನು ಹೇಗೆ ಆಯ್ಕೆ ಮಾಡುವುದು, ಅವರಿಗೆ ವಯಸ್ಸಾಗಿ ಹೋಗಿದೆ ಎಂದು ಅವರನ್ನು ಹೊರಗಿಡುತ್ತಾರೆ. ಧೋನಿ, ಟೆಂಡುಲ್ಕರ್, ಗವಾಸ್ಕರ್, ಇಂಥವರಿಗೆ ತಮ್ಮದೇ ಚಿಂತೆ, ಯುವಕರು ಅವಕಾಶ ಪಡೆಯದಿದ್ದರೆ ಪರವಾಗಿಲ್ಲ. ಇದರಲ್ಲೆಲ್ಲಾ ಏನೋ ವ್ಯಾಪಂ ತರಹದ ಅವ್ಯವಹಾರ ಇದ್ದೀತು, ನಮಗೆ ಹೇಗೆ ತಿಳಿದೀತು! "ಅಪ್ಪಾ ಧೋನಿ ಮಹರಾಯ, ದಯವಿಟ್ಟು ಮನೆಗೆ ಹೋಗು, ನಾವು ನಿಶ್ಚಿಂತೆಯಿಂದ ಇರುತ್ತೇವೆ, ಯಾರೋ ೨೦ರ ವಯಸ್ಸಿನವನೊಬ್ಬ ಬರುತ್ತಾನೆ, ನಮಗೆ ಅಷ್ಟೇ ಸಾಕು! ನೀನಿನ್ನೂ ಕಾಮೆಂಟೇಟರ್, ಕೋಚ್, ಬೋರ್ಡ್ ಮೆಂಬರ್, ಕ್ರಿಕೆಟ್ ಕೌನ್ಸಿಲ್ ಸದಸ್ಯ, ಹೀಗೆ ಏನೇನೋ ಆಗಲು ಹೊಸ ಹುಲ್ಲುಗಾವಲುಗಳನ್ನು ಹುಡುಕಿಕೊಂಡು ಅಲ್ಲಿ ಹೋಗಿ ಮೇಯುತ್ತಿರು, ಬಂಗ್ಲಾದೇಶದಲ್ಲಿ ಗುದಾಸು ಮಡಗಿಸಿಕೊಂಡು ಬರಲು ನೀನಿಲ್ಲದಿದ್ದರೂ ಸಾಧ್ಯ, ನಮಸ್ಕಾರ."

* * *

ಎಚ್. ಆರ್. ಭಾರದ್ವಾಜರನ್ನು ಕರ್ನಾಟಕ ಎಂದಾದರೂ ಮರೆಯಲು ಸಾಧ್ಯವೆ? ಅಂತಹ ವ್ಯವಹಾರ ಚತುರ ಆತ. ಆತ ರಾಜಭವನ ಬಿಟ್ಟುಹೋದಾಗ ಸುತ್ತಮುತ್ತ ಗೋಣಿಚೀಲಗಳು ಬಿದ್ದಿದ್ದುವಂತೆ. ಅವುಗಳಲ್ಲಿ ಏನು ತುಂಬಿದ್ದರೋ ತಿಳಿಯದು, ಅವೆಲ್ಲಾ ಖಾಲಿಖಾಲಿ ಬಿದ್ದಿದ್ದವು. ಅವರು ರಾಜಭವನ ಬಿಟ್ಟ ನಂತರ ನಮ್ಮ ವಿಶ್ವವಿದ್ಯಾನಿಲಯ ಗಳಿಗೆ ವೈಸ್-ಚಾನ್ಸಲರ್‌ಗಳಾದವರು ಧನ್ಯರು, ಸಾಲ-ಸೋಲಕ್ಕೆ ಸಿಕ್ಕಿಬಿದ್ದಿರಲಾರರು. ಅದಂತಿರಲಿ, "ನೆಹರು ಕುಟುಂಬದ ಕಟ್ಟಾ ಭಕ್ತ ನಾನು" ಎಂದು ರಾಜಭವನಕ್ಕೆ ಹೋದವರಿಗೆಲ್ಲಾ ವಿವರವಾಗಿ ಹೇಳುತ್ತಿದ್ದ ಈತ ಜುಲೈ ಮೊದಲ ವಾರದಲ್ಲಿ ಒಂದು ಬಾಂಬು ಸಿಡಿಸಿಬಿಟ್ಟ. "ಮೋದಿಯವರ ಆಡಳಿತ ಎಷ್ಟು ಸೊಗಸಾಗಿದೆ" ಎಂದು ಆನಂದಬಾಷ್ಪ ಸುರಿಸಿದರಂತೆ, ಯಾವುದೋ ಪುಟ್ಟ ಸಭೆಯಲ್ಲಿ. ಆತನ ವಯಸ್ಸು ೮೦ ದಾಟಿಲ್ಲವೋ ಏನೋ, ಆದ್ದರಿಂದ ಮೋದಿಯವರ ಮನೆ ಬಾಗಿಲು ತಟ್ಟಲು ಹೊರಟಿದ್ದಾರೇನು? ಬಾಗಿಲು ತೆರೆದಾಗ ಅವರೇ ಒಳನುಗ್ಗದೆ ನಾಲ್ಕೈದು ಪಟ್ಟಶಿಷ್ಯರನ್ನೇನಾದರೂ ತೂರಿಸುವ ತರಾತುರಿಯಲ್ಲಿದ್ದಾರೇನು? ಶುಭಸ್ಯ ಶೀಘ್ರಂ, ಏಕೆಂದರೆ ಅಂತಹವರಿಗೆ ಅತಿಲಾಯಕ್ಕಾದ ಜಾಗ ಅದು. ಮಧ್ಯಪ್ರದೇಶದ ರಾಜ್ಯಪಾಲರು ಹೊರಬಂದರೆ ಭಾರದ್ವಾಜರು ಒಳಹೋಗಬಹುದು. "ಪರ್ಫೆಕ್ಟ್ ರೀಪ್ಲೇಸ್‌ಮೆಂಟ್" ಎನ್ನುತ್ತಿದ್ದಾರೆ ಕೆಲವರು.

* * *

ಹದಿನೆಂಟು ವರ್ಷಗಳಿಂದ ಜಾರಿಯಲ್ಲಿದ್ದ ಸೇನಾಪಡೆಯ ವಿಶೇಷಾಧಿಕಾರ ಕಾಯಿದೆ (ಎಎಫ್‌ಎಸ್‌ಪಿಎ)ಯನ್ನು ತ್ರಿಪುರಾದ ಎಡಪಕ್ಷೀಯ ಸರಕಾರ ಕಳೆದ ಮೇ ತಿಂಗಳ ೨೭ರಂದು ರದ್ದು ಗೊಳಿಸಿತು. ಇದು ನಮ್ಮ ಮಾಧ್ಯಮಗಳಿಗೆ ದೊಡ್ಡ ಸುದ್ದಿಯಾಗಲೇ ಇಲ್ಲ. ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ನಾಯಕ ಮಾಣಿಕ್ ಸರ್ಕಾರ್ ನೇತೃತ್ವದ ಎಡಪಕ್ಷೀಯ ಸರಕಾರದ ಸಚಿವ ಸಂಪುಟ ತೆಗೆದು ಕೊಂಡ ಈ ತೀರ್ಮಾನ ದೇಶಾದ್ಯಂತ ಸಂಚಲನ ಮೂಡಿಸುವುದು ಖಚಿತ. ಸೇನಾಪಡೆಗೆ ನೀಡಿರುವ ವಿಶೇಷಾಧಿಕಾರದ ಪ್ರಕಾರ ಸೇನಾಧಿಕಾರಿಯೊಬ್ಬ ಶಾಂತಿ ಕಾಪಾಡಲು ಕೈಗೊಳ್ಳುವ ಕ್ರಮವನ್ನು ಯಾರೂ ಪ್ರಶ್ನಿಸುವಂತಿಲ್ಲ. ಗೋಲಿಬಾರು ನಡೆಸಿದಾಗ ವ್ಯಕ್ತಿಗಳ ಪ್ರಾಣಹಾನಿಯಾದರೂ ಅದು ನ್ಯಾಯಾಲಯದ ವ್ಯಾಪ್ತಿಗೆ ಬರುವುದಿಲ್ಲ. ಈ ಕಾಯಿದೆ ಜಾರಿಯಲ್ಲಿ ಇರುವ ಪ್ರದೇಶಗಳಲ್ಲಿ ಅದಕ್ಕೆ ತೀವ್ರವಾದ ವಿರೋಧ ಇದೆ. ಅದನ್ನು ರದ್ದುಗೊಳಿಸಬೇಕೆಂದು ಹೋರಾಟಗಳು ನಡೆದಿವೆ. ಸೇನೆ ನಡೆಸಿರುವ ಅನೇಕ ದೌರ್ಜನ್ಯಗಳು ಬಯಲಾಗಿವೆ. ಮಾನವ ಹಕ್ಕುಗಳ ಆಯೋಗ, ಅಮ್ನೆಸ್ಟಿ ಇಂಟರ್‌ನ್ಯಾಷನಲ್ ಮೊದಲಾದ ಸಂಸ್ಥೆಗಳು ಎಎಫ್‌ಎಸ್‌ಪಿಎಯನ್ನು ರದ್ದುಗೊಳಿಸಬೇಕೆಂದು ಒತ್ತಾಯಿಸಿವೆ. ಈ ಕಾಯಿದೆ ಹಲವು ದಶಕಗಳಿಂದ ಅಸ್ಸಾಮ್, ಮಣಿಪುರ, ನಾಗಾಲ್ಯಾಂಡ್, ಮಿಜೋರಾಂ, ಮೇಘಾಲಯ, ಅರುಣಾಚಲಪ್ರದೇಶ, ಜಮ್ಮು-ಕಾಶ್ಮೀರ ಮೊದಲಾದ ಕಡೆಗಳಲ್ಲಿ ಇನ್ನೂ ಜಾರಿಯಲ್ಲಿವೆ. ಇಡೀ ಈಶಾನ್ಯ ಭಾರತದಲ್ಲಿ ಈ ಕಾಯಿದೆ ಚಾಲ್ತಿಯಲ್ಲಿದೆ. ಇಲ್ಲಿನ ಜನ ಅದನ್ನು ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಯಾವಾಗ ಸೇನೆಯ ವಕ್ರದೃಷ್ಟಿಗೆ ಬಲಿಯಾಗುತ್ತೇವೋ ಎಂಬ ಭಯದಿಂದಲೇ ಜನ ಬದುಕು ಸಾಗಿಸಬೇಕಾಗಿ ಬಂದಿದೆ. ಈ ಕಾಯಿದೆ ಸಂಬಂಧಪಟ್ಟ ಪ್ರದೇಶಗಳಲ್ಲಿ ಪ್ರತ್ಯೇಕವಾದಿಗಳನ್ನು ತಹಬಂದಿಗೆ ತರುವುದಕ್ಕೆ, ಭಯೋತ್ಪಾದಕರನ್ನು ಮಟ್ಟ ಹಾಕುವುದಕ್ಕೆ ಪ್ರತಿಯಾಗಿ, ಜನಸಾಮಾನ್ಯರ ವಿರೋಧ ಕಟ್ಟಿಕೊಂಡಿದೆ. ಸೈನಿಕರನ್ನು ಕಂಡಕೂಡಲೆ ಭಯದಿಂದ ಜನ ಕದಮುಚ್ಚುವ ಸ್ಥಿತಿ ತಲುಪಿದೆ ಈ ಪ್ರದೇಶಗಳಲ್ಲಿ.

ತ್ರಿಪುರ ಸರಕಾರದ ತೀರ್ಮಾನವನ್ನು ಕೇಂದ್ರ

ಸರಕಾರವೂ ಸ್ವಾಗತಿಸಿದೆ. ಯುಪಿಎ ಹಾಗೂ ಇತರ ಪಕ್ಷಗಳೂ ಬೆಂಬಲಿಸಿವೆ. ಆದಷ್ಟು ಶೀಘ್ರವಾಗಿ ಕೇಂದ್ರ ಸರಕಾರ ಇನ್ನೂ ಹಲವು ಪ್ರದೇಶಗಳಲ್ಲಿ ಜಾರಿ ಇರುವ ವಿಶೇಷಾಧಿಕಾರದ ಈ ಕಾಯಿದೆಯನ್ನು ರದ್ದು ಗೊಳಿಸುವುದು ಅಗತ್ಯ. ಅದರ ರದ್ದತಿಗಾಗಿ ಹೋರಾಟಗಳು ನಡೆಯುತ್ತಿವೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇಂಥ ಘೋರ ಕಾನೂನುಗಳಿಗೆ ಅವಕಾಶವಿಲ್ಲ. ಅದು ಅಮಲಿನಲ್ಲಿರುವ ಪ್ರದೇಶಗಳಲ್ಲಿ ಒಳ್ಳೆಯದಕ್ಕಿಂತ ಕೆಟ್ಟದೇ ಹೆಚ್ಚಾಗಿದೆ. ತ್ರಿಪುರಾದಲ್ಲಿ ಈ ಕಾಯಿದೆಯಡಿಯಲ್ಲಿ ದೌರ್ಜನ್ಯಗಳು ನಡೆಯದೇ ಹೋದರೂ ಇತರ ಕಡೆಗಳಲ್ಲಿ ಅಧಿಕವಾಗಿ ನಡೆದಿದೆ. ಪ್ರತ್ಯೇಕವಾದ, ಭಯೋತ್ಪಾದನೆ ಕಡಿಮೆಯಾಗುವ ಬದಲು ಹೆಚ್ಚಾಗುತ್ತಿದೆ. ಹಿಂದುಳಿದಿರುವಿಕೆಯೂ, ಅಭಿವೃದ್ಧಿ ಕಾರ್ಯಗಳ ಕೊರತೆಯೂ ಈ ಪರಿಸ್ಥಿತಿಗೆ ಕಾರಣ. ಹಾಗಾಗಿ ಪರಿಸ್ಥಿತಿಯನ್ನು ಹತೋಟಿಗೆ ತರಲು ದಬ್ಬಾಳಿಕೆ ಪರಿಹಾರವಲ್ಲ, ಬದಲಾಗಿ ಜನರನ್ನು ಒಲಿಸಿಕೊಳ್ಳಲು ಸರಕಾರ ಅಭಿವೃದ್ಧಿ ಕಾರ್ಯಕ್ರಮ ಗಳನ್ನೂ ಕೈಗೊಳ್ಳುವುದು ಉಚಿತ. ಅದಕ್ಕಾಗಿ ಎಲ್ಲ ಪ್ರಜಾಪ್ರಭುತ್ವವಾದಿ ಶಕ್ತಿಗಳೂ ಕೂಡಿ ಸರಕಾರದ ಮೇಲೆ ಒತ್ತಾಯ ತರಬೇಕಾಗಿದೆ. ಸೇನೆಗೆ ವಿಶೇಷಾಧಿಕಾರ ನೀಡುವ ಕಾಯಿದೆ ಒಡನೆಯೇ ರದ್ದಾಗಬೇಕು. ಈ ವಿಷಯದಲ್ಲಿ ತ್ರಿಪುರಾ ಇರಿಸಿರುವ ಹೆಜ್ಜೆ ಸ್ವಾಗತಾರ್ಹ.

* * *

ತೀವ್ರವಾದ ವಿರೋಧದ ಎದುರಿನಲ್ಲಿ ಮನಮೋಹನ ಸಿಂಗ್ ಸರಕಾರ ಅಮೇರಿಕದೊಂದಿಗೆ ಮಾಡಿಕೊಂಡ ನ್ಯೂಕ್ಲಿಯರ್ ಒಪ್ಪಂದ ಹತ್ತು ವರ್ಷ ಪೂರೈಸಿದೆ. ೨೦೦೫ರ ಜುಲೈ ೧೮ರಂದು ಯುಪಿಎ ಸರಕಾರ ಪಟ್ಟುಹಿಡಿದು ಅಮೇರಿಕದೊಂದಿಗೆ ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಸಹಕಾರಕ್ಕಾಗಿ ಒಪ್ಪಂದಕ್ಕೆ ಸಹಿ ಹಾಕಿದಾಗ ಎಡಪಕ್ಷಗಳು ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಹಿಂತೆಗೆದುಕೊಂಡದ್ದನ್ನು ನಾವು ಇಲ್ಲಿ ಸ್ಮರಿಸಬಹುದು. ನ್ಯೂಕ್ಲಿಯರ್ ವಿದ್ಯುತ್ ಸ್ಥಾವರದ ನಿರ್ಮಾಣ ಸಾಕಷ್ಟು ಕಾಲ ಹಿಡಿಯುತ್ತದೆ. ಉದಾಹರಣೆಗೆ ತಮಿಳುನಾಡಿನ ಕೂಡಂಕುಲಮ್‌ನಲ್ಲಿ ನಿರ್ಮಾಣಗೊಂಡಿರುವ ಸ್ಥಾವರ ನಿರ್ಮಾಣಗೊಳ್ಳಲು ಹದಿಮೂರು ವರ್ಷ ತೆಗೆದುಕೊಂಡಿತು. ಹಾಗೆಯೇ ಮೊದಲೇ ದುಬಾರಿಯಾದ ಅದು ಈಗ ದುಪ್ಪಟ್ಟಾಗಿದೆ. ಕಳೆದ ಜನವರಿ ತಿಂಗಳಲ್ಲಿ ಅಮೇರಿಕ ಅಧ್ಯಕ್ಷ ಬರಾಕ್ ಒಬಾಮಾ ಭಾರತಕ್ಕೆ ಬಂದಿದ್ದಾಗ ನ್ಯೂಕ್ಲಿಯರ್ ಒಪ್ಪಂದ ಕೇಂದ್ರಬಿಂದುವಾಗಿತ್ತು ಮಾತುಕತೆಗಳಲ್ಲಿ. ನ್ಯೂಕ್ಲಿಯರ್ ಸ್ಥಾವರ ಅಪಘಾತಕ್ಕೀಡಾದಾಗ ಸಂಭವಿಸುವ ನಷ್ಟದ ವಿಚಾರ ಅತ್ಯಂತ ತೊಡಕಿನ ದ್ದಾಗಿತ್ತು. ಮೋದಿ ಸರಕಾರ ಈ ಸಂದರ್ಭದಲ್ಲಿ ತೇಪೆ ಹಾಕುವ ರೀತಿಯಲ್ಲಿ ಇನ್ಶೂರೆನ್ಸ್ ಸೂತ್ರವೊಂದನ್ನು ಸೂಚಿಸಿ ಸಮಜಾಯಿಷಿ ಮಾಡಿಕೊಂಡಿತು. ಆದರೆ ಅದಕ್ಕೆ ಅಮೇರಿಕದ ಕಾಂಗ್ರೆಸ್ಸಿನ ಅನುಮತಿ ಇನ್ನೂ ದೊರೆತಿಲ್ಲ. ಇನ್ನು ಈ ಎಲ್ಲ ವಿವರಗಳೂ ಪೂರ್ತಿ ಯಾಗುವುದಕ್ಕೆ ಎಷ್ಟು ವರ್ಷ ಹಿಡಿಯುತ್ತದೋ ನೋಡಬೇಕು. ಯುಪಿಎ ಸರಕಾರದಂತೆಯೇ ಮೋದಿ ಸರಕಾರ ಕೂಡ ಅಮೇರಿಕದೊಂದಿಗೆ ನ್ಯೂಕ್ಲಿಯರ್ ಸಹಕಾರಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದೆ. ಅದರಿಂದಲೇ ಭಾರತದ ಅಭಿವೃದ್ಧಿ ಎನ್ನುವಂತೆ ಪ್ರಚಾರ ಮಾಡುತ್ತಿದೆ. ಈಗಿರುವಂತೆ ಕನಿಷ್ಠ ಪಕ್ಷ ನ್ಯೂಕ್ಲಿಯರ್ ಸ್ಥಾವರ ಭಾರತದಲ್ಲಿ ಸ್ಥಾಪನೆಯಾಗಲು ಹತ್ತು ವರ್ಷವಾದರೂ ಬೇಕಾಗುತ್ತದೆ. ಹಾಗಾದರೆ ಅದು ಇನ್ನಷ್ಟು ದುಬಾರಿ ಯಾಗಿರುತ್ತದೆ. ಅಂತೂ ಅಬ್ಬರದ ಪ್ರಚಾರ ಪಡೆದು ಭಾರತ–ಅಮೇರಿಕ ಸಂಬಂಧಗಳಿಗೆ ಜೀವಾಳ ಎನಿಸಿರುವ ನ್ಯೂಕ್ಲಿಯರ್ ಒಪ್ಪಂದ ಕನಸಿನ ಅರಮನೆ ಯಾದೀತೆ ಎಂಬ ಸಂದೇಹ ಬರುತ್ತಿದೆ.

* * *

ಭಾರತದ ಕ್ರಿಕೆಟ್ ಹಗರಣ ಎಂದೂ ಮುಗಿಯದ ಕತೆಯಾಗಿದೆ. ಈಚೆಗೆ ತಾನೆ ಇಂಡಿಯನ್ ಪ್ರೀಮಿಯರ್ ಲೀಗ್ ಎಂಬ ನೂರಾರು ಕೋಟಿ ಕ್ರಿಕೆಟ್ ಮಾಲೆಯನ್ನು ಸ್ಥಾಪಿಸಿದ ಲಲಿತ್ ಮೋದಿ ಪ್ರಕರಣ ಭಾಜಪಗೆ ಭಾರಿ ತಲೆನೋವು ತಂದಿದೆ. ಕೇಂದ್ರ ಸಚಿವೆ ಸುಷ್ಮಾ ಸ್ವರಾಜ್ ಮತ್ತು ರಾಜಾಸ್ಥಾನದ ಮುಖ್ಯಮಂತ್ರಿ ವಸುಂಧರಾ ರಾಜೆ ಇಬ್ಬರಿಗೂ ಐಪಿಎಲ್ ಮೋದಿ ನಿದ್ರೆ ಕೆಡಿಸಿದ್ದಾನೆ. ಇಂಗ್ಲೆಂಡಿನಲ್ಲಿ ಪರಾರಿಯಾಗಿ ಕುಳಿತಿರುವ ಈತನ ಬೆನ್ನು ಹತ್ತಿದೆ ಕೇಂದ್ರ ಹಣಕಾಸಿನ ಸಚಿವಾಲಯ. ಈ ಸಚಿವರುಗಳು ರಾಜೀನಾಮೆ ನೀಡಬೇಕು ಎಂದು ಆಗ್ರಹಿಸಿ ವಿರೋಧ ಪಕ್ಷಗಳು ಪಟ್ಟು ಹಿಡಿದಿವೆ. ಈಗ ಜಾರಿಯಲ್ಲಿರುವ ಪಾರ್ಲಿಮೆಂಟ್ ಅಧಿವೇಶನದಲ್ಲಿ ಇದು ಕೆಸರಾಟಕ್ಕೆ ಸಜ್ಜಾಗಿ ನಿಂತಿದೆ.

ಇದೀಗ ಸುಪ್ರೀಮ್ ಕೋರ್ಟು ಮೆಟ್ಟಿಲೇರಿದ್ದ ಐಪಿಎಲ್ ಕ್ರಿಕೆಟ್ ಪಂದ್ಯಗಳ ಬೆಟ್ಟಿಂಗ್ ಹಾಗೂ ಸ್ಪಾಟ್ ಫಿಕ್ಸಿಂಗ್ ಮೊದಲಾದ ಪ್ರಕರಣಗಳನ್ನು ಕುರಿತು ವಿಚಾರಣೆ ನಡೆಸಲು ನೇಮಕಗೊಂಡಿದ್ದ ಲೋಧಾ ಸಮಿತಿ ತನ್ನ ತೀರ್ಪನ್ನು ಪ್ರಕಟಿಸಿದೆ. ಅದು ಭಾರತದ ಕ್ರಿಕೆಟ್ ವಲಯದಲ್ಲಿ ಸಂಚಲನ ಮೂಡಿಸಿದೆ. ಅಕ್ರಮಗಳ ಗೂಡಾಗಿರುವ ಭಾರತದ ಕ್ರಿಕೆಟ್ ಮಂಡಳಿ ಹಾಗೂ ಐಪಿಎಲ್ ಪಂದ್ಯಗಳನ್ನು ಫಜೀತಿಗೆ ಸಿಲುಕಿಸಿದೆ. ಚಾಂಪಿಯನ್ನರೆಂದು ಬೀಗುತ್ತಿರುವ ಚೆನ್ನೈ ಸೂಪರ್ ಕಿಂಗ್ಸ್ ಹಾಗೂ ರಾಜಾಸ್ಥಾನ್ ರಾಯಲ್ಸ್ ತಂಡಗಳನ್ನು ಟೂರ್ನಮೆಂಟಿನಿಂದ ಎರಡು ವರ್ಷ ಅಮಾನತು ಗೊಳಿಸಲಾಗಿದೆ. ಅಂತರರಾಷ್ಟ್ರೀಯ ಕ್ರಿಕೆಟ್ ಮಂಡಳಿಯ ಮುಖ್ಯಸ್ಥ ಎನ್. ಶ್ರೀನಿವಾಸನ್ ಅಳಿಯ ಗುರುನಾಥ ಮೆಯ್ಯಪ್ಪನ್ ಮತ್ತು ರಾಯಲ್ಸ್ ಸಹ–ಮಾಲೀಕ ರಾಜ್‌ಕುಂದ್ರಾ ಇವರನ್ನು ಮುಂದೆ ಬಿಸಿಸಿಐ ಆಯೋಜಿಸುವ ಯಾವುದೇ ಪಂದ್ಯದಲ್ಲಿ ಭಾಗ ವಹಿಸದಂತೆ ಅವರಿಗೆ ಆಜೀವ ಶಿಕ್ಷೆ ಹೇರಿದೆ. ಅಂತೂ ಈ ಐಪಿಎಲ್ ಹಗರಣಗಳೆಲ್ಲ ಬಟಾ ಬಯಲಾಗಿದೆ. ಕೋಟಿಗಟ್ಟಲೆ ವ್ಯವಹಾರದ ಈ ಐಪಿಎಲ್ ಪಂದ್ಯಾವಳಿ ಪ್ರಾರಂಭವಾದಾಗಿನಿಂದ ಒಂದಲ್ಲ ಒಂದು ಅವ್ಯವಹಾರ ನಡೆಯುತ್ತಿವೆ. ಇಡೀ ಪಂದ್ಯಗಳನ್ನು ಜೂಜುಕಟ್ಟೆಯಾಗಿ ಅದು ಮಾರ್ಪಡಿಸಿದೆ. ಇದರಿಂದಾಗಿ ಈ ಕ್ರಿಕೆಟ್ ಜೂಜನ್ನು ಸಂಪೂರ್ಣವಾಗಿ ನಿಷೇಧಿಸಬೇಕೆಂಬ ಒತ್ತಾಯ ಬಲವಾಗಿದೆ. ರಾಜಕಾರಣಿಗಳು, ಸಿನಿಮಾ ತಾರೆಯರು, ಕಾರ್ಪೊರೇಟ್ ಧಣಿಗಳು, ಕೋಟಿಗಟ್ಟಲೆ ಹಣ ಸಂಪಾದಿಸಿರುವ ಕ್ರಿಕೆಟಿಗರು ಶಾಮೀಲಾಗಿರುವ ಐಪಿಎಲ್ ಮತ್ತೆ ಮರುಜೀವ ಪಡೆಯಲು ಸರಕಾರ ಅವಕಾಶ ನೀಡಕೂಡದು. ಕ್ರಿಕೆಟ್‌ನ ಎಲ್ಲ ಅವ್ಯವಹಾರಗಳ ಕುರಿತು ಸಮಗ್ರವಾದ ತನಿಖೆ ಯಾಗಬೇಕು. ಇಲ್ಲದೇ ಹೋದಲ್ಲಿ ಅವ್ಯವಹಾರಗಳಿಗೆ ಪರವಾನಗಿ ನೀಡಿದಂತಾಗುತ್ತದೆ.

* * *

ಪುಣ್ಯಕ್ಷೇತ್ರಗಳಲ್ಲಿ ಕಾಲ್ತುಳಿತಕ್ಕೆ ಬಲಿಯಾಗಿ ಸಾವನ್ನಪ್ಪುವುದು ಭಾರತದಲ್ಲಿ ಹೊಸದೇನಲ್ಲ. ಒಂದಲ್ಲ ಒಂದು ಕಡೆ ಇಂಥ ಅವಘಡಗಳು ಜಾತ್ರೆಗಳಲ್ಲಿ ಸಂಭವಿಸುತ್ತಲೇ ಇರುತ್ತವೆ. ಹಲವು ದಶಕಗಳ ಹಿಂದೆ ಕುಂಭಮೇಳದ ಜಾತ್ರೆಯಲ್ಲಿ ನೂಕುನುಗ್ಗಲಾಗಿ ನೂರಾರು ಜನ ಸಾವಿಗೀಡಾದರು. ಆಗ ಕೇಂದ್ರ ಗೃಹಸಚಿವರಾಗಿದ್ದ ಗುಲ್ಜಾರಿಲಾಲ್ ನಂದ ಅವರು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಬೇಕಾಗಿ ಬಂತು ಎಂದು ನೆನಪು. ಆದರೆ ಈಗ ಆ ಸಂಪ್ರದಾಯ ಎಲ್ಲ ಮಾಯವಾಗಿದೆ. ಈಗ ಸಚಿವರುಗಳು ಅಂಥ ಜಾತ್ರೆಗಳಲ್ಲಿ ಪಾಲ್ಗೊಳ್ಳುವುದೇ ದುರಂತಕ್ಕೆ ಕಾರಣವಾಗುತ್ತಿದೆ. ವಿಐಪಿ (ವೆರಿ ಇಂಪಾರ್ಟೆಂಟ್‌ಪರ್ಸನ್) ಎನ್ನುವ ಸಂಸ್ಕೃತಿ ಬೃಹದಾಕಾರವಾಗಿ ಬೆಳೆದಿದೆ. ಇದರಿಂದಾಗಿ ಸಾರ್ವಜನಿಕರು ಸಾಕಷ್ಟು ಬವಣೆ ಅನುಭವಿಸಬೇಕಾಗಿ ಬಂದಿದೆ. ವಿಮಾನಯಾನದಿಂದ ಹಿಡಿದು ದೇವಾಲಯ ಗಳವರೆಗೆ ಈ ವಿಐಪಿ ಸಂಸ್ಕೃತಿ ಒಂದು ಪೀಡೆಯಾಗಿ ಪರಿಣಮಿಸಿದೆ ಸಾರ್ವಜನಿಕರಿಗೆ.

ಆಂಧ್ರಪ್ರದೇಶದ ರಾಜಮಹೇಂದ್ರಿ ಬಳಿ ಗೋದಾವರಿ ನದಿಯ ಪುಷ್ಕರ ಘಾಟ್‌ನಲ್ಲಿ ಈಚೆಗೆ ಸಂಭವಿಸಿದ ದುರಂತದಲ್ಲಿ ೨೯ ಮಂದಿ ಕಾಲ್ತುಳಿತಕ್ಕೆ ಬಲಿಯಾದರು, ಅರವತ್ತಕ್ಕೂ ಹೆಚ್ಚು ಮಂದಿ ಗಾಯಗೊಂಡರು. ಸಾವನ್ನಪ್ಪಿದವರಲ್ಲಿ ಬಹುತೇಕ ಮಂದಿ ವಯಸ್ಸಾದವರು ಮತ್ತು ಮಹಿಳೆಯರು. ಪ್ರತಿ ೧೨ ವರ್ಷಗಳಿಗೊಮ್ಮೆ ನಡೆಯುವ ಪವಿತ್ರ ಪುಷ್ಕರಮ್‌ನಲ್ಲಿ ಮೀಯಲು ಸಾವಿರಾರು ಜನರು ವಿವಿಧ ಕಡೆಗಳಿಂದ ಇಲ್ಲಿಗೆ ಆಗಮಿಸುತ್ತಾರೆ. ಆಗ ಸಂಭವಿಸುವ ನೂಕುನುಗ್ಗಲೇ ದುರಂತಕ್ಕೆ ಕಾರಣ. ಆದರೆ ಈ ಸಲ ಆದದ್ದು ಬೇರೆಯೇ. ಅದಕ್ಕೆ ಕಾರಣರಾದವರು ಆಂಧ್ರಪ್ರದೇಶದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಮತ್ತು ಅವರ ಸಂಪುಟದ ಕೆಲವು ಸಹೋದ್ಯೋಗಿಗಳು ಹಾಗೂ ಅಧಿಕಾರಿಗಳು. ಇವರಿಗೆ ಖಂಡಿತ ಶಿಕ್ಷೆಯಾಗುವುದಿಲ್ಲ. ಏಕೆಂದರೆ ಇವರು ವಿವಿಐಪಿಗಳು. ಗೋದಾವರಿಯಲ್ಲಿ ಪುಣ್ಯ ಸ್ನಾನ ಮಾಡಲು ಇವರೆಲ್ಲ ಬಂದದ್ದರಿಂದ ಆ ಸಮಯದಲ್ಲಿ ಸಾರ್ವಜನಿಕರಿಗೆ ಪ್ರವೇಶ ನಿಷೇಧಿಸಲಾಗಿತ್ತು. ಈ ಪ್ರಮುಖರೆಲ್ಲ ಪರಮಾತ್ಮನ ಕೃಪೆಗೆ ಪಾತ್ರರಾದಮೇಲೆ ದುರಂತ ಸಂಭವಿಸಿತು. ಇದರ ಮೇಲೆ ನೂಕುನುಗ್ಗಲು ತಡೆಯಲು ಪೊಲೀಸರು ಲಾಠಿ ಪ್ರಯೋಗ ಮಾಡಿದ್ದು ಇನ್ನಷ್ಟು ಗೊಂದಲ ಉಂಟುಮಾಡಿತು. ಪುಣ್ಯಕಾಲ ಮುಗಿಯುವ ಇನ್ನುಳಿದ ಹನ್ನೊಂದು ದಿನಗಳೂ ಆಂಧ್ರದ ಮುಖ್ಯಮಂತ್ರಿ ರಾಜಮಂಡ್ರಿಯಲ್ಲೇ ಉಳಿದು ಕೊಂಡು ನಿಯಂತ್ರಿಸುವುದಾಗಿ ಘೋಷಿಸಿದ್ದಾರೆ. ಊರೆಲ್ಲ ಸೂರೆಯಾದ ಮೇಲೆ ಊರು ಬಾಗಿಲು ಮುಚ್ಚಿದರು ಎಂಬಂತೆ ಆಯಿತು. ಇದು ವಿಚಾರಣೆ ಏನೋ ನಡೆಯುತ್ತದೆ. ಆದರೆ ಯಾರಿಗೆ ಶಿಕ್ಷೆಯಾಗುತ್ತದೆ ?




## ಶಿಕ್ಷಣ ಸಚಿವ ಕಿಮ್ಮನೆ ರತ್ನಾಕರ ಅವರಿಗೆ ಬಹಿರಂಗ ಪತ್ರ

✉ ನಮ್ಮ ನಾಡಿನ ಶಿಕ್ಷಣ ವ್ಯವಸ್ಥೆಯಲ್ಲಿ, ಅದರಲ್ಲೂ ಗುಣಾತ್ಮಕ ಶಿಕ್ಷಣದಲ್ಲಿ ಅತೀವ ಕಾಳಜಿಯುಳ್ಳ ನನಗೆ ನಿಮ್ಮೊಡನೆ ನನ್ನ ಅನಿಸಿಕೆಯನ್ನು ಹಂಚಿಕೊಳ್ಳುವ ಉದ್ದೇಶದಿಂದ ಈ ಪತ್ರವನ್ನು ಬರೆಯುತ್ತಿದ್ದೇನೆ. ಇದನ್ನು ಗಂಭೀರವಾಗಿ ಪರಿಗಣಿಸುವಿರಿ ಎಂಬ ವಿಶ್ವಾಸ ನನಗಿದೆ.

ಇತ್ತೀಚೆಗೆ ಕರ್ನಾಟಕ ಸರಕಾರದಿಂದ ನೇಮಕಗೊಂಡ ಸಿಲೆಬಸ್ ಅರ್ಥಾತ್ ಪಠ್ಯಪುಸ್ತಕ ಪರಿಷ್ಕರಣಾ ಸಮಿತಿ ಕಾರ್ಯಾರಂಭ ಮಾಡಿದೆ ಎಂದು ತಿಳಿದ ನನಗೆ ಸಂತೋಷವಾಯಿತು ; ಜೊತೆಯಲ್ಲಿ ಕೆಲವು ಪ್ರಾಮಾಣಿಕ ಸಂದೇಹಗಳು ಮೂಡಿರುವುವು.

ಶಿಕ್ಷಣ ನೀತಿ > ಪಠ್ಯ > ಪಾಠಸೂಚಿ > ಪಠ್ಯಪುಸ್ತಕ : ಮೂಲಭೂತವಾಗಿ, ಕಲಿಕೆ, ಕಲಿಯುವ ಮಗು, ಮಗುವಿನ ಮನಸ್ಸು ಮೊದಲಾದ ಆಧಾರ ತತ್ತ್ವಗಳ ಕುರಿತಾದ ಮಿಥ್ಯಾಭಾವನೆ ಹೋಗಲಾಡಿಸದೆ ಬರೀ ಮೇಲ್ಪದರಿನ ಸಾರಣೆ ಕಾರಣೆಗಳಿಂದ, ಅರ್ಥಾತ್ ಪಠ್ಯಪುಸ್ತಕ ಪರಿಷ್ಕರಣೆಯಿಂದ ಶಿಕ್ಷಣದಲ್ಲಿ ಸುಧಾರಣೆಯಾಗದು ಎಂದು ನಂಬುವೆನು. ಸಿಲೆಬಸ್ ಎಂದರೆ (೧) ಪಾಠಸೂಚಿ, (೨) ಒಂದು ನಿರ್ದಿಷ್ಟ ಪರೀಕ್ಷೆಗೆ ಬೇಕಾಗುವ ವಿಷಯಗಳ ಪಟ್ಟಿ ಎಂಬ ಅರ್ಥ ವಾಡಿಕೆಯಲ್ಲಿದೆ. ಸಿಲೆಬಸ್‌ಗೆ ಸಂಬಂಧಿಸಿದ ಯಾವುದೇ ದುರಸ್ತಿ ಕೆಲಸಕ್ಕೆ ಮೂಲಾಧಾರವಾಗಿ ಬೇಕಾದುದು ಒಂದು ಸ್ಥೂಲವಾದ ಶಿಕ್ಷಣ ನೀತಿ ಮತ್ತು ಅದರಿಂದ ಜನಿತವಾದ ಒಂದು ನಿರ್ದಿಷ್ಟ ಪಠ್ಯ ನೀತಿ ಯಾ ರೂಪರೇಷೆ . ಶೈಕ್ಷಣಿಕ ವಿಚಾರದಲ್ಲಿ ಇವು ಸಂವಿಧಾನ ವಿದ್ದಂತೆ. ಇದರಲ್ಲಿ ಬೋಧನಾ ಮಾಧ್ಯಮವೂ ಒಳಗೊಂಡಿರುವುದು. ಈ ಪಠ್ಯ ನೀತಿ ಇದ್ದಲ್ಲಿ, ಅದರಲ್ಲಿ ಮಗು ಏಕೆ ಕಲಿಯಬೇಕು, ಏನು ಕಲಿಯಬೇಕು, ಎಷ್ಟು ಕಲಿಯಬೇಕು ಮತ್ತು ಹೇಗೆ ಕಲಿಯಬೇಕು ಎಂಬುದರ ವಿವರಣೆ ಮತ್ತು ಮಾರ್ಗಸೂಚಿ ಇರಲೇಬೇಕು. ಅದು ಕಲಿಯುವಾತನ ಹಿತದೃಷ್ಟಿಯಿಂದಿರಬೇಕು. ಅದು ತತ್ತ್ವಶಾಸ್ತ್ರ , ಮನಶ್ಶಾಸ್ತ್ರ , ಸಮಾಜಶಾಸ್ತ್ರದ ಆಧಾರದಲ್ಲೇ ರೂಪುಗೊಂಡಿರಬೇಕು. ಇದು ಸೈದ್ಧಾಂತಿಕ ವಿಚಾರ. ಪಠ್ಯವನ್ನು ಕಾರ್ಯಗತಗೊಳಿಸಲು ಇರುವುದು ಸಿಲೆಬಸ್ ಅಥವಾ ಪಾಠಸೂಚಿ, ಪಠ್ಯ ಪುಸ್ತಕಗಳು, ಬೋಧನಾ ಕ್ರಮ, ಮೌಲ್ಯಮಾಪನ ಕ್ರಮ ಇತ್ಯಾದಿ. ಪಠ್ಯ ಮತ್ತು ಪಠ್ಯಜನ್ಯಗಳ ನಡುವೆ ಹೊಂದಾಣಿಕೆ ಇರಬೇಕು.

ಪಠ್ಯದಲ್ಲಿ ಭಾಷಾ ಮಾಧ್ಯಮ : ಕಲಿಕೆ ಅರ್ಥಪೂರ್ಣಗೊಳ್ಳಲು ಹುಟ್ಟು ಭಾಷೆ ಯಾ ಚಿರಪರಿಚಿತ ಭಾಷಾ ಮಾಧ್ಯಮದ ಮೂಲಕ ಸಾಧ್ಯ ಎಂಬುದು ಸೈದ್ಧಾಂತಿಕ ಮತ್ತು ಸಂಶೋಧನಾಧಾರಿತ ಸತ್ಯ. ಕನ್ನಡ ಮಾಧ್ಯಮ ಸರಕಾರಿ ಶಾಲೆಗಳು ಆಕ್ಸಿಜನ್ ಇಲ್ಲದೆ ಕೊನೆಯುಸಿರು ಎಳೆಯುತ್ತಿರುವಾಗ ಅವುಗಳ ಪುನಶ್ಚೇತನಕ್ಕೆ ಪ್ರಯತ್ನಿಸದೆ ಹೆಚ್ಚೆಚ್ಚು ಇಂಗ್ಲಿಷ್ ಮೀಡಿಯಂ ಶಾಲೆಗಳಿಗೆ ಅನುಮತಿ ನೀಡುವುದರ ಔಚಿತ್ಯವಾದರೂ ಏನು ?

ಪಠ್ಯಪುಸ್ತಕ ತಯಾರಕರು, ಪ್ರಶ್ನಪತ್ರಿಕೆ ಸಿದ್ಧಗೊಳಿಸುವವರು ಸಾಮಾನ್ಯವಾಗಿ ಓರ್ವ 'ಸಾಧಾರಣ' ವಿದ್ಯಾರ್ಥಿಯನ್ನು ಗಮನದಲ್ಲಿರಿಸಿಯೇ ತಮ್ಮ ಕಾರ್ಯವನ್ನು ನಿರ್ವಹಿಸುವರು. ಆದರೆ ವಾಸ್ತವಿಕವಾಗಿ ತರಗತಿಗಳಲ್ಲಿ 'ಸಾಧಾರಣ' ಎಂಬ ಪರಿಕಲ್ಪನೆಯೇ ಅವಾಸ್ತವಿಕವಾದುದು. ಈ ಗೊಂದಲದಲ್ಲಿ ತರಗತಿಯ ಪಾಠ ವ್ಯವಹರಣೆಯ ವಿಚಾರದಲ್ಲಿ 'ಸಾಧಾರಣ' ವಿದ್ಯಾರ್ಥಿಯನ್ನೇ ಗಮನದಲ್ಲಿರಿಸಿಕೊಂಡು ಬಹು ಸಂಖ್ಯೆಯ ವಿದ್ಯಾರ್ಥಿಗಳನ್ನು ಮರೆತಂತೆ ಕಾಣುವುದು. ಪರಿಣಾಮವಾಗಿ ಶಾಲೆ ತೊರೆದವರ ಮತ್ತು ಅನುತ್ತೀರ್ಣರಾದವರ ಸಂಖ್ಯೆ ಗಣನೀಯವಾಗಿದೆ.




ಇಂದು ನಮ್ಮ ಸರಕಾರಿ ಪ್ರಾಥಮಿಕ ಶಾಲೆಗಳಲ್ಲಿ ಸಾಮಾನ್ಯವಾಗಿ ತರಗತಿ ೧ ಮತ್ತು ೨ನ್ನು ('ನಲಿಕಲಿ') ಹೊರತುಪಡಿಸಿ ಉಳಿದೆಲ್ಲಾ ತರಗತಿಗಳಲ್ಲಿ ಮಕ್ಕಳ ಕಲಿಕೆ ಮತ್ತು ಕಲಿಸುವ ವಿಧಾನಗಳು ಯಾಂತ್ರಿಕವಾಗಿ ನಿಷ್ಕ್ರಿಯವಾಗಿ ನಡೆಯುತ್ತವೆ ಎಂಬುದರಲ್ಲಿ ಸಂದೇಹ ಇಲ್ಲ. ಪಠ್ಯಪುಸ್ತಕದಲ್ಲಿದ್ದ ವಿಷಯಗಳ ಮೇಲೆ ರೂಢಿಗತವಾಗಿ ಟಿಪ್ಪಣಿ ಅರ್ಥಾತ್ ಪ್ರಶ್ನೋತ್ತರಗಳನ್ನು ಶಿಕ್ಷಕರು ತಾವೇ ಬರೆಯಿಸಿ, ವಿದ್ಯಾರ್ಥಿಗಳು ಅದನ್ನು ಉರುಹೊಡೆದು ಪರೀಕ್ಷೆಗೆ ಸಿದ್ಧಗೊಳಿಸುವ ವಿಧಾನವು ಸಾರ್ವತ್ರಿಕವಾಗಿ ಪ್ರಚಲಿತವಾಗಿದೆ. ಕೊನೆಯಲ್ಲಿ, ಪರೀಕ್ಷಾ ಫಲಿತಾಂಶದ ಅಂಕ ಸಂಖ್ಯೆಗಳನ್ನು ಎದುರಿಟ್ಟು ಬೀಗುವುದು ಸರ್ವೇಸಾಮಾನ್ಯವಾಗಿದೆ.

ತತ್ಪರಿಣಾಮವಾಗಿ ಕಲಿಕೆಯ ವಿಷಯವು ವಿದ್ಯಾರ್ಥಿಯ ಗ್ರಹಿಕೆಗೆ ಸಿಲುಕದೆ ಕಲಿಕಾ ಪ್ರಕ್ರಿಯೆಯು ಜಡವಾಗಿ ನೀರಸವಾಗಿ ಸಾಗುವುದು. ವಿದ್ಯಾರ್ಥಿ ಮತ್ತು ಶಿಕ್ಷಕ ಇಬ್ಬರೂ ಕಲಿಕೆ–ಕಲಿಸುವಿಕೆ ಕಾರ್ಯದಲ್ಲಿ ಬೌದ್ಧಿಕವಾಗಿ ಭಾವನಾತ್ಮಕವಾಗಿ ತಮ್ಮನ್ನು ತೊಡಗಿಸಿಕೊಳ್ಳದೆ, ವಿಷಯದಲ್ಲಿ ತಲ್ಲೀನರಾಗದೆ ಪಠ್ಯವಸ್ತು–ವಿಷಯಗಳಿಂದ ಹೊರನಿಂತು ನೋಡುವುದಾಗಿದೆ. ಮಕ್ಕಳ ಸ್ವತಂತ್ರ ಚಿಂತನೆಗೆ, ವಿಚಾರಣೆಗೆ, ಪ್ರಶ್ನೆಗಳಿಗೆ ಅವಕಾಶವಿಲ್ಲದೆ ಮೂಕರಾಗಿ ಪಾಠ ಕೇಳಿಸಿಕೊಂಡು ಉರುಹೊಡೆಯುವ ಕ್ರಿಯೆ ಸರ್ವೇಸಾಮಾನ್ಯವಾಗಿದೆ. ವಿಷಯವು ವೈಯಕ್ತಿಕ ನೆಲೆಯಲ್ಲಿ ವಿದ್ಯಾರ್ಥಿಗೆ ಅರ್ಥವಾಗದೆ, ಆತನಿಗೆ ಅರಿಯುವ ಹಂಬಲ ಹೆಚ್ಚಾಗಿ ಇನ್ನೂ ತಿಳಿಯಬೇಕೆಂದು ಪ್ರಶ್ನಿಸಿ ಕಲಿಯಲು ಅವಕಾಶವಿರುವುದಿಲ್ಲ.

ಆಸಕ್ತಿಯೇ ಕಲಿಕೆಗೆ ಮೂಲ, ಅಂದರೆ ಕುತೂಹಲ ಹುಟ್ಟದೆ ಕಲಿಕೆ ಸಾಗದು, ಜ್ಞಾನದ ರಚನೆಯಾಗದು. ಕುತೂಹಲ ಹುಟ್ಟಿದಲ್ಲಿ ಸ್ವಾಭಾವಿಕವಾಗಿ ಪ್ರಶ್ನೆಗಳು ತನ್ನಿಂದ ತಾನೇ ಹುಟ್ಟುವುವು. ಹಾಗೆ ಹುಟ್ಟಿದರೇನೇ ವಿದ್ಯಾರ್ಥಿ ಕಲಿಕಾ ಕಾರ್ಯದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುವನು. ಹಾಗಿದ್ದರೇನೇ ಡ್ಯೂಯಿ, ಬ್ರೂನರ್, ಆಸ್‌ಬೆಲ್ ಮೊದಲಾದ ಶಿಕ್ಷಣತಜ್ಞರ ಅಭಿಪ್ರಾಯದಂತೆ ಅದು 'ಸಕ್ರಿಯ ಕಲಿಕೆ', 'ಸಾರ್ಥಕ ಕಲಿಕೆ'ಯಾಗುವುದು. ಇದುವೇ ಗುಣಾತ್ಮಕ ಶಿಕ್ಷಣದ ಮುಖ್ಯ ಲಕ್ಷಣವಾಗಿದೆ. ಇದೇ ವಿಚಾರವನ್ನು ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (NCF-2005) ಒತ್ತಿ ಒತ್ತಿ ಹೇಳಿರುವುದನ್ನು ಗಮನಿಸಬೇಕು. ದೃಢವಾದ ಸೈದ್ಧಾಂತಿಕ ಹಾಗೂ ಪ್ರಯೋಗವಾದಿ ಆಧಾರವಿಲ್ಲದ ಯಾವುದೇ ಶೈಕ್ಷಣಿಕ ಚಟುವಟಿಕೆಗಳಾಗಲೀ ಕಾರ್ಯಕಲಾಪಗಳಾಗಲೀ ವಿಶ್ವಾಸಾರ್ಹವಾಗದು.

ಆದುದರಿಂದ, ಇಂದು ನಮಗೆ ಬೇಕಾದುದು ಬರೀ ಪಠ್ಯಪುಸ್ತಕ ಪರಿಷ್ಕರಣೆಯಲ್ಲ, ಸಂಶೋಧನಾಧಾರಿತ ಮೂಲಭೂತ ಸುಧಾರಣೆ. ಇದು ಗಂಭೀರ ವಿಚಾರ ಎಂದು ನಿಮಗನಿಸಿದರೆ ಮೊದಲು ಬ್ಲಾಕ್/ಜಿಲ್ಲಾ/ರಾಜ್ಯ ಮಟ್ಟದಲ್ಲಿ ಸಾಕಷ್ಟು ವಿಚಾರ ವಿಮರ್ಶೆಯಾಗಬೇಕು.

ಪುತ್ತೂರು *ಡಾ॥ ಎನ್. ಸುಕುಮಾರ ಗೌಡ*

## ಅಂತರ್‌ಜಾತಿ ವಿವಾಹಿತ ಮಹಿಳೆಯರ ಸಮಸ್ಯೆಗಳಿಗೆ ಕೊನೆಯಿದೆಯೇ !

✉ ಭಾರತವು ಸುಸಂಸ್ಕೃತ ನಾಡು ಎಂಬ ಹೆಗ್ಗಳಿಕೆಯನ್ನು ಹೊಂದಿದೆಯಾದರೂ ಇಲ್ಲಿ ಅಸಂಖ್ಯಾತ ಜಾತಿ, ಉಪಜಾತಿ, ಪಂಗಡಗಳು ಇರುವುದರಿಂದ ಸಮಾಜದಲ್ಲಿ ಜಾತಿ ಸಮಸ್ಯೆಯು ಹಲವಾರು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳನ್ನು ಹುಟ್ಟುಹಾಕಿದೆ. ಆಧುನೀಕರಣ, ಪಾಶ್ಚಾತ್ಯೀಕರಣ, ಕೈಗಾರೀಕರಣಗಳಿಂದ ದೇಶ ಎಷ್ಟೇ ಅಭಿವೃದ್ಧಿ ಪಥದಲ್ಲಿ ಸಾಗಿದರೂ, ಕಾನೂನುಗಳು ಬದಲಾದರೂ, ಭಾರತೀಯ ಸಮಾಜದಲ್ಲಿ ಜಾತಿ ವ್ಯವಸ್ಥೆಯ ಕಲ್ಪನೆ ಇದುವರೆಗೂ ಅಂತರ್‌ಜಾತೀಯ ವಿವಾಹವನ್ನು ಒಂದು ಪವಿತ್ರವಾದ ವೈವಾಹಿಕ ಸಾಮಾಜಿಕ ಸಂಬಂಧ ಎಂದು ಒಪ್ಪಿಕೊಳ್ಳುತ್ತಿಲ್ಲ.

ಆದ್ದರಿಂದಲೇ ಅಂತರ್‌ಜಾತಿ ವಿವಾಹವಾದ ಮಹಿಳೆಯರು ಇಂದು ಹೆಚ್ಚು ಸಮಸ್ಯೆಗಳನ್ನು ನಮ್ಮ ಸಮಾಜದಲ್ಲಿ ಎದುರಿಸುತ್ತಿದ್ದಾರೆ.

ಅಂತರ್‌ಜಾತಿ ವಿವಾಹದ ಹೆಣ್ಣು ಮಗಳು ತನ್ನ ತವರು ಮನೆ, ತನ್ನ ಜಾತಿಯ ಆಚರಣೆ ವಿಧಿವಿಧಾನಗಳೆಲ್ಲವನ್ನೂ ಬಿಡಬೇಕಾದ ಒತ್ತಡಗಳು ಉಂಟಾಗುತ್ತವೆ. ಗಂಡನ ಮನೆಯ ಆಚರಣೆಗಳು ಇಷ್ಟವಿದ್ದರೂ ಇಲ್ಲದೇ ಇದ್ದರೂ ಆಚರಿಸಲೇಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ತನ್ನ ಬಂಧು-ಬಳಗದವರ ನಂಟನ್ನು ಕಡಿದುಹಾಕಿಕೊಳ್ಳಬೇಕಾಗುವ ಸಾಧ್ಯತೆಗಳು ಹೆಚ್ಚಾಗುತ್ತವೆ. ಅಣ್ಣ-ತಮ್ಮ, ಅಕ್ಕ-ತಂಗಿಯರ ಸಂಬಂಧಗಳು ಶಿಥಿಲಗೊಳ್ಳುತ್ತಾ ಕ್ಷೀಣಿಸುತ್ತಾ ಹೋಗುತ್ತವೆ. ಎದುರು ಬಂದರೂ, ಕಂಡರೂ ಕಾಣದಂತೆ ಮುಂದೆ ಸಾಗಬೇಕಾಗುತ್ತದೆ. ಇದರಿಂದಾಗಿ ಸಂಬಂಧಗಳು ಜಾರಿಕೊಳ್ಳುತ್ತವೆ. ಪ್ರೀತಿ ವಾತ್ಸಲ್ಯಗಳು ಮಾಯವಾಗಿ ಹಿತಶತ್ರುಗಳ ರೀತಿಯಲ್ಲಿ ನೋಡಲಾಗುತ್ತದೆ.

ಒಂದು ಸಮುದಾಯದಲ್ಲಿ ಒಬ್ಬ ಮಹಿಳೆ ಅಂತರ್‌ಜಾತಿ ವಿವಾಹವಾಗಿದ್ದಾಳೆಂದರೆ ಆಕೆ ಸಮಾಜ ಮತ್ತು ಸಮುದಾಯದಿಂದ ಅವಮಾನಗಳಿಗೆ ತುತ್ತಾಗುತ್ತಾಳೆ. ಅಂತರ್‌ಜಾತಿ ವಿವಾಹವಾದ ಹೆಣ್ಣಿಗೆ ಮಾತ್ರ ಈ ಅವಮಾನ, ಮಾನಸಿಕ ಹಿಂಸೆಗಳು ಸೀಮಿತವಾಗಿರುವುದಿಲ್ಲ. ಅವಳ ಜೊತೆಗೆ ಆಕೆಯ ಪೋಷಕರೂ ಕೂಡ ಸಂಬಂಧಿಕರ ಚುಚ್ಚು ಮಾತು, ಅವಮಾನ, ಮಾನಸಿಕ ಹಿಂಸೆ ನೋವುಗಳಿಗೆ ಒಳಗಾಗುತ್ತಾರೆ ಹಾಗೂ ಹಲವು ಸಂದರ್ಭಗಳಲ್ಲಿ ಮಾನಕ್ಕೆ ಅಂಜಿ 'ಮರ್ಯಾದಾ ಹತ್ಯೆ' ಎಂಬ ಕ್ರೂರ ಆಟ ಕಣ್ಣಿಗೆ ಕಾಣುವ ಹಾಗೆ, ಕಾಣದ ಹಾಗೆ ನಡೆಯುತ್ತದೆ.

ಅಂತರ್‌ಜಾತಿ ವಿವಾಹವಾದ ಹುಡುಗಿಯರ ಜಾತಿಯಲ್ಲಿನ ವ್ಯತ್ಯಾಸಗಳಿರುವ ಹಾಗೆಯೇ ಅವರು ಅನುಭವಿಸುವ ಹಿಂಸೆ, ಅವಮಾನಗಳಲ್ಲಿನ ಯಾತನೆಗಳಲ್ಲೂ ವ್ಯತ್ಯಾಸವಿದೆ. ಮೇಲ್‌ಜಾತಿ ಹುಡುಗಿ ಕೆಳಜಾತಿಯ ಹುಡುಗನೊಂದಿಗೆ ಮದುವೆಯಾದರೆ ಆತನ ಪೋಷಕರು, ಸಂಬಂಧಿಕರು ಹುಡುಗಿಗೆ ಹೆಚ್ಚು ಕಿರುಕುಳ ಕೊಡದೆ ಇರಬಹುದು. ಆದರೆ ಕೆಳಜಾತಿ ಹುಡುಗಿ ಮೇಲ್‌ಜಾತಿಯ ಹುಡುಗನಿಗೆ ಮದುವೆಯಾದರೆ ಆಕೆಯನ್ನು ಹುಡುಗನ ಪೋಷಕರು, ಸಂಬಂಧಿಕರು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. "ಏನು ಕರ್ಮವೋ, ಎಲ್ಲಿಯದೋ ಪ್ರಾರಬ್ಧ, ನಮ್ಮ ಮನೆಗೆ ಬಂದು ಅಂಟಿಕೊಂಡಿದೆ" ಎಂಬ ಚುಚ್ಚು ಮಾತುಗಳು ಸರ್ವೇಸಾಮಾನ್ಯ. ಹಬ್ಬ-ಹರಿದಿನಗಳ ಸಾಂಪ್ರದಾಯಿಕ ಆಚರಣೆಗಳಲ್ಲಿ, ವಿಶೇಷ ಕಾರ್ಯಕ್ರಮಗಳಲ್ಲಿ ಅವಳನ್ನು ಭಾಗವಹಿಸಲು ಬಿಡದೆ ದೂರ ನಿಲ್ಲಿಸಿ ಅಸ್ಪೃಶ್ಯಳಂತೆ ನೋಡಲಾಗುತ್ತದೆ. ವಿವಾಹದ ನಂತರ ಕುಟುಂಬದಲ್ಲಿ ಯಾವುದೇ ಅಹಿತಕರ ಘಟನೆಗಳು ನಡೆದರೂ ಅದಕ್ಕೆ ಹುಡುಗಿಯೇ ಕಾರಣಳಾಗುತ್ತಾಳೆ. ಆಕೆಯ ಕಾಲ್ಗುಣದಿಂದಲೇ ಇಂತಹ ಅನಾಹುತಗಳು ಜರುಗುತ್ತಿವೆ ಎಂಬ ಆಪಾದನೆಗಳನ್ನು ಹೊರಿಸಲಾಗುತ್ತದೆ. ಅದರಲ್ಲೂ ಮಕ್ಕಳಾಗದೆ ಇದ್ದರೆ ಅವಳ ಕಥೆ ಮುಗಿದಂತೆಯೇ. ಹುಡುಗನಿಗೆ ತಮ್ಮ ಜಾತಿಯಲ್ಲೇ ಮತ್ತೊಂದು ಮದುವೆ ಮಾಡಬೇಕೆಂಬ ಯೋಚನೆ ತಂದೆ-ತಾಯಿಗಳ ಮನಸ್ಸಿನಲ್ಲಿ ಮೂಡುತ್ತದೆ. ಇದರಿಂದ ನೊಂದ ಮಹಿಳೆ ಮಾನಸಿಕ-ದೈಹಿಕ ಕ್ರೌರ್ಯಗಳಿಗೆ ಒಳಗಾಗುತ್ತಾ ಹೋಗುತ್ತಾಳೆ ಹಾಗೂ ಸಮಾಜದ ಕೆಂಗಣ್ಣಿಗೆ ಗುರಿಯಾಗುತ್ತಾಳೆ.

ಅಂತರ್‌ಜಾತಿಯ ವಿವಾಹವಾದ ಮಹಿಳೆಯರು ಈ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದು ನಿಜವಾದರೂ, ಹಾಗೆ ಮದುವೆಯಾದ ಪ್ರತಿಯೊಬ್ಬರೂ ಇಂತಹ ಸಮಸ್ಯೆಗಳನ್ನು ಎದುರಿಸುವುದಿಲ್ಲ. ಸರಿಯಾದ ರೀತಿಯಲ್ಲಿ ಸಮಾಜೀಕರಣಗೊಂಡು, ಬದುಕನ್ನು ಅರ್ಥಮಾಡಿಕೊಂಡ, ಶಿಕ್ಷಿತ ಕುಟುಂಬಗಳಲ್ಲಿ ಅಂತರ್‌ಜಾತಿ ವಿವಾಹವು ಒಂದು ಸಮಸ್ಯೆಯಾಗುವುದಿಲ್ಲ. ಬದಲು ಪ್ರೀತಿ, ವಿಶ್ವಾಸಗಳ ನೆಲೆಯಾಗಿರುತ್ತದೆ.

*ವಾಣಿ ಪಾಲ್ವೆ, ಎನ್.*

## ಯೋಚಿಸಿ ಮತದಾನ ಮಾಡಿ

✉ ಭಾರತ ದೇಶ ವಿಶಾಲವಾದ ರಾಷ್ಟ್ರ. ಇಂತಹ ವಿಶಾಲವಾದ ದೇಶದಲ್ಲಿ ಪ್ರಜಾಪ್ರಭುತ್ವವನ್ನು ಅಳವಡಿಸಿ ಯಶಸ್ವಿಯಾಗಿರುವದು ಭಾರತದ ಸಾಧನೆಯೇ ಸರಿ. ಅದರಲ್ಲೂ ಸಾರ್ವತ್ರಿಕ ವಯಸ್ಕ ಮತದಾನವನ್ನು ಅಳವಡಿಸಿಕೊಂಡಿರುವದು ವಿಶೇಷ. ಪ್ರಾಚೀನ ಗ್ರೀಕ್ ದೇಶದಲ್ಲಿ ಮಹಿಳೆಯರಿಗೆ, ವಿದೇಶಿಯರಿಗೆ, ಗುಲಾಮರಿಗೆ ಮತದಾನದ ಹಕ್ಕನ್ನು ನೀಡಿರಲಿಲ್ಲ. ಆ ಮತದಾನದ ಹಕ್ಕನ್ನು ಪಡೆಯಲು ಹಲವಾರು ರಾಷ್ಟ್ರಗಳು ಕ್ರಾಂತಿಯನ್ನೇ ಮಾಡಿವೆ. ೨೦ನೇ ಶತಮಾನದ ಆದಿಭಾಗದತನಕ ಬ್ರಿಟನ್ನಿನಲ್ಲಿ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿರಲಿಲ್ಲ, ಹೋರಾಟದ ನಂತರ ಅದನ್ನು ನೀಡಲಾಯಿತು.

ಅಮೇರಿಕದಲ್ಲೂ ಕೂಡ ಮತದಾನದ ಹಕ್ಕನ್ನು ಪುರುಷರಿಗೆ ೧೮೪೦ರಲ್ಲಿ ಜಾರಿಗೆ ತಂದರೆ, ಮಹಿಳೆಯರಿಗೆ ೧೯೧೯ರಲ್ಲಿ ನೀಡಲಾಯಿತು. ಸ್ವಿಟ್ಜರ್‌ಲೆಂಡ್‌ನಲ್ಲಿ ೧೯೭೧ರಲ್ಲಿ ಮತಾಧಿಕಾರವನ್ನು ನೀಡಲಾಯಿತು. ಫ್ರಾನ್ಸ್ ದೇಶದಲ್ಲಿ ೧೮೭೫ರಲ್ಲಿ, ಇಟಲಿಯಲ್ಲಿ ೧೯೪೮ರಲ್ಲಿ ಮಹಿಳೆಯರಿಗೆ ಮತಾಧಿಕಾರವನ್ನು ನೀಡಲಾಯಿತು. ಆದರೆ ಭಾರತ ದೇಶದಲ್ಲಿ ಸಂವಿಧಾನ ರಚನಾಕಾರರು ಸುಮಾರು ೬೦ ವಿವಿಧ ದೇಶಗಳ ಸಂವಿಧಾನಗಳನ್ನು ಅಧ್ಯಯನ ಮಾಡಿ ಸುಮಾರು ಮೂರು ವರ್ಷಗಳ ಕಾಲ ಸತತವಾಗಿ ಪರಿಶೀಲಿಸಿ ಈ ಸಂವಿಧಾನವನ್ನು ರಚಿಸಿದರು.

ನಮಗೆ ನೀಡಿದ ಮತಾಧಿಕಾರದ ಮಹತ್ವ ಏನು? ನಾವು ಎಂಥವರಿಗೆ ಅದನ್ನು ನೀಡಬೇಕು? ಅವರಿಂದ ಹೇಗೆ ಕೆಲಸ ಮಾಡಿಸಿಕೊಳ್ಳಬೇಕೆಂಬ ಪರಿಜ್ಞಾನ ನಮ್ಮಲ್ಲಿ ಬರದೆ ಮತದಾನ ಅರ್ಥಪೂರ್ಣವಾಗದು. ಅದಕ್ಕಾಗಿ ಪ್ರಜೆಗಳೇ, ನೋಟಿಗಾಗಿ, ಸೀರೆಗಾಗಿ, ಸಾರಾಯಿ ಪಾಕೇಟಿಗಾಗಿ ಇನ್ನಾವುದೋ ಆಸೆಗಾಗಿ ನಿಮ್ಮ ಅಮೂಲ್ಯವಾದ ಮತವೆಂಬ ಮಾಣಿಕ್ಯವನ್ನು ಮಂಗನ ಕೈಗೆ ನೀಡಬೇಡಿ. ನೀಡಿ ದೇಶವನ್ನ ಪಾಪದ ಕೂಪಕ್ಕೆ ತಳ್ಳಬೇಡಿ ಎಂಬುದು ನನ್ನ ಕಳಕಳಿಯ ವಿನಂತಿ. ರಾಜಕಾರಣಿಗಳು ಮುಗ್ಧ ಜನಸಾಮಾನ್ಯರನ್ನು ತಮ್ಮ ಘೋಷಣೆಗಳು ಮತ್ತು ಭಾಷಣಗಳ ಮೂಲಕ ಮರುಳುಗೊಳಿಸಿ ಓಟುಗಳನ್ನು ಕಸಿದುಕೊಳ್ಳುತ್ತಾರೆ. ಈ ವಿಷಯವಾಗಿ ಪಿ. ಕೆ. ಸೇನ್ ಎಂಬ ಚಿಂತಕ ಹೀಗೆ ಹೇಳುತ್ತಾರೆ: "ವಯಸ್ಕ ಮತದಾನವೆಂಬ ನಕ್ಷೆ ಇಲ್ಲದ ಸಾಗರದ ಮೇಲೆ ಯಾವ ಸಾಹಸಕ್ಕೂ ತೆಪ್ಪವನ್ನು ಹತ್ತುವದಕ್ಕೆ ಮೊದಲು ಅದರಲ್ಲಿ ಹೋಗುವದು ಹೇಗೆ? ಎಂದು ಸ್ವಲ್ಪ ಎಚ್ಚರಿಕೆಯಿಂದ ಯೋಚಿಸಬೇಕು. ನಮ್ಮ ಪ್ರಜಾಪ್ರಭುತ್ವ ಇನ್ನೂ ಪಕ್ವವಾಗಿಲ್ಲ. ನಮಗೆ ಇನ್ನೂ ಕೊಲ್ಲಿಗಳು, ಮರಳು ದಿಬ್ಬಗಳು, ಎದುರಾಗುವ ಸಮಸ್ಯೆಗಳು, ಗಂಡಾಂತರಗಳು ಇವುಗಳ ಬಗ್ಗೆ ಅರಿವು ಮೂಡಬೇಕಾಗಿದೆ".

ಅದಕ್ಕಾಗಿ ನಾವು ಬಲು ಎಚ್ಚರಿಕೆಯಿಂದ ಮತದಾನ ಮಾಡಿ ನಮ್ಮ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ, "ಕೊಟ್ಟವನು ಕೋಡಂಗಿ ಈಸ್ಕಂಡವನು ಈರಭದ್ರ" ಎಂಬಂತಾಗಬಾರದೆಂದರೆ, ಮತದಾನ ಮಾಡಿದ ಮೇಲೆಯೂ ನಮಗೆ ಬೆಲೆ ಇರಬೇಕಾದರೆ ನಮ್ಮ ಅಮೂಲ್ಯ ಮತವನ್ನು ಸೂಕ್ತ ವ್ಯಕ್ತಿಗಳಿಗೆ, ಪಕ್ಷಗಳಿಗೆ ಹಾಕಬೇಕು. ಮತದಾನವನ್ನು ಮಾಡದೆ ಇರುವದು ಅಕ್ಷಮ್ಯ ಅಪರಾಧ. ಅದು ನಮ್ಮ ಜವಾಬ್ದಾರಿಯಿಂದ ಜಾರಿಕೊಂಡಂತೆ. ಅದಕ್ಕಾಗಿ ನಮ್ಮ ನಮ್ಮ ಜವಾಬ್ದಾರಿಯನ್ನು ಅರಿತು ಕಡ್ಡಾಯವಾಗಿ ಮತದಾನ ಮಾಡೋಣ. ಸುಭದ್ರ ರಾಷ್ಟ್ರ ನಿರ್ಮಾಣ ಮಾಡುವ ಸಮರ್ಥ ಸೇನಾನಿಗಳು ನಾವಾಗೋಣ. ಮಾರ್ಚ್ ೧೯೮೯ರಂದು ಭಾರತ ಸಂವಿಧಾನಕ್ಕೆ ೬೧ನೇ ತಿದ್ದುಪಡಿಯನ್ನು ಮಾಡಿ ಮತದಾನದ ವಯಸ್ಸನ್ನು ೨೧ರಿಂದ ೧೮ಕ್ಕೆ ಇಳಿಸಲಾಯಿತು. ಇಂದು ಭಾರತದಲ್ಲಿ ಮತದಾನದ ಹಕ್ಕು ಪಡೆದಿರುವ ವಯಸ್ಕರ ಸಂಖ್ಯೆ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೬೫ಕ್ಕೂ ಮೀರಿದೆ. ಪ್ರಥಮ ಸಾರ್ವತ್ರಿಕ ಚುನಾವಣೆಯ ಸಮಯದಲ್ಲಿ ಮತದಾರರ ಒಟ್ಟು ಸಂಖ್ಯೆ ಸುಮಾರು ೧೮ ಕೋಟಿಗಳಿದ್ದುದು ೧೯೭೭ರ ಆರನೆಯ ಸಾರ್ವತ್ರಿಕ ಚುನಾವಣೆಯಲ್ಲಿ ೩೨ ಕೋಟಿಗೂ, ೧೯೮೦ರ ಏಳನೆಯ ಸಾರ್ವತ್ರಿಕ ಚುನಾವಣೆ ಸಮಯದಲ್ಲಿ ೩೬ ಕೋಟಿಗೂ, ೧೯೯೮ರ ಹದಿನಾಲ್ಕನೇ ಸಾರ್ವತ್ರಿಕ ಚುನಾವಣೆಯ ಸಮಯಕ್ಕೆ ೬೦ ಕೋಟಿಗೂ ಏರಿದೆ. ಹೀಗಾಗಿ ನಾವೆಲ್ಲರೂ ಕಡ್ಡಾಯವಾಗಿ ಮತದಾನ ಮಾಡೋಣ. ನಮ್ಮ ಹಕ್ಕನ್ನು ಚಲಾಯಿಸೋಣ, ಮತಗಟ್ಟೆ ವಶ, ಅಭ್ಯರ್ಥಿಗಳ ಅಪಹರಣ, ರಿಗ್ಗಿಂಗ್ ಮುಂತಾದ ಅಪರಾಧಗಳನ್ನು ತಡೆದು ಒಬ್ಬ ವ್ಯಕ್ತಿಗೆ ಒಂದೇ ಮತ ಎನ್ನುವ ಸಿದ್ಧಾಂತವನ್ನು ಬಲಗೊಳಿಸಲು ಗುರುತಿನ ಚೀಟಿ, ಇ. ವಿ. ಎಮ್. ಮುಂತಾದ ಸುಧಾರಣೆಗಳನ್ನು ತಂದು ಪಾರದರ್ಶಕ ಚುನಾವಣೆ ಗಳಿಗಾಗಿ ಕೇಂದ್ರ ಮತ್ತು ರಾಜ್ಯ ಚುನಾವಣಾ ಆಯೋಗಗಳು ಶ್ರಮಿಸುತ್ತಿವೆ. ಅವುಗಳ ಶ್ರಮವನ್ನು ನಾವು "ನೀರಿನಲ್ಲಿ ಹೋಮ" ಮಾಡುವದು ಬೇಡ.

*ಎಚ್. ಸುರೇಶ ಬಳಗಾನೂರು*

## ಅನ್ನ ಭಾಗ್ಯ : ಹಸಿದವನ ತುತ್ತಿನ ಮೇಲೇಕೆ ಉಳ್ಳವರ ಕಣ್ಣು ?

✉ ಸರ್ಕಾರದ 'ಅನ್ನ ಭಾಗ್ಯ' ಯೋಜನೆಯ ಮೇಲೆ ಇತ್ತೀಚಿಗೆ ಉಳ್ಳವರೊಂದಿಗೆ ಹಸಿವು, ಬಡತನದ ಬಗ್ಗೆ ನೊಂದು ಕತೆ, ಕವಿತೆ ಬರೆದ ಸಾಹಿತಿಗಳೂ ಸಹ ಕೊಂಕಿನ ಮಾತನಾಡುತ್ತಿರುವುದನ್ನು, ಲೇವಡಿ ಮಾಡುತ್ತಿರುವುದನ್ನು ನೋಡಿ ಮನಸ್ಸಿಗೆ ಹಿಂಸೆಯೆನಿಸುತ್ತದೆ. ಹಸಿವಿನಿಂದ ಬಳಲುತ್ತಿರುವವರಿಗೆ ಒಂತುತ್ತು ಅನ್ನ ನೀಡುವ ಈ 'ಅನ್ನ ಭಾಗ್ಯ' ಯೋಜನೆಯು ನಿಜಕ್ಕೂ ಒಂದೊಳ್ಳೆಯ ಯೋಜನೆ. "ಹಸಿವಿನ ಬೇಗೆಯಲ್ಲಿದ್ದವರಿಗೆ ಒಂದಿಷ್ಟು ಅಕ್ಕಿ ಕೊಡುವುದರಿಂದ ಅವರು ಸೋಮಾರಿಗಳಾಗುತ್ತಾರೆ ; ಅಕ್ಕಿ ಉಚಿತವಾಗಿ ಸಿಗುವುದರಿಂದ ಅಕ್ಕಿ ಖರೀದಿಸಿದ್ದರೆ ವ್ಯಯವಾಗಬಹುದಾದ ಉಳಿಕೆ ಹಣವನ್ನು ದುರುಪಯೋಗಮಾಡಿಕೊಳ್ಳುತ್ತಾರೆ ; ದುಡಿಯದೇ ಕುಳಿತು ಉಣ್ಣುತ್ತಾರೆ ; ಇವರಿಗೇಕೆ ಉಚಿತವಾಗಿ ಅನ್ನ ಕೊಡಬೇಕು ? ಆದ್ದರಿಂದ ಇದು ಸರ್ಕಾರದ ಮೂರ್ಖ ನಿರ್ಧಾರ" ಎಂಬ ಟೀಕೆಗೆ ಈ ಯೋಜನೆ ಗುರಿಯಾಗುತ್ತಿದೆ.

ಈ ರೀತಿ ವಾದಿಸುವವರಿಗೆ ನನ್ನ ಕೆಲವು ಪ್ರಶ್ನೆಗಳು: "ಒಂದು ವೇಳೆ ನಿಮಗೂ ಈ ಯೋಜನೆ ಅನ್ವಯವಾಗುತ್ತಿದ್ದರೆ ಎಲ್ಲರಿಗಿಂತ ಮುಂಚೆ ಕೈಚೀಲ ಹಿಡಿದುಕೊಂಡು ಸರದಿಯಲ್ಲಿ ನೀವೂ ನಿಲ್ಲುತ್ತಿರಲಿಲ್ಲವೇ ?" "ಕೈಗೆ ಸಿಗದ ದ್ರಾಕ್ಷಿ ಹುಳಿ ಎಂಬಂತೆ" ನೀವು ಈ ಯೋಜನೆಯ ಫಲಾನುಭವಿಗಳಲ್ಲದ ಕಾರಣ ಈ ಕೊಂಕೇ ? ಒಂದು ವೇಳೆ ನೀವು ಸರ್ಕಾರಿ ನೌಕರರಾಗಿದ್ದರೆ ನಿಮಗೆ ಆರ್ಥಿಕವಾಗಿ ಅವಶ್ಯವಿರಲಿ, ಇಲ್ಲದಿರಲಿ ಪ್ರತಿ ಆರು ತಿಂಗಳಿಗೊಮ್ಮೆ ಸರ್ಕಾರ ಕೊಡುವ ತುಟ್ಟಿಭತ್ಯೆಯನ್ನು ವರ್ಷಕ್ಕೊಮ್ಮೆ ಕೊಡುವ ವೇತನ ಬಡ್ತಿಯನ್ನು ಸದ್ದಿಲ್ಲದೇ ಪಡೆಯುತ್ತೀರಲ್ಲ, ಒಂದಾದರೂ ತುಟ್ಟಿಭತ್ಯೆ / ವೇತನ ಬಡ್ತಿಯನ್ನು ಉದಾರ ಮನಸ್ಸಿನಿಂದ ಬಿಟ್ಟಿದ್ದೀರಾ ? ಪ್ರತಿ ಆರು ತಿಂಗಳಿಗೊಮ್ಮೆ ತುಟ್ಟಿಭತ್ಯೆ, ಪ್ರತಿವರ್ಷಕ್ಕೊಮ್ಮೆ ವೇತನ ಬಡ್ತಿಯನ್ನು ಪಡೆಯುವ ನೀವು ಸೋಮಾರಿಗಳಾಗುವುದಿಲ್ಲವೇ ? ಅವಶ್ಯಕತೆಗಿಂತ ಹೆಚ್ಚಿಗೆ ದೊರೆಯಬಹುದಾದ ಈ ಅಧಿಕ ಮೊತ್ತವನ್ನು ನೀವೂ ದುರುಪಯೋಗಪಡಿಸಿಕೊಳ್ಳುವುದಿಲ್ಲವೇ ?

ಹಸಿದವರಿಗೆ ನೀಡುವ ಅನ್ನದ ಬಗ್ಗೆ ಏಕೀ ಆಕ್ರೋಶ ? ನನಗೆ ತಿಳಿಯುತ್ತಿಲ್ಲ.

ತೀರಾ ಬಡವರಿಗಿಂತ ಒಂಚೂರು ಆರ್ಥಿಕವಾಗಿ ಉಳ್ಳವರು (ನನ್ನನ್ನೂ ಒಳಗೊಂಡಂತೆ) ಯೋಚಿಸಬೇಕಾದ ವಿಷಯವೆಂದರೆ, ಪ್ರಧಾನ ಮಂತ್ರಿ ನರೇಂದ್ರ ಮೋದಿಯವರು ಇತ್ತೀಚಿಗೆ ಅಡುಗೆ ಅನಿಲದ ಮೇಲೆ ನೀಡುವ ರಿಯಾಯ್ತಿಯನ್ನು ಸ್ವಯಂಪ್ರೇರಣೆಯಿಂದ ಬಿಟ್ಟುಬಿಡಲು ಒಂದು ಅವಕಾಶ ನೀಡಿದ್ದಾರಲ್ಲ, ನಾವೆಷ್ಟು ಜನ ಸ್ವಯಂಪ್ರೇರಣೆಯಿಂದ ಈ ರಿಯಾಯ್ತಿಯನ್ನು ಬಿಟ್ಟುಕೊಟ್ಟಿದ್ದೇವೆ ? ಹಾಗೆ ಬಿಟ್ಟುಕೊಡುವ ಮೂಲಕ ನಾವೂ ಒಂದಿಷ್ಟು ಉದಾರತನ ತೋರುವ ಮನಸ್ಸೇಕೆ ಮಾಡುವುದಿಲ್ಲ ? ಸರ್ಕಾರದ ಹಲವಾರು ಯೋಜನೆಗಳು ಮೂಲತಃ ಚೆನ್ನಾಗಿಯೇ ಇರುತ್ತವೆ, ಆದರೆ ಅವುಗಳ ಅನುಷ್ಠಾನದಲ್ಲಿ ಸಮಸ್ಯೆಗಳಿರುತ್ತವೆ. ಹಾಗೆಂದು ಸಾರಾಸಗಟಾಗಿ ಯೋಜನೆಯನ್ನೇ ಅಲ್ಲಗಳೆಯಲಾಗದು. ಯೋಜನೆಗಳು ವಿಫಲವಾಗಲು ನಾವು ಎಷ್ಟರಮಟ್ಟಿಗೆ ಕಾರಣ ಎಂಬುದನ್ನು ಯೋಚಿಸಬೇಕು. ಅಲ್ಲಿ ನಮ್ಮ ಪಾತ್ರ ಏನೆಂಬುದನ್ನು ಚಿಂತಿಸಬೇಕಲ್ಲವೇ ? ಸದಾ ತನ್ನ ಹಸಿವಿನ ಬಗ್ಗೆ ಚಿಂತಿಸುವವ ಕೇವಲ ಒಬ್ಬ ಸ್ವಾರ್ಥಿಯಾಗಿರುತ್ತಾನೆ, ತನ್ನ ಹಸಿವಿನೊಂದಿಗೆ ಇನ್ನೊಬ್ಬರ ಹಸಿವಿನ ಕುರಿತು ಚಿಂತಿಸುವವ ಮಾನವನಾಗುತ್ತಾನೆ, ಇನ್ನೊಬ್ಬರ ಹಸಿವನ್ನೇ ತನ್ನ ಹಸಿವೆಂದು ಸಂಕಟಪಡುವವ ಮಹಾತ್ಮನಾಗುತ್ತಾನೆ, ಸಂತ, ಶರಣನಾಗುತ್ತಾನೆ. ಕನಿಷ್ಠ ನಾವು ಇನ್ನೊಬ್ಬರ ಹಸಿವಿನ ಕುರಿತು ಚಿಂತಿಸುವ ಮಾನವರಾದರೂ ಆಗಬೇಕಲ್ಲವೇ ?

*ಕಲಬುರಗಿ* ***ವೆಂಕಟೇಶ ಕೆ. ಜನಾದ್ರಿ***

## ವಿದ್ಯಾರ್ಥಿಗಳೇಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ ?

✉ ಪರೀಕ್ಷೆ ಪಾಸಾಗದವರು ಆತ್ಮಹತ್ಯೆ ಮಾಡಿಕೊಳ್ಳುವ ಪ್ರವೃತ್ತಿ ಇತ್ತೀಚಿನ ದಿನಗಳಲ್ಲಿ ಸಮೂಹ ಸನ್ನಿಯಾಗುತ್ತಿರುವುದು ಆತಂಕದ ವಿಷಯ. ನಮ್ಮ ಯುವ ಜನಾಂಗ ಓದಿ-ಓದಿ ಕೂಚುಭಟ್ಟರಾಗುತ್ತಿದ್ದಾರೆಯೇ ಹೊರತು ಪ್ರಜ್ಞಾವಂತರಾಗುತ್ತಿಲ್ಲ ಎಂಬುದಕ್ಕೆ ಹಲವಾರು ಕಾರಣಗಳಿವೆ. ಎಸ್.ಎಸ್.ಎಲ್.ಸಿ., ಪಿ.ಯು.ಸಿ., ಪರೀಕ್ಷೆಯಲ್ಲಿ ಉತ್ತೀರ್ಣರಾಗದಿದ್ದರೆ ಅಥವಾ ಹೆಚ್ಚಿನ ಅಂಕ ಬರದಿದ್ದರೆ ಮುಂದೆ ಭವಿಷ್ಯವೇ ಇಲ್ಲ ಎಂಬ ಅವಿವೇಕತನವೇ ಆತ್ಮಹತ್ಯೆಯಂತಹ ಅಂತಿಮ ನಿರ್ಧಾರಕ್ಕೆ ಕಾರಣವಾಗುತ್ತದೆ. ತಮ್ಮ ಮಕ್ಕಳು ಹೆಚ್ಚು ಹೆಚ್ಚು ಅಂಕಗಳನ್ನು ತೆಗೆಯಬೇಕು ಹಾಗೂ ಮುಂದೆ ವೈದ್ಯಕೀಯ ಇಲ್ಲವೆ, ಇಂಜಿನಿಯರಿಂಗ್ ಶಿಕ್ಷಣವನ್ನೇ ಸೇರಬೇಕು ಎಂದೆಲ್ಲಾ ಅತಿ ಆಸೆಯನ್ನು ತಂದೆ-ತಾಯಂದಿರು ಇಟ್ಟುಕೊಂಡಿರುತ್ತಾರೆ. ಬೇರೆ ಆಯ್ಕೆಗಳಿವೆ, ಅವಕಾಶಗಳಿವೆ ಎಂಬುದು ತೋಚುವುದೇ ಇಲ್ಲ. ಇದರಿಂದ ವಿದ್ಯಾರ್ಥಿಗಳು ಒತ್ತಡಕ್ಕೆ ಸಿಲುಕಿ ಬಳಲುವಂತೆ ಮಾಡುತ್ತದೆ. ಶಕ್ತಿಮೀರಿ ಓದಲು ಹೋಗಿ ಅವರು ಮಾನಸಿಕವಾಗಿ ದುರ್ಬಲರೂ ಖಿನ್ನರೂ ಆಗುತ್ತಾರೆ. ಫಲಿತಾಂಶದಲ್ಲಿ ಕಡಿಮೆ ಅಂಕ ಬಂದವರು ಅವಮಾನ ಸಹಿಸದೆ, ತಂದೆ-ತಾಯಿಗೆ ಮುಖ ತೋರಿಸಲಾಗದೆ ಪರ್ಯಾಯ ಮಾರ್ಗವೇ ಇಲ್ಲ ಎಂಬ ಭಾವನೆಗಳಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಆ ಸಮಯದಲ್ಲಿ ಅವರು ಪೋಷಕರಿಂದ, ಶಿಕ್ಷಕರಿಂದ, ಸಂಬಂಧಿಕರಿಂದ, ಸ್ನೇಹಿತರಿಂದ ಒತ್ತಡಕ್ಕೆ ಸಿಲುಕಿರುತ್ತಾರೆ.

ಇಂದಿನ ಶಿಕ್ಷಣವು ಬದುಕುವ ಕಲೆಯನ್ನು ಕಲಿಸುತ್ತಿಲ್ಲ. ಜೀವನದಲ್ಲಿ ಬರುವ ಕಷ್ಟಗಳನ್ನು ಎದುರಿಸುವ ಎದೆಗಾರಿಕೆಯನ್ನು ವಿದ್ಯಾರ್ಥಿಗಳಿಗೆ ಕೊಡುತ್ತಿಲ್ಲ. ಇಂದಿನ ಓದಿನ ಗುರಿ ಹೆಚ್ಚಿನ ಅಂಕಗಳಿಸುವುದು, ಎನ್ನುವ ಏಕೈಕ ಧ್ಯೇಯವನ್ನು ಪಾಲಕರು ತಮ್ಮ ಮಕ್ಕಳಿಗೆ ಎಳೆಯ ವಯಸ್ಸಿನಿಂದಲೇ ತುಂಬುತ್ತಾರೆ. ಇದರಿಂದ ಹೆಚ್ಚಿನ ಅಂಕಗಳು ಬರದಿದ್ದರೆ ಭವಿಷ್ಯವೇ ಇಲ್ಲ ಎಂದು ಭಾವಿಸಿ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಈ ವಯಸ್ಸಿನಲ್ಲಿ ಉಂಟಾಗುವ ಭಾವನಾತ್ಮಕ ಅಸ್ಥಿರತೆಯೇ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಪ್ರೇರೇಪಿಸುತ್ತದೆ.

ಆತ್ಮಹತ್ಯೆಗೆ ಪ್ರಯತ್ನಿಸುವವರಲ್ಲಿ ಹೆಚ್ಚುಪಾಲು ಬುದ್ಧಿವಂತರೇ ಇರುತ್ತಾರೆ ಎಂದರೆ ಅಚ್ಚರಿಯಾಗುತ್ತದೆ. ಪುಸ್ತಕಗಳಲ್ಲಿ ಆದರ್ಶಗಳ ಬಗ್ಗೆ ಓದಿ, ಕಲ್ಪನಾಲೋಕದಲ್ಲಿ ವಿಹರಿಸುತ್ತಿದ್ದ ಮುಗ್ಧ ಮನಕ್ಕೆ ಇದ್ದಕ್ಕಿದ್ದಂತೆ ಎದುರಾಗುವುದು ಬಡತನ, ನಿರುದ್ಯೋಗ, ಮೋಸ, ವಂಚನೆ, ಕಪಟಗಳ ವಾಸ್ತವಿಕ ಬದುಕು. ಸಾಮಾನ್ಯವಾಗಿ ಬದುಕಿನ ಬಗ್ಗೆ ಎಲ್ಲರೂ ತಮ್ಮದೇ ಆದ ಸ್ಪಷ್ಟ ಕಲ್ಪನೆ ಹೊಂದಿರುತ್ತಾರೆ. ತಾವು ಅಂದುಕೊಂಡಂತೆ ಸಾಧಿಸಲಾಗದಿದ್ದಾಗ ಎದೆಗುಂದುತ್ತಾರೆ. ತಮ್ಮ ಆಸೆ ಮಹತ್ತರವಾದುದು ಎಂಬ ನಂಬಿಕೆ ಸ್ಥಿರವಾಗಿರುತ್ತದೆ. ಆದರೂ ಹೊರಗಿನ ಒತ್ತಡ ಹೆಚ್ಚಾದಾಗ ಇಂತಹ ಬುದ್ಧಿವಂತರೂ ಕುಸಿದುಹೋಗುತ್ತಾರೆ. ತಾವು ಇನ್ನೇನನ್ನೂ ಸಾಧಿಸಲಾರೆವು ಎಂಬ ಭಾವನೆ ಗಟ್ಟಿಯಾಗುತ್ತದೆ, ಆತ್ಮವಿಶ್ವಾಸ ಕುಂಠಿತವಾಗುತ್ತದೆ. ನಂಬಿಕೆಯ ನೆಲೆಗಳು ಬತ್ತಿ ಹೋದಂತಾಗುತ್ತದೆ. ಸಣ್ಣ ಹಾದಿಯಲ್ಲಿ ಸಾಗಲು ಮನಸ್ಸು ಒಪ್ಪುವುದಿಲ್ಲ. ಇದರಿಂದ ಅತೃಪ್ತಿ ಕಂಡು ಸಾವಿಗೆ ಶರಣಾಗುತ್ತಾರೆ.

ಮಕ್ಕಳ ಮನಃಸ್ಥಿತಿ ಗುರುತಿಸಿ ಪೋಷಕರು ಅವರಿಗೆ ಆತ್ಮವಿಶ್ವಾಸ ತುಂಬುವ ಕೆಲಸ ಮಾಡಬೇಕು. ಇವತ್ತಿನ ಸ್ಪರ್ಧಾ ಜಗತ್ತಿನ ರೇಸಿನಲ್ಲಿ ನೀವೂ ಭಾಗವಹಿಸಿ, ತಪ್ಪಲ್ಲ. ಆದರೆ ವಿಫಲರಾದರೆ ಜೀವನ ಅಲ್ಲಿಗೆ ಮುಗಿಯಿತು ಎಂದು ಹತಾಶರಾಗಬೇಕಿಲ್ಲ. ನಾವು ಇಂದು ಸ್ಪರ್ಧಾತ್ಮಕ ಯುಗದಲ್ಲಿ ಜೀವಿಸುತ್ತಿದ್ದೇವೆ, ಹೌದಲ್ಲವೇ ! ಒಂದು ನೂರು ಉದ್ಯೋಗವಿರುವ ಕೆಲಸಕ್ಕೆ ಒಂದು ಸಾವಿರ ಜನ ಪ್ರತಿಭಾವಂತರೇ ಸ್ಪರ್ಧಿಸುತ್ತಾರೆ ಎಂದಿಟ್ಟುಕೊಳ್ಳಿ. ಅವರಲ್ಲಿ ಯಶಸ್ವಿಯಾಗುವವರು ಕೆಲವೇ ಮಂದಿ, ಅಂದರೆ ನೂರೇ ನೂರು ಜನ ! ಹಾಗಾದರೆ ಉಳಿದವರೇನು ಮಾಡಬೇಕು ? ಒಂದು ಸಾವಿರ ಮಂದಿ ಬೇರೆ ಬೇರೆ ಆಸಕ್ತಿಯುತ ಕ್ಷೇತ್ರಗಳಲ್ಲಿ ದುಡಿಯಬಲ್ಲರು. ಹೊಸ ಉದ್ಯೋಗಗಳನ್ನು ಹಾಗೂ ವ್ಯವಸ್ಥೆಯನ್ನು ಸೃಷ್ಟಿಸುವುದು ಮತ್ತು ಸರಿಪಡಿಸುವುದು ಸರ್ಕಾರದ ನಿಜವಾದ ಅಂತಿಮ ಪರಿಹಾರ, ಅಲ್ಲವೇ ? ತಂದೆ-ತಾಯಂದಿರು ಮಕ್ಕಳಲ್ಲಿ ಪ್ರೀತಿ-ವಾತ್ಸಲ್ಯ ತೋರಿಸಿ ಅವರೊಂದಿಗೆ ಮಧುರಬಾಂಧವ್ಯ ಬೆಳೆಸಿಕೊಳ್ಳಬೇಕು. ಶಾಲಾ ಕಾಲೇಜುಗಳಲ್ಲೂ ಸಲಹಾ ಕೇಂದ್ರಗಳನ್ನು ತೆರೆದು ನುರಿತ ವೈದ್ಯರಿಂದ ವಿದ್ಯಾರ್ಥಿಗಳೊಂದಿಗೆ ವಿಚಾರ ವಿನಿಮಯ ಕಾರ್ಯಕ್ರಮ ಏರ್ಪಡಿಸಬೇಕು. ಹದಿಹರೆಯದವರ ಭಾವನೆಗಳಿಗೆ ಘಾಸಿಯಾಗದಂತೆ ಎಚ್ಚರ ವಹಿಸುವುದು ಅತಿಮುಖ್ಯ. ಪೋಷಕರು ಮಕ್ಕಳಲ್ಲಿ ಆತ್ಮವಿಶ್ವಾಸ ತುಂಬುವ ಕಾರ್ಯ ಮಾಡಬೇಕು. ಮುಂದಿನ ಶಿಕ್ಷಣ ವಿಶಾಲವಾಗಿದೆ, ಹಾದಿಗಳು ನೂರಾರಿವೆ ಎಂಬುದನ್ನು ಮನವರಿಕೆ ಮಾಡಿಕೊಡಬೇಕು. ಪರೀಕ್ಷೆಯಲ್ಲಿ ಸಮಗ್ರ ಮಾರ್ಪಾಡುಗಳನ್ನು ಮಾಡಬೇಕು.

*ಬೆಂಗಳೂರು* ***ಡಾ॥ ಸುರೇಶ ಕೆ. ಪಿ.***

# ಕ್ಷ-ಕಿರಣ

-ಸಾನ್ವಿ ಪಿ.



















# ಋಗ್ವೇದ ಪ್ರವೇಶಿಕೆ ಐತಿಹ್ಯ ಮತ್ತು ವಾಸ್ತವ

ಜಿ. ರಾಮಕೃಷ್ಣ

ಸಂಸ್ಕೃತ ಭಾಷೆಗೆ ಸುಮಾರು ನಾಲ್ಕು ಸಾವಿರ ವರ್ಷಗಳ ಇತಿಹಾಸವಿದೆ. ಋಗ್ವೇದದಲ್ಲಿ ದಾಖಲಾಗಿರುವುದೇ ಅತ್ಯಂತ ಪ್ರಾಚೀನ ಹಂತ. ಅದಕ್ಕೆ ಮೊದಲು ಬೇರೊಂದು ಸ್ವರೂಪದಲ್ಲಿ ಅದು ಅಸ್ತಿತ್ವದಲ್ಲಿದ್ದಿತು. ನಮ್ಮ ದೇಶದಲ್ಲಿ ಈ ಭಾಷೆಯ ಬಗೆಗೆ ಅನೇಕ ಐತಿಹ್ಯಗಳು ಚಾಲ್ತಿಯಲ್ಲಿವೆ. ಅವನ್ನು ಯಾವನೋ ರಾಜ್ಯಪಾಲನಿಂದ ಹಿಡಿದು ಇನ್ನಾವನೋ ಗ್ರಾಮಪಾಲನವರೆಗೆ ಹಲವರು ಯಾವ ಚಾರಿತ್ರಿಕ ಪ್ರಜ್ಞೆಯೂ ಇಲ್ಲದೆ ತುತ್ತೂರಿ ಊದುತ್ತಿರುತ್ತಾರೆ : ಸಂಸ್ಕೃತವಿಲ್ಲದೆ ಸಂಸ್ಕೃತಿ ಇಲ್ಲ, ಭಾರತೀಯ ಸಂಸ್ಕೃತಿಗೆ ಸಂಸ್ಕೃತವೇ ಮೂಲಾಧಾರ, ಸಂಸ್ಕೃತವು ದೇವತೆಗಳ ಭಾಷೆ, ಸಂಸ್ಕೃತವು ಅತ್ಯಂತ ಪುರಾತನವಾದ ಮೊದಲ ಭಾಷೆ, ಎಲ್ಲ ಭಾಷೆಗಳಿಗೂ ಸಂಸ್ಕೃತವು ಮಾತೃಸ್ಥಾನದಲ್ಲಿದೆ, ಹೀಗೆ ಪುಂಖಾನುಪುಂಖವಾಗಿ ಅಭಿಪ್ರಾಯಗಳನ್ನು ಉದುರಿಸುವ ಶುದ್ಧ ಅತಾರ್ಕಿಕ ಸಂಪ್ರದಾಯ ನಮ್ಮಲ್ಲಿದೆ. ಪ್ರೌಢಶಾಲೆಯ ಹಂತದ ಮೊದಲ ಸಂಸ್ಕೃತ ಪುಸ್ತಕದ ಪೀಠಿಕೆಯಲ್ಲಿ ಸಹ ಇಂತಹ ಬಿರುನುಡಿಗಳು ಕಂಡುಬರುತ್ತವೆ. ಸಂಸ್ಕೃತವಾಗಲಿ, ಬೇರಾವುದೇ ಭಾಷೆಯಾಗಲಿ, ಅದರ ಬಗೆಗಿನ ಹೆಮ್ಮೆಯೇ ಬೇರೆ, ಅದರ ಐತಿಹಾಸಿಕ ಸತ್ಯವೇ ಬೇರೆ. ವೇದಕ್ಕೆ ಮುಂಚಿನ ಸಿಂಧು ನದಿ ನಾಗರಿಕತೆಯ ವೇಳೆಯಲ್ಲಿಯೂ ಭಾಷೆ ಇದ್ದಿತು, ಅದು ಸಂಸ್ಕೃತ ಇದ್ದಿರಲಾರದು. ಹರಪ್ಪ–ಮೊಹೆಂಜೊದಾರೊಗಳಲ್ಲಿ ದೊರಕಿದ ಲಿಪಿಯನ್ನು ಅರ್ಥೈಸಲು ಈವರೆಗೆ ಸಾಧ್ಯವಾಗಿಲ್ಲ. ಇತ್ತೀಚೆಗೆ ಮಾನ್ಯ ಸಂಶೋಧಕ ಮತ್ತು ವಿಜ್ಞಾನಿ ಡಾ॥ ಬಿ. ವಿ. ಸುಬ್ಬರಾಯಪ್ಪ ಅವರು ಆ ಲಿಪಿಯು ಸಂಖ್ಯೆಗಳನ್ನು ಸೂಚಿಸುತ್ತದೆಯೆಂದು ಅಭಿಪ್ರಾಯ ಪಟ್ಟಿದ್ದಾರೆ. ಏನೇ ಇರಲಿ, ಅಂದಿನ ಜನರೂ ತಮ್ಮ ವ್ಯವಹಾರಕ್ಕೆ ಭಾಷೆಯೊಂದನ್ನು ಬಳಸುತ್ತಿದ್ದರು. ಇಲ್ಲದಿದ್ದರೆ ಅಷ್ಟು ಅದ್ಭುತವಾದ ನಾಗರಿಕತೆ ಹೇಗೆ ವಿಕಸಿಸಲು ಸಾಧ್ಯವಿತ್ತು! ಅಂತೆಯೇ ಪ್ರಾಚೀನ ಈಜಿಪ್ಟ್ ಮತ್ತು ಬ್ಯಾಬಿಲೋನಿಯಾಗಳಲ್ಲೂ ತಮ್ಮದೇ ಭಾಷೆಗಳಿದ್ದವು. ಹೀಗಿರುವಾಗ ಸಂಸ್ಕೃತವನ್ನು 'ಅತ್ಯಂತ ಪ್ರಾಚೀನ ಭಾಷೆ' ಎಂದು ಹೇಳುವುದು ಚಾರಿತ್ರಿಕವಾಗಿ ಅರ್ಥಹೀನ ಎನಿಸುತ್ತದೆ. ಒಂದು ಮಾತಂತೂ ನಿಜ : ಮಾನವ ಜನಾಂಗದ ಇತಿಹಾಸದಲ್ಲಿ ಲಭ್ಯವಿರುವ ವಿಪುಲ ಸಾಹಿತ್ಯದಲ್ಲಿ ಋಗ್ವೇದವು ಆದಿಕಾವ್ಯ, ಸುಸಂಗತವಾಗಿ ಮುಂದಿನ ಪೀಳಿಗೆಗಳವರಿಗೆ ಉಳಿಸಲಾಗಿರುವ ಸಾಹಿತ್ಯದಲ್ಲಿ ಅತಿಪ್ರಾಚೀನವಾದುದು ಅದು. ಹಾಗೆಂದ ಮಾತ್ರಕ್ಕೆ ಅದು ದೇವಭಾಷೆ ಎಂದರ್ಥವಲ್ಲ ; ಅದು ಋಗ್ವೇದದ ದೇವತೆಗಳನ್ನು ಕಲ್ಪಿಸಿಕೊಂಡವರ ಭಾಷೆ, ಅಷ್ಟೆ. ದೇವತೆಗಳಿದ್ದರೆ ಅವರು ಯಾವ ಭಾಷೆಯಲ್ಲಿ ವ್ಯವಹರಿಸುತ್ತಾರೆಂಬುದು ನಮ್ಮ ಕಲ್ಪನೆಗೆ ಬಿಟ್ಟಿದ್ದು. ನಮ್ಮೂರ ಮಾರಮ್ಮ ಕನ್ನಡದಲ್ಲೇ ವ್ಯವಹರಿಸುತ್ತಾಳೆ ಎಂದರೆ ತಪ್ಪೇನೂ ಇಲ್ಲ. ಪ್ರಾಚೀನ ಈಜಿಪ್ಟಿನ ಮಾರ್ಡುಕ್ ಮುಂತಾದ ದೇವತೆಗಳಾಗಲಿ, ಪ್ರಾಚೀನ ಗ್ರೀಸಿನ ಜ್ಯೂಸ್ ಮುಂತಾದ ದೇವತೆಗಳಾಗಲಿ, ಹಳೆ ಒಡಂಬಡಿಕೆಯ ಮೋಸಸ್‌ನ ದೇವತೆಯಾಗಲಿ, ಸಂಸ್ಕೃತದಲ್ಲಿ ವ್ಯವಹರಿಸಲಿಲ್ಲ. ಪ್ರವಾದಿ ಮೊಹಮ್ಮದರ ಅಲ್ಲಾ ಅಂತೂ ಬಹಳ ಈಚಿನ ಅರಬ್ಬೀ ಭಾಷೆಯಲ್ಲಿ ವ್ಯವಹರಿಸಿದ್ದಾನೆ. ಮುಖ್ಯವಾದ ವಿಷಯವೇನೆಂದರೆ, ಸಂಸ್ಕೃತವು ದೇವಭಾಷೆಯಲ್ಲದಿದ್ದರೂ ಅದು ಆದರಣೀಯವಾದ ಭಾಷೆ ಮತ್ತು ಋಗ್ವೇದವು ಅಪೌರುಷೇಯವಲ್ಲದಿದ್ದರೂ ಅದು ಶ್ರೇಷ್ಠ ಸಾಹಿತ್ಯ, ಎಂಬುದು. ಪ್ರಸ್ತುತ ಇಪ್ಪತ್ತಾರನೆಯ ಕಂತಿನಲ್ಲಿ ನಮ್ಮ ಚರ್ಚೆಯನ್ನು ಮುಂದುವರಿಸೋಣ.



ಭಾಷೆಗಳ ಇತಿಹಾಸವು ಮಾನವನ ಇತಿಹಾಸದ ಒಂದು ಅವಿಭಾಜ್ಯ ಅಂಗ. ಎಲ್ಲ ಭಾಷೆಗಳ ಉಗಮ ಮತ್ತು ವಿಕಾಸವನ್ನು ಭಾಷಾಶಾಸ್ತ್ರಜ್ಞರು ಅಧ್ಯಯನ ಮಾಡುತ್ತಾ ಬಂದಿದ್ದಾರೆ. ಸಾಮಾನ್ಯವಾಗಿ ಭಾಷೆಗಳ ನಾಲ್ಕು ಪ್ರಮುಖ ಕುಟುಂಬಗಳನ್ನು ಗುರುತಿಸಲಾಗಿದೆ; ಅವುಗಳಲ್ಲಿ ಇಂಡೋ-ಯೂರೋಪಿಯನ್ ಎಂಬುದೂ ಒಂದು. ಹೀಗೆ ಕುಟುಂಬಗಳನ್ನು ಪ್ರತ್ಯೇಕಿಸಲು ಅಳವಡಿಸಲಾಗಿರುವ ಸೂತ್ರವು ಸರಳವಾಗಿದೆ. ವಿವಿಧ ಭಾಷೆಗಳಲ್ಲಿ ಒಂದು ರೀತಿಯ ಸಾಮ್ಯವಿದ್ದರೆ ಅವನ್ನು ಸೋದರಿ-ಭಾಷೆಗಳು ಎನ್ನಬಹುದು. ಕನ್ನಡ, ಮಲಯಾಳ, ಮುಂತಾದ ಭಾಷೆಗಳಲ್ಲಿ ಸಂಸ್ಕೃತವೂ ಸೇರಿದಂತೆ ವಿವಿಧ ಭಾಷೆಗಳ ಪದಗಳು ಸಮ್ಮಿಳಿತಗೊಂಡಿರುತ್ತವೆ. ಆದರೆ ಹಾಗೆ ಪದಗಳನ್ನು ನೀಡಿದ ಭಾಷೆಯು ಕನ್ನಡ, ಮಲಯಾಳ, ಮುಂತಾದವುಗಳ ಸೋದರಿ-ಭಾಷೆಗಳಾಗಬೇಕಾಗಿಲ್ಲ. ಸಂಸ್ಕೃತವಂತೂ ಅವಕ್ಕೆ ಖಂಡಿತ ಮಾತೃಸ್ಥಾನದಲ್ಲಿ ಇರುವುದಿಲ್ಲ. ದೇಹದ ಅಂಗಾಂಗಗಳು, ನೆಂಟಸ್ತನ ಮತ್ತು ಸಂಖ್ಯೆಗಳನ್ನು ಸೂಚಿಸುವ ಪದಗಳಲ್ಲಿ ಸಾಮ್ಯವಿದ್ದರೆ ಅಂತಹ ಭಾಷೆಗಳನ್ನು ಸೋದರಿ-ಭಾಷೆಗಳೆನ್ನಲಾಗುತ್ತದೆ. ತಂದೆ ಮತ್ತು ಪಿತೃ ಶಬ್ದಗಳ ನಡುವೆ ಸಾಮ್ಯವಿಲ್ಲ, ಆದರೆ ಪಿತೃ ಮತ್ತು ಪಾತೆರ್ (ಗ್ರೀಕ್) ನಡುವೆ ಸಾಮ್ಯವಿದೆ; ನಾಸಾ ಮತ್ತು ನೋಸ್ ನಡುವೆ ಸಾಮ್ಯವಿದೆ, ಆದರೆ ನಾಸಾ ಮತ್ತು ಮೂಗು ಎಂಬುವುಗಳ ನಡುವೆ ಸಾಮ್ಯವಿಲ್ಲ; ತ್ರಿ ಮತ್ತು ತ್ವಾ (ಫ್ರೆಂಚ್) ನಡುವೆ ಸಾಮ್ಯವಿದೆ, ಆದರೆ ತ್ರಿ ಮತ್ತು ಮೂರು ಎಂಬುವುಗಳ ನಡುವೆ ಇಲ್ಲ. ಇದೆಲ್ಲಾ ತೌಲನಿಕ ಭಾಷಾಶಾಸ್ತ್ರದ ಪ್ರಾಥಮಿಕ ತಿಳುವಳಿಕೆ. ಅದರ ಪರಿಚಯವೇ ಇಲ್ಲದ ಯಾವ ರಾಜ್ಯಪಾಲ ಏನು ಹೇಳಿದರೂ ಕನ್ನಡಕ್ಕೆ ಸಂಸ್ಕೃತವು ಮಾತೃಸ್ಥಾನದಲ್ಲಿರಲಾರದು, ಸೋದರಿ-ಭಾಷೆಯೂ ಆಗಲಾರದು.

ಇಂಡೋ-ಯೂರೋಪಿಯನ್ ಎಂಬ ಒಂದು ಜನಸಮುದಾಯವು ಭೂಭಾಗದ ಎಲ್ಲೋ ಒಂದೆಡೆ ಇದ್ದಿತೆಂದು ಇಟ್ಟುಕೊಂಡರೆ ಅದರ ಭಾಷೆ ಇಂಡೋ-ಯೂರೋಪಿಯನ್ ಆಗಿದ್ದಿರಬೇಕೆಂಬುದು ಒಂದು ಅಂಗೀಕೃತ ಸೂತ್ರ. ಆ ಸಮುದಾಯವು ತನ್ನ ಮೂಲಸ್ಥಾನದಿಂದ ಕವಲುಗಳಾಗಿ ಬೆಳೆದಾಗ ವಿವಿಧ ದಿಕ್ಕುಗಳಿಗೆ ಹರಡಿಕೊಳ್ಳುತ್ತದೆ. ಅವನ್ನು ಸಾಮಾನ್ಯವಾಗಿ ಇಂಡೋ-ಜರ್ಮನಿಕ್ ಮತ್ತು ಇಂಡೋ-ಆರ್ಯನ್ ಎನ್ನುತ್ತಾರೆ. ಗ್ರೀಕ್, ಲ್ಯಾಟಿನ್, ಮುಂತಾದವು ಒಂದು ಕವಲಿನ ಮರಿ-ಕವಲುಗಳ ಭಾಷೆಗಳು. ಅಂತೆಯೇ ಆರ್ಯನ್ ಮತ್ತು ಪರ್ಶಿಯನ್ ಭಾಷೆಗಳು ಇಂಡೋ-ಆರ್ಯನ್‌ನ ಮರಿ-ಕವಲುಗಳು. ಅದನ್ನು ಸೂಚಿಸಲು ಇಂಡೋ-ಇರಾನಿಯನ್ ಮತ್ತು ಇಂಡೋ-ಆರ್ಯನ್ ಎಂಬ ಪರಿಭಾಷೆ ಬಳಸುತ್ತಾರೆ. ಇಂಡೋ-ಇರಾನಿಯನ್ ಭಾಷೆಯ ಸಾಹಿತ್ಯವು ಅವೆಸ್ತಾ ಎಂಬ ಪ್ರಾಚೀನ ಪರ್ಶಿಯನ್ ಗ್ರಂಥದಲ್ಲಿ ಲಭ್ಯ ಮತ್ತು ಇಂಡೋ-ವೇದಿಕ್ ಭಾಷೆಯ ಸಾಹಿತ್ಯವು ಪ್ರಾಚೀನ ಭಾರತದ ಋಗ್ವೇದದಲ್ಲಿ ಲಭ್ಯ. ಈ ಎರಡು ಗ್ರಂಥಗಳ ನಡುವಣ ಸಾಮ್ಯವನ್ನು ನಾವು ಹಿಂದೆ ಆಗಲೆ ಪರಿಚಯಿಸಿಕೊಂಡಿದ್ದೇವೆ. ಆ ಎರಡು ಗ್ರಂಥಗಳ ಭಾಷೆಯಲ್ಲಿ ಸಾಮ್ಯವಿರುವಂತೆ ದೇವತೆಗಳಲ್ಲೂ ಸಾಮ್ಯವಿದೆ. ವೈದಿಕ ಸಂಸ್ಕೃತ, ನಂತರದ ಸಂಸ್ಕೃತ, ಪಾಲಿ-ಅರ್ಧಮಾಗಧಿ-ಶೌರಸೇನಿ ಮುಂತಾದ ಪ್ರಾಕೃತ ಭಾಷೆಗಳು, ಇನ್ನೂ ಮುಂದಿನ ಹಿಂದಿ-ಬಂಗಾಲಿ-ಮರಾಠಿ ಮುಂತಾದ ಭಾಷೆಗಳು, ಇವೆಲ್ಲಾ ಇಂಡೋ-ಆರ್ಯನ್ ಮೂಲದ ಬೆಳವಣಿಗೆಗಳು.

ಇಡೀ ಇಂಡೋ-ಯೂರೋಪಿಯನ್ ಜನಾಂಗದ ಮತ್ತು ವೃಕ್ಷದ ಹತ್ತಾರು ರೆಂಬೆಗಳಲ್ಲಿ ಮೊಟ್ಟಮೊದಲು ಅರಳಿದ ಪುಷ್ಪ ಋಗ್ವೇದ. ಬೇರೆ ಹೂವುಗಳು ಇದ್ದಿರಬಹುದು, ಆದರೆ ಲಭ್ಯವಿದ್ದು, ಆಘ್ರಾಣಿಸಲು ದೊರಕುವ ಮೊದಲ ಹೂವು ಋಗ್ವೇದ. ಅದರ ಪರಿಮಳದ ಸೊಬಗಿನ ಪರಿಚಯವನ್ನು ಸ್ವಲ್ಪಮಟ್ಟಿಗೆ ನಾವು ಮಾಡಿಕೊಂಡಿದ್ದೇವೆ. ಸುಮೇರಿಯ, ಬ್ಯಾಬಿಲೋನ್, ಈಜಿಪ್ಟ್‌ಗಳಲ್ಲೂ ನಾಗರಿಕತೆಯ ಉಗಮವಾಗಿದ್ದಿತು ಮತ್ತು ಅಲ್ಲೂ ವಿಶ್ವದ ವಿಸ್ಮಯದ ಬಗೆಗೆ ಚಿಂತನೆ ಆರಂಭವಾಗಿದ್ದಿತು. ಏನೋ ಒಂದು ಅಗೋಚರ ಶಕ್ತಿಯ ಕಲ್ಪನೆಯು ಎಲ್ಲ ನಾಗರಿಕತೆಗಳಲ್ಲೂ ಉಂಟು. ಈಜಿಪ್ಟಿನಲ್ಲಿ ಅದನ್ನು 'ಆತೆನ್' ಎಂದು ಕರೆದರೆ, ಆದಿ ಯೆಹೂದ್ಯರು ಅದನ್ನು 'ಜಿಹೋವಾ' ಎಂದರು, ಚೀನಾದಲ್ಲಿ ಅದನ್ನು 'ತವೋ' ಎನ್ನಲಾಯಿತು, ಪ್ರಾಚೀನ ಭಾರತದಲ್ಲಿ 'ಋತ' ಮತ್ತು 'ಏಕಂ ಸತ್' ಎಂದು ಕರೆದರು.

ಋಗ್ವೇದದ ೧೦೨೮ ಸೂಕ್ತಗಳು ಮಾತ್ರವೇ ವೇದಕಾಲೀನ ಸಾಹಿತ್ಯವಲ್ಲದಿರಬಹುದು, ಅಂದರೆ, ಅಂದು ರಚನೆಗೊಂಡ ಎಷ್ಟೋ ಭಾಗಗಳು ಸೇರ್ಪಡೆಯಾಗದೆ ಹೋಗಿರಬಹುದು. ಪ್ರಖ್ಯಾತ ವಿದ್ವಾಂಸರಾದ ಎಂ. ಹಿರಿಯಣ್ಣನವರು ಈ ಬಗ್ಗೆ ಬಹುಹಿಂದೆಯೇ ನಮ್ಮ ಗಮನ ಸೆಳೆದಿದ್ದರು. ಲಭ್ಯವಿರುವ ವೈದಿಕ ಸಾಹಿತ್ಯವನ್ನು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಎಂದು ವಿಂಗಡಿಸಿ ನಾಲ್ಕು ಸಂಹಿತೆಗಳಲ್ಲಿ ಕ್ರೋಢೀಕರಿಸಲಾಗಿದೆ. ಯಜುರ್ವೇದದಲ್ಲಿ ಕೃಷ್ಣ ಮತ್ತು ಶುಕ್ಲ ಎಂಬ ಉಪಭೇದಗಳೂ ಇವೆ. ಸಂಪ್ರದಾಯ ಶರಣರಿಗೆ ಅದೇಕೋ ಅಥರ್ವವೇದವೆಂದರೆ ಮೊದಲಿನಿಂದಲೂ ಮುಜುಗರ. ಆದ್ದರಿಂದ ಅದನ್ನು ಹೊರತುಪಡಿಸಿ, ಮೂರು ವೇದಗಳನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಂಡು ಅವನ್ನು 'ತ್ರಯೀ' ಎಂದು ಕರೆಯುತ್ತಿದ್ದರು. ಹಾಗೆ ನೋಡಿದರೆ, ಋಗ್ವೇದದಲ್ಲಿ ಇರಬಾರಬಹುದಾದಂತಹದ್ದೇನೂ ಅಥರ್ವವೇದದಲ್ಲಿಲ್ಲ. ಋಗ್ವೇದದ ಎಷ್ಟೋ ಮಂತ್ರಗಳು ಮತ್ತೆ ಅಥರ್ವವೇದದಲ್ಲಿ ಕಾಣಿಸಿಕೊಂಡಿವೆ. ಋಗ್ವೇದದಲ್ಲೂ ಇರುವ ಪ್ರಾಚೀನ ಮಾಂತ್ರಿಕತೆಯ ಛಾಯೆ ಅಥರ್ವದಲ್ಲಿ ಸ್ವಲ್ಪ ಹೆಚ್ಚಾಗಿದೆ ಎಂಬುದಷ್ಟೇ ವ್ಯತ್ಯಾಸ. ಆ ಮಾಂತ್ರಿಕತೆಯ ವಿಕಸಿತ ರೂಪವಾದ ಯಜ್ಞವು ಅತಿ ಹೆಚ್ಚಿನ ಪ್ರಾಶಸ್ತ್ಯ ಪಡೆದು ವಿಪರೀತ ಸಂಕೀರ್ಣವಾಗಿ ಬೆಳೆದಾಗ ಅದೇ ಆದಿಮ ಮಾಂತ್ರಿಕತೆಯು ತನ್ನ "ಘನತೆ"ಯನ್ನು ಕುಗ್ಗಿಸಿಕೊಂಡಂತೆ ತೋರಿರಬೇಕು. ಅದು ಸಮುದಾಯದ ಮಾಂತ್ರಿಕತೆ, ಆದರೆ ಯಜ್ಞವು ಯಜಮಾನನಿಗೆ ಸಂಪತ್ತು ಮತ್ತು ಕೀರ್ತಿ ತಂದುಕೊಡುವ ಮಾಂತ್ರಿಕತೆ. ವಿಕಾಸದ ಉತ್ತರ ಹಂತದಲ್ಲಿರುವವರು ಆದಿಮರನ್ನು ಅಸಡ್ಡೆಯಿಂದ ನೋಡುವುದು, ಕಡಿಮೆ ಮಟ್ಟದ ಕೀಳು ಜನರೆಂದು ನೋಡುವುದು, ಇಂದಿಗೂ ನಮ್ಮ ಒಂದು ಅವಲಕ್ಷಣ. ಒಂದರ್ಥದಲ್ಲಿ ಅಥರ್ವವೇದಕ್ಕೆ ಅಂತಹ ಕೆಟ್ಟಪಾಡು ಬಹಳ ಹಿಂದಿನಿಂದಲೂ ಸುತ್ತಿಕೊಂಡಿದೆ. ಆದರೆ ಪೃಥ್ವೀ ಸೂಕ್ತದಂತಹ ಉನ್ನತಮಟ್ಟದ ಸೂಕ್ತ ಅದರಲ್ಲಿದೆ (೧೨.೧). ಅಂದಿನ ಪ್ರಜ್ಞಾವಲಯ, ಆಚರಣೆ, ಕವಿತ್ವ, ಎಲ್ಲವೂ ಅಥರ್ವವೇದದಲ್ಲಿ ಪ್ರತಿಫಲಿತವಾಗಿರುವುದು ಮಾತ್ರ ವಾಸ್ತವ. ಆಯ್ದ ಕೆಲವು ಸೂಕ್ತಗಳನ್ನು ಮುಂದೆ ನಾವು ಪರಿಚಯಿಸಿಕೊಳ್ಳಲು ಅಡ್ಡಿಯಿಲ್ಲ. ಒಟ್ಟಿನಲ್ಲಿ ವೈದಿಕ ಸಾಹಿತ್ಯದಲ್ಲಿ ಅಥರ್ವವೇದಕ್ಕೆ ಸ್ವತಂತ್ರವಾದ ಸ್ಥಾನವಿದೆ; ಅಂದರೆ, ಋಗ್ವೇದವನ್ನು ಹೆಜ್ಜೆಹೆಜ್ಜೆಗೂ ಅನುಸರಿಸುವ ಅನಿವಾರ್ಯತೆ ಅದಕ್ಕಿಲ್ಲ. ಅಂತಹ ಅನಿವಾರ್ಯತೆ ಇರುವುದು ಯಜುರ್ವೇದ ಮತ್ತು ಸಾಮವೇದಗಳಿಗೆ. ಅಲ್ಪಸ್ವಲ್ಪ ಹೊಸದೇನಾದರೂ ಇದ್ದರೆ ಅದು ಶುಕ್ಲ ಯಜುರ್ವೇದದ ವಾಜಸನೇಯಿ ಸಂಹಿತೆಯಲ್ಲಿದೆ. ಆದರೆ ಕೃಷ್ಣ ಯಜುರ್ವೇದದ ತೈತ್ತಿರೀಯ ಮತ್ತು ಸಾಮವೇದ ಸಂಹಿತೆಗಳಲ್ಲಿ ಋಗ್ವೇದದಲ್ಲಿ ಇಲ್ಲದ ಮಂತ್ರಗಳಾವುವೂ ಇಲ್ಲ. ಒಂದೆರಡಿದ್ದರೂ ಅದು ನಗಣ್ಯ. ಅಲ್ಲಿಯ ಆಯ್ದ ಕೆಲವು ಸೂಕ್ತಗಳನ್ನು ಮತ್ತು ಮಂತ್ರಗಳನ್ನು ಗಾನರೂಪದಲ್ಲಿ ಪ್ರಸ್ತುತಪಡಿಸುವುದಷ್ಟೇ ಸಾಮವೇದದ ವೈಶಿಷ್ಟ್ಯ. ಇದಕ್ಕೆ ವಿವರಣೆ ಏನಾದರೂ ಬೇಕಾದರೆ ಅದನ್ನು ಹೀಗೆನ್ನಬಹುದು :

ಬಿ.ಎ. ತರಗತಿಯಲ್ಲಿ ಬೇಂದ್ರೆಯವರ ಒಂದು ಕವನವನ್ನು ಪಾಠ ಮಾಡುವಾಗ ಅಧ್ಯಾಪಕರು ಅದನ್ನು ಒಂದು ರೀತಿಯಲ್ಲಿ ಓದಿ ಅರ್ಥೈಸುತ್ತಾರೆ; ಅದನ್ನೇ ಶಿವಮೊಗ್ಗ ಸುಬ್ಬಣ್ಣನವರು ಒಂದು ರೀತಿಯಲ್ಲಿ ಹಾಡಿ ರಂಜಿಸುತ್ತಾರೆ ಮತ್ತು ತನ್ಮೂಲಕ ಅರ್ಥೈಸುತ್ತಾರೆ. ಇಬ್ಬರಿಗೂ ಕವನ ಒಂದೇ. ಆದ್ದರಿಂದ ಋಗ್ವೇದ ಮತ್ತು ಅಥರ್ವವೇದಗಳನ್ನು ಅಧ್ಯಯನ ಮಾಡುವಂತೆ ಸಾಮವೇದವನ್ನು ಅಧ್ಯಯನ ಮಾಡುವ ಪ್ರಸಂಗ ಉದ್ಭವಿಸುವುದಿಲ್ಲ. ಯಜ್ಞದ ಭಾಗವಾಗಿಯೋ ಸ್ವತಂತ್ರವಾಗಿಯೋ ಋಗ್ವೇದದ ಆಯ್ದ ಮಂತ್ರಗಳ ಗಾನ ಮಾಡಿದರೆ ಸಾಮವೇದದ ವ್ಯಾಪ್ತಿ ಅಲ್ಲಿಗೆ ಮುಕ್ತಾಯ.

ಯಜುರ್ವೇದವು ಇದಕ್ಕಿಂತಲೂ ಭಿನ್ನವಾದುದು. ಅದರಲ್ಲಿ ಋಗ್ವೇದ ಮಂತ್ರಗಳದ್ದೇ ಕಾರುಬಾರು, ಆದರೆ ಆ ಮಂತ್ರಗಳನ್ನೆಲ್ಲಾ ಪೂರ್ಣರೂಪದಲ್ಲಿ ಉದ್ಧರಿಸುವುದು ಅಪರೂಪ. ಕಾಲದ ದೃಷ್ಟಿಯಿಂದ ನೋಡಿದರೆ ಋಗ್ವೇದ ಮತ್ತು ಅಥರ್ವವೇದ ಸಮಕಾಲೀನವಾದುವು, ಒಂದೇ ಕಾಲಮಾನದಲ್ಲಿ ರಚನೆಗೊಂಡವು. ಯಜುರ್ವೇದವು ಹಾಗಲ್ಲ; ಋಗ್ವೇದವು ರಚನೆಗೊಂಡ ಕೆಲವು ಶತಮಾನಗಳ ನಂತರ ರೂಪುಗೊಂಡ ಸಾಹಿತ್ಯಭಾಗ ಅದು. ಅಂದರೆ ಸಮಾಜದ ವಿಕಾಸದ ದೃಷ್ಟಿಯಿಂದ ಹೊಸದೇನನ್ನೂ ಹೇಳದಿರುವ ಜೊಳ್ಳು ಸಾಹಿತ್ಯವಿದೆಂದು ಅರ್ಥವಲ್ಲ. ಯಜ್ಞದ ಎಗ್ಗಿಲ್ಲದ ವಿಕಾಸವೇ ಅಂದಿನ ಸಮಾಜದ ಒಂದು ಇತಿಹಾಸ ಭಾಗ. ಅದರಲ್ಲಿ ಋಗ್ವೇದದಲ್ಲಿಲ್ಲದ ನೂತನ ಸಾಮಾಜಿಕ ಸಂಬಂಧಗಳಿವೆ, ಸ್ತರಗಳಿವೆ. ಮೂಲತಃ ಯಜುರ್ವೇದವು ಯಜ್ಞಾದಿ ಕ್ರಿಯೆಗಳ ಮತ್ತು ಆಚರಣೆಗಳ ಕೈಪಿಡಿಯಾದ್ದರಿಂದ ಅದನ್ನು ಸಾಹಿತ್ಯವೆಂದು ವಿಶಿಷ್ಟವಾಗಿ ಅಧ್ಯಯನ ಮಾಡುವುದು ಕಡಿಮೆ. ಯಾವುದೋ ಒಂದು ಯಜ್ಞಕ್ರಿಯೆ ಇದೆ ಎನ್ನೋಣ. ಅದರಲ್ಲಿ ಯಾವ ಸಂದರ್ಭದಲ್ಲಿ ಯಾವ ಕ್ರಿಯೆ ಮತ್ತು ಆ ಕ್ರಿಯೆಗೆ ಋಗ್ವೇದದ ಯಾವ ಮಂತ್ರ ಅಥವಾ ಮಂತ್ರಗಳ ಪ್ರಯೋಗವನ್ನು ಹೇಳಲಾಗಿದೆ ಎಂಬುದು ಬಹುಮಟ್ಟಿಗೆ ಯಜುರ್ವೇದದ ವ್ಯಾಪ್ತಿಯನ್ನು ಸೂಚಿಸುತ್ತದೆ. ಅವನ್ನು ಹೇಳುವಾಗ ಸಾಂದರ್ಭಿಕವಾಗಿ ಆಗಾಗ್ಗೆ ಕೆಲವು ಜಿಜ್ಞಾಸೆಗಳು ಹುಟ್ಟಿಕೊಳ್ಳುತ್ತವೆ. ಅವು ಬದಲಾದ ಸಾಮಾಜಿಕ ದೃಷ್ಟಿ ಮತ್ತು ಸ್ಥಾನಮಾನಗಳನ್ನು ಗಾಢವಾಗಿ ಪ್ರತಿಫಲಿಸುತ್ತವೆ. ಮಿಕ್ಕಂತೆ ಯಜುರ್ವೇದವು ಪುರೋಹಿತರ ಕೈಪಿಡಿ, ಅಷ್ಟೆ. ಋಗ್ವೇದದ ಮಂತ್ರಗಳನ್ನು ಅರ್ಥಮಾಡಿಕೊಳ್ಳುವಾಗ ಈವರೆಗೆ ಅಲ್ಲಲ್ಲಿ ನಾವು ಅನುಕ್ರಮಣಿ ಎಂಬ ಗ್ರಂಥದ ಪ್ರಸ್ತಾಪವನ್ನು ಕಂಡಿದ್ದೇವೆ. "ಈ ಮಂತ್ರವನ್ನು ಇಂತಹ ಯಜ್ಞದ ಇಂತಹ ಸಂದರ್ಭದಲ್ಲಿ ಹೇಳುವುದು" ಎಂಬ ಸೂಚನೆ ಅಲ್ಲಿರುತ್ತದೆ. ಅದಕ್ಕೆ ಆಧಾರವೇ ಯಜುರ್ವೇದ. ಉದಾಹರಣೆಗೆ, ಋಗ್ವೇದ ಭಾಷ್ಯದಲ್ಲಿ ಒಂದೆಡೆ ಸಾಯಣನ ವಿವರಣೆಯನ್ನು ನೋಡಿ; ಅದನ್ನು ಗೊತ್ತುಗುರಿಯಿಲ್ಲದೆ ಸುಮ್ಮನೆ ಪುಟ ತಿರುವಿ ಗುರುತಿಸಲಾಗಿದೆ (ಅಂದರೆ, ರ್‍ಯಾಂಡಮ್ ಆಗಿ) ಅಷ್ಟೆ: 'ರಥಂ ಯಾಂತಂ' ಇತಿ ಚತುರ್ದಶರ್ಚಂ ಏಕಾದಶಂ ಸೂಕ್ತಂ ಕಾಕ್ಷೀವತ್ಯಾ ಘೋಷಾಯಾ ಆರ್ಷಂ ಜಾಗತಮಾಶ್ವಿನಂ। 'ರಥಂ ಯಾಂತಂ' ಇತ್ಯನುಕ್ರಾಂತಂ. ಪ್ರಾತರನುವಾಕಾಶ್ವಿನ ಶಸ್ತ್ರಯೋರುಕ್ತೋ ವಿನಿಯೋಗಃ॥ ಅಂದರೆ, ಈ ಸೂಕ್ತದಲ್ಲಿ ೧೪ ಮಂತ್ರಗಳಿವೆ, ಅದನ್ನು ರಚಿಸಿದವಳು ಕಕ್ಷೀವಾನ್ ಸಮುದಾಯದ ಘೋಷಾ ಎಂಬುವಳು, ಮಂತ್ರಗಳು ಜಗತೀ ಛಂದಸ್ಸಿನಲ್ಲಿವೆ, ಅಶ್ವಿನೀ ದೇವತೆಗಳನ್ನುದ್ದೇಶಿಸಿದ್ದು, ಯಜ್ಞದ ಪ್ರಾತರನುವಾಕದ ಸಂದರ್ಭದಲ್ಲಿ ಬಳಸುವಂಥದು, ಎಂದರ್ಥ (ಋ.೧೦.೪೦). ಇದನ್ನೇ ಯಜುರ್ವೇದದಲ್ಲಿ ಇನ್ನೂ ವಿಸ್ತಾರವಾಗಿ ಹೇಳಲಾಗಿರುತ್ತದೆ. ಹಾಗೆ ಹೇಳುವಾಗ ಸಾಂದರ್ಭಿಕವಾಗಿ ಏನಾದರೊಂದು ಜಿಜ್ಞಾಸೆ ಬಂದಿರಲು ಸಾಧ್ಯ, ಆದರೆ ಕಡ್ಡಾಯವಾಗಿ ಅದಿರಲೇಬೇಕೆಂದೇನೂ ಇಲ್ಲ.

ಕುತೂಹಲಕ್ಕಾಗಿ ಒಂದು ಉದಾಹರಣೆಯನ್ನು ನೋಡೋಣ. ಯಾವ ಕಾರಣಕ್ಕಾಗಿ ಋಗ್ವೇದದಲ್ಲಿ (೧.೩೪.೧೧, ೫.೭೮.೩) ಅಶ್ವಿನೀ ದೇವತೆಗಳನ್ನು ಹೊಗಳಲಾಗಿದೆಯೋ ಅದೇ ಕಾರಣಕ್ಕೆ ತೈತ್ತಿರೀಯ ಸಂಹಿತೆಯಲ್ಲಿ (೬.೪.೯) ಅವರನ್ನು ತೆಗಳಲಾಗಿದೆ. ಋಗ್ವೇದದಲ್ಲಿ ಅವರನ್ನು ಯಜ್ಞಕ್ಕೆ ಆಹ್ವಾನಿಸಲಾಗಿದೆ, "ಹಂಸಗಳು ನಿರ್ಮಲವಾದ ನೀರಿಗೆ ಬರುವಂತೆ ನೀವು ಯಜ್ಞದಲ್ಲಿ ಸೋಮವನ್ನು ಸ್ವೀಕರಿಸಲು ಬನ್ನಿ," ಎಂದು ಹೇಳಲಾಗಿದೆ. ಅದಕ್ಕೆ ಭಿನ್ನವಾಗಿ ಯಜುರ್ವೇದದ ಒಂದು ಪ್ರಸಂಗವನ್ನು ಗಮನಿಸಿ: ಯಜ್ಞದ ತಲೆಯನ್ನು ಯಾರೋ ಒಮ್ಮೆ ತರಿದು ಹಾಕಿದ್ದರಂತೆ; ಅದಕ್ಕೆ ವೈದ್ಯಕೀಯ ಸಹಾಯವು ಬೇಕಾಯಿತು. ಆಗ ಅಶ್ವಿನೀ ದೇವತೆಗಳನ್ನು ಸ್ತುತಿಸಿ "ಬಂದು ಈ ಸೋಮವನ್ನು ಸ್ವೀಕರಿಸಿ" ಎಂಬ ಋಗ್ವೇದದ ಮಂತ್ರವನ್ನು (೧.೨೨.೧) ಪಠಿಸಲಾಯಿತು. ಸೋಮಯಾಗವನ್ನು ಮಾಡುವಾಗ ಒಂದು ಸಂದರ್ಭದಲ್ಲಿ ಈ ಮಂತ್ರವನ್ನು ಉಚ್ಚರಿಸಬೇಕೆಂದು ಯಜುರ್ವೇದವು ತಿಳಿಸುತ್ತದೆ. ಅದರ ಪ್ರಯೋಗಕ್ಕೆ ಸಂಬಂಧಿಸಿದಂತೆ ತೈತ್ತಿರೀಯ ಸಂಹಿತೆಯ ವಿವರಣೆ ಹೀಗಿದೆ :

"ಯಜ್ಞದ ತಲೆಯನ್ನು ಕತ್ತರಿಸಲಾಗಿತ್ತು. ದೇವತೆಗಳು ಅಶ್ವಿನಿಗಳಿಗೆ ಹೇಳಿದರು, 'ನೀವು ವೈದ್ಯರು, ಯಜ್ಞದ ತಲೆಯನ್ನು ಸರಿಪಡಿಸಿ.' ಅವರು ಉತ್ತರ ಕೊಟ್ಟರು : 'ನಾವೊಂದು ವರವನ್ನು ನಿರೀಕ್ಷಿಸೋಣವೆ ? ಇದರಲ್ಲಿ ನಮಗೂ ಹವಿರ್ಭಾಗ ದೊರೆಯಲಿ.' (ಅಂದರೆ, ಸಾಮಾನ್ಯತಃ ಅವರಿಗೆ ಹವಿರ್ಭಾಗವಿರಲಿಲ್ಲ; ಈಗ ಚೌಕಾಶಿ ಮಾಡಿ ಅವರು ಅದನ್ನು ಪಡೆದುಕೊಳ್ಳಬೇಕು). ದೇವತೆಗಳು ಅದಕ್ಕೆ ಒಪ್ಪಿದರು. ಅಶ್ವಿನಿಗಳಿಗೆ ಹವಿರ್ಭಾಗವನ್ನು ತೆರೆದಿರಿಸಿದರು. ಆಗ ಅಶ್ವಿನಿಗಳು ಯಜ್ಞದ ತಲೆಯನ್ನು ಸರಿಪಡಿಸಿದರು. ಆದ್ದರಿಂದ ಅಶ್ವಿನಿಗಳಿಗೆ ಹವಿರ್ಭಾಗ ತೆಗೆದಿಡುವುದೆಂದರೆ ಯಜ್ಞವನ್ನು ಸರಿಪಡಿಸಿದಂತೆ ಎಂದರ್ಥ. ಅವರ ಬಗ್ಗೆ ದೇವತೆಗಳೆಂದರು : 'ಇವರು ಅಶುದ್ಧರು; ವೈದ್ಯರಾಗಿ ಸಾಮಾನ್ಯ ಮನುಷ್ಯರ ನಡುವೆ ಸಂಚರಿಸುತ್ತಾರೆ.' ಆದ್ದರಿಂದ ಬ್ರಾಹ್ಮಣರು ವೈದ್ಯಕೀಯವನ್ನು ಮಾಡಬಾರದು, ಏಕೆಂದರೆ ವೈದ್ಯನು ಅಶುದ್ಧ, ಅವನು ಯಜ್ಞದಲ್ಲಿ ಅನರ್ಹ. ಅಶ್ವಿನಿ ದೇವತೆಗಳನ್ನು ಬಹಿಷ್ಪವಮಾನ ಸ್ತೋತ್ರದಿಂದ ಶುದ್ಧೀಕರಿಸಿ ಅವರಿಗೆ ಹವಿರ್ಭಾಗವನ್ನು ತೆಗೆದಿರಿಸಿದರು. ಆದ್ದರಿಂದ ಯಜ್ಞದಲ್ಲಿ ಅಶ್ವಿನಿ ದೇವತೆಗಳಿಗೆ ಬಹಿಷ್ಪವಮಾನ ಶುದ್ಧೀಕರಣ ಸ್ತೋತ್ರವನ್ನು ಪಠಿಸಿದ ನಂತರ ಹವಿರ್ಭಾಗವನ್ನು ತೆಗೆದಿಡಬೇಕು. ಇದನ್ನು ತಿಳಿದವನು ಬಹಿಷ್ಪವಮಾನವನ್ನು ಆಚರಿಸಬೇಕು; ಅದರಿಂದ ಅವನು ಶುದ್ಧನಾಗುತ್ತಾನೆ."

ಯಜುರ್ವೇದದ ರಚನಾಶೈಲಿಯು ಇದರಿಂದ



२०२ सटीके शारीरकभाष्ये

यत्प्रागुत्पत्तेरीश्वरज्ञानस्य विषयो भवतीति ? तत्त्वान्यत्वाभ्यामनिर्वचनीये नामरूपे अव्याकृते व्याचिकीर्षिते इति ब्रूमः । यत्प्रसादाद्धि योगिनामप्यतीतानागतविषयं प्रत्यक्षं ज्ञानमिच्छन्ति योगशास्त्रविदः, किमु वक्तव्यं तस्य नित्यसिद्धस्येश्वरस्य सृष्टिस्थितिसंहृतिविषयं नित्यज्ञानं भवतीति । यदप्युक्तम्—प्रागुत्पत्तेर्ब्रह्मणः शरीरादिसंबन्धमन्तरेणेक्षितृत्वमनुपपन्नमिति, न तच्चोद्यमवतरति, सवितृप्रकाशवद्ब्रह्मणो ज्ञानस्वरूपनित्यत्वे ज्ञानसाधनापेक्षानुपपत्तेः । अपि चाऽविद्यादिमतः संसारिणः शरीराद्यपेक्षा ज्ञानोत्पत्तिः स्यात्, न ज्ञानप्रतिबन्धकारणरहितस्येश्वरस्य । मन्त्रौ चेमावीश्वरस्य शरीराद्यनपेक्षतामनावरणज्ञानतां च दर्शयतः—

न तस्य कार्यं करणं च विद्यते न तत्समश्चाभ्यधिकश्च दृश्यते ।
परास्य शक्तिर्विविधैव श्रूयते स्वाभाविकी ज्ञानबलक्रिया च ॥
( श्वेता० ६।८ ) इति ।

अपाणिपादो जवनो ग्रहीता पश्यत्यचक्षुः स शृणोत्यकर्णः ।
स वेत्ति वेद्यं न च तस्यास्ति वेत्ता तमाहुरग्र्यं पुरुषं महान्तम् ॥
( श्वेता० ३।१९ ) इति च ।

ननु नास्ति तावज्ज्ञानप्रतिबन्धकारणवानीश्वरादन्यः संसारी, 'नान्योऽतोऽस्ति द्रष्टा नान्योऽतोऽस्ति विज्ञाता' (बृह० ३।७।२३) इति श्रुतेः । तत्र

❖ रत्नप्रभा ❖

त्याह—अपि चाविद्यादिमत इति । यथैकस्य ज्ञाने तथान्यस्यापीति नियमाभावान्मायिनोऽशरीरस्यापि जन्येक्षणकारकत्वमिति भावः । ननु यज्जन्यज्ञानं तच्छरीरसाध्यमिति व्याप्तिरस्तीत्याशङ्क्य श्रुतिबाधमाह—मन्त्रौ चेति । कार्यं शरीरम् । करणम् इन्द्रियम् । अस्य ईश्वरस्य । शक्तिः माया स्वकार्यापेक्षया परा विचित्रकार्यकारित्वाद् विविधा सा श्रौतिप्रमात्रसिद्धा न प्रमाणसिद्धेत्याह—श्रूयत इति । ज्ञानरूपेण बलेन या सृष्टिक्रिया सा स्वभाविकी अनादिमायात्मकत्वादित्यर्थः । ज्ञानस्य चैतन्यस्य बलं मायावृत्तिप्रतिबिम्बितत्वेन स्फुटत्वम् । तस्य क्रिया नाम बिम्बत्वेन ब्रह्मणो जनकता ज्ञातृतापि स्वभाविकीति वार्थः । अपाणिरपि ग्रहीता । अपादोऽपि जवनः । ईश्वरस्य स्वकार्ये लौकिकहेत्वपेक्षा नास्तीति भावः । अग्र्यम् अनादिं, पुरुषं अनन्तम्, महान्तं विभुमित्यर्थः । अपसिद्धान्तं शङ्कते—नन्विति । ज्ञाने प्रतिबन्धककारणान्यविद्यारागादीनि । श्रुतावत ईश्वरादन्यो नास्ती-

प्रथमाध्याये ईक्षित्यधिकरणभाष्यम् । २०३

किमिदमुच्यते संसारिणः शरीराद्यपेक्षा ज्ञानोत्पत्तिर्नेश्वरस्येति । अत्रोच्यते—सत्यं, नेश्वरादन्यः संसारी । तथापि देहादिसंघातोपाधिसंबन्ध इष्यत एव, घटकरकगिरिगुहाद्युपाधिसंबन्ध इव व्योम्नः । तत्कृतश्च शब्दप्रत्ययव्यवहारो लोकस्य दृष्टो घटच्छिद्रं करकादिच्छिद्रमित्यादिराकाशाव्यतिरेकेऽपि, तत्कृता चाकाशे घटाकाशादिभेदमिथ्याबुद्धिर्दृष्टा । तथेहापि देहादिसंघातोपाधिसंबन्धाविवेककृतेश्वरसंसारिभेदमिथ्याबुद्धिः । दृश्यते चात्मन एव सतो देहादिसंघातेऽनात्मन्यात्मत्वाभिनिवेशो मिथ्याबुद्धिमात्रेण पूर्वपूर्वेण । सति चैवं संसारित्वे देहाद्यपेक्षमीक्षितृत्वमुपपन्नं संसारिणः । यदप्युक्तम्—प्रधानस्यानेकात्मकत्वान्मृदादिवत्कारणत्वोपपत्तिर्नासंहतस्य ब्रह्मण इति, तत्प्रधानस्याशब्दत्वेनैव प्रत्युक्तम् । यथा तु तर्केणापि ब्रह्मण एव कारणत्वं निर्वोढुं शक्यते न प्रधानादीनाम् तथा प्रपञ्चयिष्यति—'न विलक्षणत्वादस्य—' ( ब्र० २।१।४ ) इत्येवमादिना ॥५॥

❖ रत्नप्रभा ❖

त्यन्वयः । औपाधिकस्य जीवेश्वरभेदस्य मयोक्तत्वान्नापसिद्धान्त इत्याह—अत्रोच्यत इति । तत्कृत उपाधिसम्बन्धकृतः शब्दतज्जन्यप्रत्ययरूपो व्यवहारः । असङ्कीर्ण इति शेषः । अव्यतिरेके कथमसङ्करस्तत्राह—तत्कृता चेति । उपाधिसम्बन्धकृतेत्यर्थः । तथेति । देहादिसम्बन्धस्य हेतुरविवेकोऽनाद्यविद्या तया कृत इत्यर्थः । अविद्यायां हि प्रतिबिम्बो जीवः बिम्बचैतन्यम् ईश्वरः इति भेदोऽविद्याधीनसत्ताकः, अनादिभेदस्य कार्यत्वायोगात् । कार्यबुद्ध्यादिकृतप्रमाणादिभेदश्च कार्य एवेति विवेकः । नन्वखण्डस्वप्रकाशात्मनि कथमविवेकः, तत्राह—दृश्यते चेति । वस्तुतो देहादिभिन्नस्वप्रकाशस्यैव सत आत्मनो नरोऽहमिति भ्रमो दृष्टत्वाद्दुरपह्नवः । स च मिथ्याबुद्ध्या मीयत इति मिथ्याबुद्धिमात्रेण भ्रान्तिसिद्धाज्ञानेन कल्पित इति चकारार्थः । यद्वोक्तमिथ्याबुद्धौ लोकानुभवमाह—दृश्यते चेति । इत्थंभावे तृतीया । भ्रान्त्यात्मना दृश्यत इत्यर्थः । पूर्वपूर्वभ्रान्तिमात्रेण दृश्यते, न च प्रमयेति वार्थः । कूटस्थस्यापि मायिकं कारणत्वं युक्तमित्याह—यथा त्विति । यच्चवेद्यं शब्दशक्त्यविषयत्वाद् ब्रह्माशब्दमिति । तन्न । सत्यादिपदानामबाधितार्थेषु लोकावगतशक्तिकानां वाच्यैकदेशत्वेनोपस्थिताखण्डब्रह्मलक्षकत्वादिति स्थितम् ॥ ५ ॥

ಪರಿಚಯವಾಗುತ್ತದೆ. ಅಷ್ಟೇ ಮುಖ್ಯವಾಗಿ, ಸಾಮಾಜಿಕ ದೃಷ್ಟಿಯ ಪಲ್ಲಟವಾಗಿರುವುದು ತಿಳಿದುಬರುತ್ತದೆ. "ನಾವು ವೈದಿಕ ಸಂಸ್ಕೃತಿಗೆ ಹಿಂದಿರುಗಬೇಕು" ಎಂದು ಇಂದಿನ ಕೆಲವು "ಪ್ರತಿಭಾನ್ವಿತ" ರಾಜಕಾರಣಿಗಳು ಹಾಗೂ ರಾಜ್ಯಪಾಲರು ಕರೆ ಕೊಡುತ್ತಿರುತ್ತಾರೆ. ಅವರ ಕರೆಗೆ ಓಗೊಟ್ಟು "ಬ್ರಾಹ್ಮಣ" ವಿದ್ಯಾರ್ಥಿಗಳು ವೈದ್ಯಕೀಯ ಶಿಕ್ಷಣ ಪಡೆಯಲು ಕಾಲೇಜುಗಳಲ್ಲಿ ಪ್ರವೇಶ ಪಡೆಯುವುದನ್ನು ನಿಲ್ಲಿಸಬೇಕಲ್ಲ! ಋಗ್ವೇದದ ಕಾಲದಲ್ಲಿ ವೈದ್ಯಕೀಯವು ನಿಂದೆಗೊಳಗಾಗಿರಲಿಲ್ಲ, ಯಜುರ್ವೇದದ ಕಾಲಕ್ಕೆ ನಿಂದೆಗೊಳಗಾಗಿದೆ, ಮತ್ತು ಬುದ್ಧನ ನಂತರ ಈವರೆವಿಗೂ ಅದು ನಿಂದನೆಗೆ ಗುರಿಯಾಗದೆ ಉಳಿದಿದೆ. ಏನಿದರ ತಾತ್ಪರ್ಯ? ಅಶ್ವಿನಿ ದೇವತೆಗಳ ನಿಂದೆಯು ವಸ್ತುತಃ ವೈದ್ಯಕೀಯದ ನಿಂದೆ, ವೈದ್ಯರ ನಿಂದೆ. ಋಗ್ವೇದದ ಕಾಲದಲ್ಲಿ (ಹತ್ತನೆಯ ಮಂಡಲದ ಪುರುಷಸೂಕ್ತ ಬರುವವರೆಗೆ) ಬೌದ್ಧಿಕ ಮತ್ತು ದೈಹಿಕ ಶ್ರಮಗಳೆರಡರಲ್ಲೂ ಸಮಾನ ಸ್ಥಾನವನ್ನು ಹೊಂದಿದ್ದ ವೈದ್ಯರು ಯಜುರ್ವೇದದ ಕಾಲಕ್ಕೆ ಅಪಗತಿಗೆ ಈಡಾಗಿದ್ದಾರೆ, ವರ್ಣ ವಿಭಜನೆಯು ಸಮಾಜದಲ್ಲಿ ಗಟ್ಟಿಯಾಗಿ ನೆಲೆಸಿದೆ. ವೈದ್ಯರ ಅಪಗತಿಯು ಶ್ರೇಣೀಕೃತ ಸಮಾಜದ ಮೇಲು–ಕೀಳುಗಳ ಅವಾಂತರದಿಂದಲ್ಲದೆ ಬೇರಾವ ಕಾರಣ ದಿಂದಲೂ ಘಟಿಸಲು ಸಾಧ್ಯವಿರಲಿಲ್ಲ. ಇನ್ನೂ ಮುಂದೆ ಉಪನಿಷತ್ತುಗಳ ಕಾಲಕ್ಕೆ ಅಶ್ವಿನಿ ದೇವತೆಗಳು ಹೇಳಹೆಸರಿಲ್ಲದಂತಾದರು. ಏಕೆಂದರೆ, ಅಲ್ಲಿ ಬ್ರಹ್ಮಜ್ಞಾನ ಮಾತ್ರ ಪರಾವಿದ್ಯೆ. ದೈಹಿಕ ಶ್ರಮಕ್ಕೆ ಸಂಬಂಧಿಸಿದ ಕೆಲಸಗಳಲ್ಲಿ ತೊಡಗಿ ಬೆಟ್ಟ – ಗುಡ್ಡಗಳಲ್ಲಿ ಗಿಡ–ಮೂಲಿಕೆಗಳನ್ನು ಹುಡುಕುತ್ತಾ ಎಂತೆಂತಹವರ ಜೊತೆಯಲ್ಲೋ ಬೆರೆಯುವ ವೈದ್ಯನು ಹೇಗೆ ತಾನೆ ಬ್ರಹ್ಮವೇತ್ತರ ನಡುವೆ ನಿಲ್ಲಬಲ್ಲ! ಸಾಮಾಜಿಕ ಪ್ರತ್ಯೇಕತೆಯು ಶ್ರೇಷ್ಠ – ಕನಿಷ್ಠ ಎಂಬ ಭಾವವನ್ನು ನೆಲೆಗೊಳಿಸುತ್ತದೆ. ಆದರೆ ಋಗ್ವೇದದ ಸಾಮುದಾಯಿಕ ಬುಡಕಟ್ಟು ಜೀವನದಲ್ಲಿ ಶ್ರೇಷ್ಠ – ಕನಿಷ್ಠ ಎಂಬ ಭಾವದ ಬದಲು ಸಮಾನತೆಯ ಭಾವವು ಹಾಸುಹೊಕ್ಕಾಗಿದ್ದಿತು. ಒಟ್ಟಿನಲ್ಲಿ, ಸಾಮಾಜಿಕ ಪಲ್ಲಟಗಳ ಚರಿತ್ರೆಯನ್ನು ಕೆಲವೊಮ್ಮೆ ಯಜುರ್ವೇದವು ಕಟ್ಟಿಕೊಡುತ್ತದೆ. ಅದನ್ನು ಬಿಟ್ಟರೆ ಅದು ಶುದ್ಧಾಂಗವಾಗಿ ಪುರೋಹಿತ ವರ್ಗದ ಕೈಪಿಡಿ, ಅಷ್ಟೆ; ವಿಶೇಷ ಅಧ್ಯಯನಕ್ಕೆ ಸಾಮಗ್ರಿಯು ಬಹಳ ಅಲ್ಪಮಟ್ಟದ್ದು. ಬ್ರಾಹ್ಮಣಗಳು ಎಂಬ ಹೆಸರಿನ ಗ್ರಂಥಗಳು ಯಜುರ್ವೇದದ ನಂತರದವು. ಯಜುರ್ವೇದದಂತೆ ಅವೂ ಸಹ ಬಹುಮಟ್ಟಿಗೆ ಗದ್ಯರೂಪದಲ್ಲಿವೆ. ಆದರೆ ಅಲ್ಲಿ ಅನೇಕ ಆಖ್ಯಾನಗಳು ಬರುತ್ತವಾದ್ದರಿಂದ ಅವು ಭಾಗಶಃ ಅಧ್ಯಯನ ಯೋಗ್ಯ. ಉದಾಹರಣೆಗೆ, ಐತರೇಯ ಬ್ರಾಹ್ಮಣದ ಹರಿಶ್ಚಂದ್ರೋಪಾಖ್ಯಾನವು ಬಹಳ ಪ್ರಸಿದ್ಧವಾಗಿದೆ. ಶುನಃಶೇಪನ ಕತೆಯು ಅದರ ಭಾಗ. ಅವನ ತಂದೆ ಅಜೀಗರ್ತನು ಯಜ್ಞದಲ್ಲಿ ಮಗನ ವಧೆ ಮಾಡಲು ಹೇಸುವುದಿಲ್ಲ. ಅವನ ಷರತ್ತು ಒಂದೇ : ಇನ್ನಷ್ಟು ಸಹಸ್ರ ಸಂಪತ್ತನ್ನು ನೀಡು, ನಾನದನ್ನು ಮಾಡುತ್ತೇನೆ, ಎಂಬುದು (ಮಹ್ಯಂ ಅಪರಂ ಶತಂ ದತ್ತ ಅಹಮೇನಂ ಹನಿಷ್ಯಾಮಿ). ವೈದಿಕ ಸಮಾಜದ ಉಗಮ ಮತ್ತು ವಿಕಾಸವನ್ನು ಈ ರೀತಿಯಲ್ಲಿ ವೈದಿಕ ಸಾಹಿತ್ಯವು ಸಾಕಷ್ಟು ಸಮಗ್ರವಾಗಿ ಪ್ರತಿಫಲಿಸುತ್ತದೆ. ಅದನ್ನು ಲಂಬಿಸಿ ವ್ಯಾಖ್ಯಾನಿಸಲು ಇಲ್ಲಿ ಅವಕಾಶವಿಲ್ಲ.

ವೈದಿಕ ಸಾಹಿತ್ಯವನ್ನು ಅನುಕ್ರಮವಾಗಿ ಸಂಹಿತೆ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತು ಎಂದು ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸುವುದು ರೂಢಿ. ಅದು ಸಾಹಿತ್ಯವು ರಚನೆಗೊಂಡ ಕಾಲಾನುಕ್ರಮವನ್ನು ಸೂಚಿಸುತ್ತದೆ. ವಿಷಯದ ದೃಷ್ಟಿಯಿಂದ ನಿರ್ದಿಷ್ಟವಾಗಿ ಈ ವಿಭಾಗದ ಲಕ್ಷಣ ಇದು ಎಂದು ಹೇಳಲಾಗು ವುದಿಲ್ಲ. ಏಕೆಂದರೆ, ಕೆಲವು ಬ್ರಾಹ್ಮಣಗಳ ಅಂತ್ಯಭಾಗವನ್ನೇ ಆರಣ್ಯಕ ಎನ್ನಲಾಗಿದೆ ಮತ್ತು ಕೆಲವು ಆರಣ್ಯಕಗಳ ಅಂತ್ಯಭಾಗವು ಉಪನಿಷತ್ತು ಎನಿಸಿಕೊಂಡಿದೆ. ಸ್ವಲ್ಪ ಲಘುವಾಗಿ ಹೇಳುವುದಾದರೆ ನಾಲ್ಕು ಆಶ್ರಮಗಳು ನಾಲ್ಕು ವೈದಿಕ ಸಾಹಿತ್ಯ ಭಾಗಗಳಿಗೆ ಸಂವಾದಿಯಾಗಿವೆ : ಬ್ರಹ್ಮಚರ್ಯದಲ್ಲಿ ಸಂಹಿತೆಗಳನ್ನು ಉರುಹಚ್ಚು, ಗೃಹಸ್ಥನಾಗಿ ಯಜ್ಞ ಮಾಡಿ ದಕ್ಷಿಣೆ ಕೊಡು, ವಾನಪ್ರಸ್ಥನಾಗಿ ಕಾಡಿನಲ್ಲಿ ವಿಹರಿಸು ಮತ್ತು ಕಡೆಗೆ ಸಂನ್ಯಾಸಿಯಂತೆ ತೋರ್ಪಡಿಸಿಕೊಂಡು ಅಧ್ಯಾತ್ಮದ ಬಗ್ಗೆ ಬಿರುಸಾದ ದೀರ್ಘ ಉಪನ್ಯಾಸಗಳನ್ನು ನೀಡು. ಸಂಹಿತೆಗಳಿಂದ ಬ್ರಾಹ್ಮಣಗಳನ್ನು ಪ್ರತ್ಯೇಕಿಸ ಬಹುದಾದಂತೆ ಆರಣ್ಯಕಗಳನ್ನು ಬ್ರಾಹ್ಮಣಗಳಿಂದ ಪ್ರತ್ಯೇಕಿಸಲಾಗುವುದಿಲ್ಲ. ವಿಷಯ ಮತ್ತು ನಿರೂಪಣಾ ಶೈಲಿ ಎರಡೂ ಇದಕ್ಕೆ ಕಾರಣ. ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳು ನಿರ್ದಿಷ್ಟವಾಗಿ ಇಂತಿಂತಹ ವೇದ ಸಂಹಿತೆಗಳಿಗೆ ಲಗತ್ತಿಸಲ್ಪಟ್ಟಿವೆ ಎಂಬ ಸಾಂಪ್ರದಾಯಿಕ ತಿಳಿವಳಿಕೆ ಇದೆ. ಅದು ಸ್ವರೂಪಕ್ಕೆ ಅನ್ವಯಿಸುವುದೇ ವಿನಾ ವಿಷಯಸರಣಿಗಲ್ಲ. ಉದಾಹರಣೆಗೆ, ತೈತ್ತಿರೀಯ ಉಪನಿಷತ್ತು ತೈತ್ತಿರೀಯ ಸಂಹಿತೆ, ಬ್ರಾಹ್ಮಣ ಮತ್ತು ಆರಣ್ಯಕಗಳ ಸರಣಿಗೆ ಸೇರಿದೆ. ಆದರೆ ವಿಷಯದ ದೃಷ್ಟಿಯಿಂದ ಯಾವುದೇ ಸಂಹಿತೆಗೆ ಸೇರಿಸಿದರೂ ಅಷ್ಟೇನೂ ವ್ಯತ್ಯಾಸ ವಾಗುವುದಿಲ್ಲ. ಯಾವ ಬಣದ ಕರ್ತೃಗಳು ಆ ಸರಣಿಯ ಗ್ರಂಥಗಳನ್ನು ರಚಿಸಿದರೆಂಬ ಸೂಚನೆ ಈ ಲಗತ್ತಿಸುವಿಕೆಯಿಂದ ದೊರೆಯಬಹುದೋ ಏನೋ. ಆದರೆ ಅರುಣ ಶೌರಿಯಂತಹ ಪಂಡಿತಂಮನ್ಯರಿಗೆ "ಉಪನಿಷತ್ತು" ಎಂಬ ಹೆಸರಿದ್ದರೆ ಸಾಕು, ಅದು ಪ್ರಾಚೀನ ಗ್ರಂಥವೆಂಬ ಮಂಕುತನ ಕವಿಯುತ್ತದೆ. ಉಪನಿಷತ್ತುಗಳ ಪಟ್ಟಿಗೆ ಸೇರಿರುವ ಎಷ್ಟೋ ಗ್ರಂಥಗಳು ನಿಜಕ್ಕೂ ಪ್ರಾಚೀನವಲ್ಲ, ಬುದ್ಧಪೂರ್ವ ಯುಗಗಳವಲ್ಲ. ಉದಾಹರಣೆಗೆ, ಅಲ್ಲೋಪನಿಷತ್ ಎಂಬ ಗ್ರಂಥವೊಂದಿದ್ದರೆ ಅದು ಕ್ರಿ. ಶ. ಏಳನೆಯ ಶತಮಾನದ ನಂತರದ್ದೇ ಆಗಿರುತ್ತದೆ. ಅಂತಹ ಉಪನಿಷತ್ತುಗಳ ಸಂಖ್ಯೆಯು ಪ್ರಾಚೀನ ಉಪನಿಷತ್ತುಗಳಿಗಿಂತ ಹೆಚ್ಚಾಗಿದೆ. ಅವು ಬಹುಮಟ್ಟಿಗೆ ಪಾರಾಯಣ ಸಾಮಗ್ರಿಗಳೇ ಹೊರತು ಅಧ್ಯಯನ ಯೋಗ್ಯವಾದ ಗ್ರಂಥಗಳಲ್ಲ. ಈ ಮಾತು ಕೆಲವರಿಗೆ ಕಸಿವಿಸಿ ಉಂಟುಮಾಡುತ್ತದಾದರೂ ವಸ್ತುಸ್ಥಿತಿ ಇರುವುದು ಹಾಗೆಯೇ.

ಅಪೌರುಷೇಯವಾದ ವೈದಿಕ ಸಾಹಿತ್ಯಕ್ಕೆ ಕಾಲಮಾನವೆಂಬುದೇನೂ ಇಲ್ಲ, ಅದು ಯಾವತ್ತೂ ಇದ್ದದ್ದು ಮತ್ತು ಇರುವಂಥದು ಎಂಬ ವಾದವೊಂದಿದೆ. "ವೇದವು ನಿತ್ಯ" ಎಂಬುದರ ಅರ್ಥ ಅದೇ. ಆದರೆ ಸ್ವಾರಸ್ಯದ ಸಂಗತಿಯೇನೆಂದರೆ "ವೇದವು ನಿತ್ಯ"ವೆಂದು ವಾದಿಸುವವರೇ "ವೇದವು ಖಿಲವಾಗಿಹೋಗುತ್ತಿದೆ, ಅದನ್ನು ಸಂರಕ್ಷಿಸಬೇಕು" ಎಂದು ಗೋಳಿಡುತ್ತಾರೆ; "ಶಾಶ್ವತವಾದ ಜಾತಿಧರ್ಮಗಳು ಮತ್ತು ಕುಲಧರ್ಮಗಳು ಯುದ್ಧದಿಂದಾಗಿ ನಾಶವಾಗುತ್ತವೆ" ಎನ್ನುವ ಗೀತೆಯ ಅರ್ಜುನನಿಗೆ ಸಮಾನರು ಇವರು. ಆ ಧರ್ಮಗಳು ನಿಜಕ್ಕೂ ಶಾಶ್ವತವಾದರೆ ನಾಶಹೊಂದುವ ಪ್ರಮೇಯ ಎಲ್ಲಿಯದು! ಅಂದರೆ, ಅವು ನಾಶವಾಗದೆ ಸ್ಥಿರವಾಗಿರಲಿ ಎಂದು ಆಶಿಸುವವರ ಆತಂಕ ಅದು. ಈಗಂತೂ ಇಡೀ ವೈದಿಕ ಸಾಹಿತ್ಯವು ಮುದ್ರಿತ ರೂಪದಲ್ಲಿ ಲಭ್ಯ, ಆದ್ದರಿಂದ ಬೇಗನೆ ಕಳೆದುಹೋಗುವ ಭೀತಿಯೇನೂ ಇಲ್ಲ. ಅಧ್ಯಯನ ಮಾಡಬೇಕೆನ್ನುವವರಿಗೆ ಅದು ಸದಾ ಎಟಕುತ್ತದೆ. ಅಧ್ಯಯನವನ್ನು ಮಾಡದೆಯೇ ಅದನ್ನು ಕುರಿತ ಪಾಂಡಿತ್ಯವನ್ನು ಮೆರೆಯುವವರಿಗೆ ಅದಿದ್ದರೂ ಒಂದೇ, ಇಲ್ಲದಿದ್ದರೂ ಒಂದೇ. ವೇದವು ಅಪೌರುಷೇಯವಲ್ಲ, ಯಾವ ಗ್ರಂಥವೂ ಅಪೌರುಷೇಯವಾಗಲಾರದು, ಎಲ್ಲವೂ ಮಾನವ ನಿರ್ಮಿತಿಗಳು ಎಂದಾದರೆ ಅದು ಯಾವ ಕಾಲದಲ್ಲಿ ರಚನೆಗೊಂಡಿತೆಂಬ ಪ್ರಶ್ನೆಯು ಪ್ರಸ್ತುತ ವಾಗುತ್ತದೆ. ಆ ಪ್ರಶ್ನೆಗೆ ಮನಬಂದಂತೆ ಉತ್ತರಿಸಿರುವವರು ದೊಡ್ಡ ಸಂಖ್ಯೆಯಲ್ಲಿದ್ದಾರೆ. ಉದಾಹರಣೆಗೆ, ಎ. ಸಿ. ದಾಸ್ ಎಂಬ "ವಿದ್ವಾಂಸ" ಋಗ್ವೇದವು ಕೊನೆಯ ಪಕ್ಷ ಕ್ರಿ. ಪೂ. ೧೬,೦೦೦ದಲ್ಲಿ ಮತ್ತು ಇನ್ನೂ ನಿಖರವಾಗಿ ಹೇಳುವುದಾದರೆ ಕ್ರಿ. ಪೂ. ೨೫,೦೦೦ದಲ್ಲಿ ರಚನೆಗೊಂಡಿತು ಎನ್ನುತ್ತಾನೆ. ಅವನನ್ನು ಮೀರಿಸುವ ವಿದ್ವಾಂಸ ಎಚ್. ಎನ್. ಸುಬ್ಬರಾವ್. ಈತನ ಪ್ರಕಾರ ಋಗ್ವೇದವು ಕಡಿಮೆಯೆಂದರೆ ಕ್ರಿ. ಪೂ. ೪೦,೫೫೦ರಲ್ಲಿ ಮತ್ತು ಶತಪಥ ಬ್ರಾಹ್ಮಣವು ಕಡಿಮೆಯೆಂದರೆ ಕ್ರಿ. ಪೂ. ೨೫,೦೭೦ರಲ್ಲಿ ರಚನೆಗೊಂಡವು. ಇನ್ನೂ ಖಂಡಿತವಾಗಿ ಹೇಳಬೇಕೆಂದರೆ ಜಗತ್ತು ಅಸ್ತಿತ್ವಕ್ಕೆ ಬಂದಾಗಲೇ ಋಗ್ವೇದವೂ ಅಸ್ತಿತ್ವಕ್ಕೆ ಬಂದಿತು ಎಂಬುದು ಈ ಘನಪಂಡಿತರ

४८० शाङ्करभाष्ययुता

उच्यन्ते । "पञ्चम्यामाहुतावापः पुरुषवचसो भवन्ति" इत्यपां होम्यतया प्रश्ने श्रुतत्वात् । "श्रद्धा वा आपः श्रद्धामेवारभ्य प्रणीय प्रचरन्ति" इति च विज्ञायते । तां श्रद्धामब्रूपां जुह्वति । तस्या आहुतेः सोमो राजा अपां श्रद्धाशब्दवाच्यानां द्युलोकाग्नौ हुतानां परिणामः सोमो राजा सम्भवति । यथर्ग्वेदादिपुष्परसा ऋगादिमधुकरोपनीतास्ते आदित्ये यशआदिकार्यं रोहितादिरूपलक्षणमारभन्ते इत्युक्तं, तथेमा अग्निहोत्राहुतिसमवायिन्यः सूक्ष्माः श्रद्धाशब्दवाच्या आपो द्युलोकमनुप्रविश्य चान्द्रं कार्यमारभन्ते फलरूपमग्निहोत्राहुत्योः । यजमानाश्च तत्कर्तार आहुतिमया आहुतिभावनाभाविता आहुतिरूपेण कर्मणा आकृष्टाः श्रद्धाप्समवायिनो द्युलोकमनुप्रविश्य सोमभूता भवन्ति । तदर्थं हि तैरग्निहोत्रं हुतम् । अत्र त्वाहुतिपरिणाम एव पञ्चाग्निसम्बन्धक्रमेण प्राधान्येन विवक्षित उपासनार्थं न यजमानानां गतिः । तां त्वविदुषां धूमादिक्रमेणोत्तरत्र वक्ष्यति, विदुषां चोत्तरां विद्याकृताम् ॥२॥ इति चतुर्थः खण्डः ॥

**पर्जन्यो वाव गौतमाग्निस्तस्य वायुरेव समिदभ्रं धूमो विद्युदर्चिरशनिरङ्गारा ह्रादनयो विस्फुलिङ्गाः ॥१॥**

द्वितीयहोमपर्यायार्थमाह—पर्जन्यो वाव पर्जन्य एव गौतमाग्निः पर्जन्यो नाम वृष्ट्युपकरणाभिमानी देवताविशेषः । तस्य वायुरेव समित् वायुना हि पर्जन्योऽग्निः समिध्यते । पुरोवातादिप्राबल्ये वृष्टिदर्शनात् । अभ्रं धूमो, धूमकार्यत्वाद्धूमवच्च लक्ष्यमाणत्वात् । विद्युदर्चिः, प्रकाशसामान्यात् । अशनिरङ्गाराः काठिन्याद्विद्युत्सम्बन्धाद्वा । ह्रादनयो विस्फुलिङ्गाः ह्रादनयो गर्जितशब्दाः मेघानां विप्रकीर्णत्वसामान्यात् ॥ १ ॥

**तस्मिन्नेतस्मिन्नग्नौ देवाः सोमं राजानं जुह्वति तस्या आहुतेर्वर्षं सम्भवति ॥२॥ इति पञ्चमः खण्डः ॥**

तस्मिन्नेतस्मिन्नग्नौ देवाः पूर्ववत्सोमं राजानं जुह्वति । तस्या आहुतेर्वर्षं सम्भवति । श्रद्धाख्या आपः सोमाकारपरिणता द्वितीये पर्याये पर्जन्याग्निं प्राप्य वृष्टित्वेन परिणमन्ते ॥२॥ इति पञ्चमः खण्डः ॥

**पृथिवी वाव गौतमाग्निस्तस्याः संवत्सर एव समिदाकाशो धूमो रात्रिरर्चिर्दिशोऽङ्गारा अवान्तरदिशो विस्फुलिङ्गाः ॥ १ ॥**

छान्दोग्योपनिषत् । ४८१

पृथिवी वाव गौतमाग्निरित्यादि पूर्ववत् । तस्याः पृथिव्याख्यस्याग्नेः संवत्सर एव समित् । संवत्सरेण हि कालेन समिद्धा पृथिवी व्रीह्यादिनिष्पत्तये भवति । आकाशो धूमः पृथिव्या इवोत्थित आकाशो दृश्यते । यथाऽग्नेर्धूमः। रात्रिरर्चिः, पृथिव्या हि अप्रकाशात्मिकाया अनुरूपा रात्रिः । तमोरूपत्वात् । अग्नेरिवानुरूपमर्चिः । दिशोऽङ्गारा, उपशान्तत्वसामान्यात् । अवान्तरदिशो विस्फुलिङ्गाः क्षुद्रत्वसामान्यात् ॥ १ ॥

**तस्मिन्नेतस्मिन्नग्नौ देवा वर्षं जुह्वति तस्या आहुतेरन्नं सम्भवति ॥ २ ॥ इति षष्ठः खण्डः ॥**

तस्मिन्नित्यादि समानम् । तस्या आहुतेरन्नं व्रीहियवादि सम्भवति ॥२॥ इति षष्ठः खण्डः ॥

**पुरुषो वाव गौतमाग्निस्तस्य वागेव समित्प्राणो धूमो जिह्वार्चिश्चक्षुरङ्गाराः श्रोत्रं विस्फुलिङ्गाः ॥ १ ॥**

पुरुषो वाव गौतमाग्निः । तस्य वागेव समित् । वाचा हि मुखेन समिध्यते पुरुषो न मूकः । प्राणो धूमो, धूम इव मुखान्निर्गमनात् । जिह्वार्चिर्लोहितत्वात् । चक्षुरङ्गारा भास आश्रयत्वात् । श्रोत्रं विस्फुलिङ्गाः । विप्रकीर्णत्वसाम्यात् ॥ १ ॥

**तस्मिन्नेतस्मिन्नग्नौ देवा अन्नं जुह्वति तस्या आहुते रेतः सम्भवति ॥ २ ॥ इति सप्तमः खण्डः ॥**

समानमन्यत् । अन्नं जुह्वति व्रीह्यादिसंस्कृतम् । तस्या आहुते रेतः सम्भवति ॥ २ ॥ इति सप्तमः खण्डः ॥

**योषा वाव गौतमाग्निस्तस्या उपस्थ एव समिद्यदुपमन्त्रयते स धूमो योनिरर्चिर्यदन्तः करोति तेऽङ्गारा अभिनन्दा विस्फुलिङ्गाः ॥ १ ॥**

योषा वाव गौतमाग्निः । तस्या उपस्थ एव समित् । तेन हि सा पुत्राद्युत्पादनाय समिध्यते । यदुपमन्त्रयते स धूमः । स्त्रीसम्भवादुपमन्त्रणस्य । योनिरर्चिर्लोहितत्वात् । यदन्तः करोति तेऽङ्गारा अग्निसम्बन्धात् । अभिनन्दाः सुखलवा विस्फुलिङ्गाः क्षुद्रत्वात् ॥ १ ॥

३१

ವಿದ್ವತ್ಪೂರ್ಣ ನಿರ್ಣಯ. ಇವರಿಗೆಲ್ಲಾ ಭಾಷೆಗಳ ಇತಿಹಾಸ ಮತ್ತು ಭಾಷಾಶಾಸ್ತ್ರ ಅಪ್ರಸ್ತುತ ಮತ್ತು ಅನುಪಯುಕ್ತ. ಆದ್ದರಿಂದ, ಸಾಮಾನ್ಯಮತಿಗೆ ದಕ್ಕದಂತಹ ಅವರ ಕಾಲ ನಿರ್ಣಯಗಳನ್ನು ಬದಿಗಿಟ್ಟು ಋಗ್ವೇದದ ಕಾಲವನ್ನು ಹೆಚ್ಚು ಕಡಿಮೆ ಸರಿಯಾಗಿ ಗುರುತಿಸಲು ಯತ್ನಿಸುವುದು ಉಚಿತ.

ಹರಪ್ಪ – ಮೊಹೆಂಜೊದಾರೊ ನಾಗರಿಕತೆಯು ಸು. ಕ್ರಿ. ಪೂ. ೨೬೦೦ರಿಂದ ೧೯೦೦ರವರೆಗೆ ಏಳುನೂರು ವರ್ಷಗಳ ಕಾಲ ಸಾಕಷ್ಟು ವಿಶಾಲವಾದ ಪ್ರದೇಶದಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದಿತು. ೧೫೦೦ಕ್ಕೂ ಹೆಚ್ಚು ನೆಲೆಗಳಲ್ಲಿ ಈ ನಾಗರಿಕತೆಯು ಕಂಗೊಳಿಸಿತ್ತು ಮತ್ತು ಸುಮಾರು ೬,೮೦,೦೦೦ ಚದರ ಕಿಲೋಮೀಟರ್‌ಗಳ ಪ್ರದೇಶದಲ್ಲಿ ವಿಸ್ತಾರವಾಗಿ ಹರಡಿತ್ತು. ಋಗ್ವೇದದ ಆರ್ಯರು ಈ ಪ್ರದೇಶಕ್ಕೆ ಕಾಲಿರಿಸಿದಾಗ ಅಲ್ಲಿಯ ಭಗ್ನಾವಶೇಷಗಳನ್ನು ಕಂಡರೆಂಬ ಒಂದು ಅಭಿಪ್ರಾಯವಿದೆ. 'ಅರ್ಮಕ' ಮತ್ತು 'ಅರ್ಮ–ಕಪಾಲ' ಎಂಬ ಋಗ್ವೇದದ ಪ್ರಯೋಗಗಳು ಹರಪ್ಪ ಸಂಸ್ಕೃತಿಯ ಅವಶೇಷಗಳನ್ನು ಸಂಕೇತಿಸುತ್ತವೆಯೆಂಬ ವಾದವು ಇದಕ್ಕೆ ಪೂರಕವಾಗಿದೆ. ಇನ್ನೊಂದು ಅಭಿಪ್ರಾಯದಂತೆ ಅಲೆಮಾರಿ ಆರ್ಯರೇ ಹರಪ್ಪ ನಾಗರಿಕತೆಯನ್ನು ನಾಶಗೈದರು. ಈ ಅಭಿಪ್ರಾಯಕ್ಕೆ ಅಷ್ಟು ಮಾನ್ಯತೆ ದೊರಕಿಲ್ಲ. ಯಾವ ಪ್ರಾಕೃತಿಕ ವಿಕೋಪವು ಸಿಂಧು ಕಣಿವೆಯ ನಾಗರಿಕತೆಯನ್ನು ವಿನಾಶಕ್ಕೆ ಈಡುಮಾಡಿತೋ ತಿಳಿಯದು. ಋಗ್ವೇದದ ಕರ್ತೃಗಳಂತೂ ಆ ನಾಗರಿಕತೆಯ ನಿರ್ಮಾಪಕರಲ್ಲವೆಂಬುದು ಶತಸ್ಸಿದ್ಧ. ಪಶುಸಂಗೋಪನಾ ಹಂತವನ್ನು ಸಹ ದಾಟದಿದ್ದ ಋಗ್ವೇದದ ಕಾಲದ ಆರ್ಯರು ಅಷ್ಟು ಉನ್ನತಮಟ್ಟದ ನಾಗರಿಕತೆ, ನಗರೀಕರಣ, ಲೋಹಶಾಸ್ತ್ರದಲ್ಲಿ ಪರಿಣತಿ, ವಿದೇಶಗಳಿಗೆ ನೌಕಾಯಾನ, ಮುಂತಾದುವನ್ನೆಲ್ಲಾ ಸಾಧಿಸಿದ್ದರೆಂಬುದು ಊಹೆಗೆ ನಿಲುಕದ ಸಂಗತಿ. ನಕ್ಷತ್ರಗಳು ಬೆಳಗಿನ ಹೊತ್ತು ಎಲ್ಲಿ ಮಾಯವಾಗುತ್ತವೆಂಬ ವಿಸ್ಮಯ ಋಗ್ವೇದದ ಕವಿಯದು, ಆದರೆ ಹರಪ್ಪ ನಾಗರಿಕತೆಯು ಗಮನಾರ್ಹವಾದ ಖಗೋಳಶಾಸ್ತ್ರ ಪರಿಣತಿಯನ್ನು ಪಡೆದಿದ್ದಿತು. ನಗರೀಕರಣದ ತಂತ್ರಜ್ಞಾನ ಮತ್ತು ಕೌಶಲ ಋಗ್ವೇದದ ಆರ್ಯರಿಗೆ ಸಿದ್ಧಿಸಿದ್ದರೆ ಧ್ವಂಸಗೊಂಡ ಸಿಂಧು ಕಣಿವೆಯ ನಾಗರಿಕತೆಯನ್ನು ಪುನರುಜ್ಜೀವಗೊಳಿಸ ಬಹುದಿತ್ತು, ಹೊಸ ನಗರಗಳನ್ನು ನಿರ್ಮಿಸಬಹುದಿತ್ತು. ಋಗ್ವೇದಕ್ಕೆ ದ್ಯುಲೋಕದ ಕಲ್ಪನೆ ಬೇಕಾದಷ್ಟಿದೆ, ಆದರೆ ಸುಟ್ಟ ಇಟ್ಟಿಗೆಗಳಿಂದ ಸೌಧಗಳ ನಿರ್ಮಾಣ ಎಳ್ಳಷ್ಟೂ ತಿಳಿಯದು. ಹರಪ್ಪ ಸಂಸ್ಕೃತಿಯ ಕಾಲದ ಸುಟ್ಟ ಇಟ್ಟಿಗೆಗಳನ್ನು ಶೇಖರಿಸಿಕೊಂಡು ಯಜ್ಞಕ್ಕೆ ಬೇಕಾದ ಚಿತಿಗಳನ್ನು ಕುಶಲಕರ್ಮಿಗಳು ಆರ್ಯರಿಗೆ ನಿರ್ಮಿಸಿಕೊಡ ಬೇಕಾಗಿತ್ತು. ಮತ್ತು ಹರಪ್ಪ ನಾಗರಿಕತೆಯ ನಂತರ ಸುಟ್ಟ ಇಟ್ಟಿಗೆಗಳು ಮತ್ತು ನಗರೀಕರಣಕ್ಕೆ ಬುದ್ಧನ ಕಾಲಾನಂತರದ ಮಗಧ ರಾಜ್ಯದ ಸ್ಥಾಪನೆಯ ಕಾಲದವರೆಗೆ ಕಾಯಬೇಕಾಯಿತು. ಒಟ್ಟಿನಲ್ಲಿ, ಹರಪ್ಪ ಸಂಸ್ಕೃತಿಯು ಋಗ್ವೇದದ ಆರ್ಯರ ಕೊಡುಗೆಯಲ್ಲ ಮತ್ತು ಋಗ್ವೇದವು ಹರಪ್ಪ ನಾಗರಿಕತೆಯ ಎರಡು–ಮೂರು ಶತಮಾನಗಳ ನಂತರ ರಚನೆಗೊಂಡ ಸಾಹಿತ್ಯವೆಂಬುದು ವಿವಾದದ ಸಂಗತಿಯಲ್ಲ. ಭಾವಾವೇಶದಿಂದ ಬೇರೆ ರೀತಿಯ ಪ್ರತಿಪಾದನೆಗಳಿಗೆ ಮಾರುಹೋಗುವ ವಿದ್ವಾಂಸರು ಕಳೆದ ಮೂರು ದಶಕಗಳಲ್ಲಿ ನಮ್ಮ ನಡುವೆ ಹೆಚ್ಚುತ್ತಿರುವುದಕ್ಕೆ ಸಮಕಾಲೀನ ರಾಜಕೀಯ ಸ್ಪರ್ಧೆಯು ಕಾರಣವೇ ವಿನಾ ವಸ್ತುನಿಷ್ಠ ಸಂಶೋಧನೆಯಲ್ಲ. ಆರ್ಯರು ನಮ್ಮ ದೇಶವನ್ನು ಆಕ್ರಮಿಸಿದರೆಂಬ ಆಪಾದನೆಯನ್ನು ತಪ್ಪಿಸಲು ಅಂತಹ ನಿಲುವನ್ನು ತಳೆಯುವುದು ಆ ವಿದ್ವಾಂಸರಿಗೆ ಅಗತ್ಯವೆನಿಸಿರಬಹುದು, ಆದರೆ ಅದು ಚರಿತ್ರೆಯ ತಿಪ್ಪರಲಾಗವಾಗುತ್ತದೆ. ಋಗ್ವೇದವೂ ಸೇರಿದಂತೆ ಇಡೀ ವೈದಿಕ ಸಾಹಿತ್ಯವು ಸುಮಾರು ಕ್ರಿ. ಪೂ. ೧೬೦೦ರಿಂದ ಬುದ್ಧಪೂರ್ವದ ಏಳನೆಯ ಶತಮಾನದವರೆಗಿನ ಕಾಲದಲ್ಲಿ ರಚನೆಗೊಂಡಿತು. ಅಂದರೆ, ಒಂದು ಸಾವಿರ ವರ್ಷಗಳಲ್ಲಿ ಸಂಹಿತೆ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳು ಮೈದಳೆದವು. ವಾಯವ್ಯ ಭಾರತದಿಂದ ಗಂಗಾನದಿಯ ಬಯಲನ್ನು ತಲುಪುವವರೆಗೂ ಆರ್ಯರು ಈ ಸಾಹಿತ್ಯಕೃಷಿಯಲ್ಲಿ, ಹೊಸ ಆಚರಣೆಗಳನ್ನು ರೂಪಿಸುವಲ್ಲಿ, ನಿರತರಾಗಿದ್ದರು. ಮಾರ್ಟಿನ್ ಹಾಗ್‌ನಂಥವರು ವೈದಿಕ ಸಾಹಿತ್ಯದ ಆರಂಭಿಕ ಕಾಲವನ್ನು ಕ್ರಿ. ಪೂ. ೨೪೦೦ ಎಂದು ಭಾವಿಸಿದ್ದಾರೆ.




ಲೋಕಮಾನ್ಯ ಬಾಲಗಂಗಾಧರ ತಿಲಕ್ ಮತ್ತು ಎಚ್. ಯಾಕೋಬಿ ಋಗ್ವೇದದಲ್ಲಿ ದೊರಕುವ ಒಂದು ಖಗೋಳಶಾಸ್ತ್ರೀಯ ಮಾಹಿತಿಯನ್ನಾಧರಿಸಿ ಋಗ್ವೇದದ ರಚನೆಯು ಕ್ರಿ. ಪೂ. ೪೫೦೦ರ ಆಸುಪಾಸಿನಲ್ಲಿ ನಡೆಯಿತೆಂದು ವ್ಯಾಖ್ಯಾನಿಸಿದ್ದಾರೆ. ತಿಲಕ್ ಅವರ ಪ್ರಸಿದ್ಧ "ಒರಾಯನ್" ಎಂಬ ಗ್ರಂಥವು ಪ್ರಕಟವಾದ್ದು ೧೯೦೩ರಲ್ಲಿ. ಆಗ್ಗೆ ಇನ್ನೂ ಹರಪ್ಪ–ಮೊಹೆಂಜೊದಾರೊ ಉತ್ಖನನಗಳು ನಡೆದಿರಲಿಲ್ಲ, ಸಿಂಧು ಕಣಿವೆಯ ನಾಗರಿಕತೆಯ ಬಗ್ಗೆ ತಿಳಿವು ದೊರಕಿರಲಿಲ್ಲ. ತಿಲಕ್ ಅವರ ಲೆಕ್ಕಾಚಾರದಂತೆ ಬ್ರಾಹ್ಮಣ ಗ್ರಂಥಗಳ ಕಾಲದಲ್ಲಿ ವಸಂತವಿಷುವವು (ವರ್ನಲ್ ಈಕ್ವಿನಾಕ್ಸ್) ಕೃತ್ತಿಕಾ ನಕ್ಷತ್ರದಲ್ಲಿತ್ತು. ಈ ಘಟನೆಯು ಸುಮಾರು ಕ್ರಿ. ಪೂ. ೨೫೦೦ರ ಸಂಗತಿ. ಋಗ್ವೇದ ಕಾಲದಲ್ಲಿ ಅದು ಮೃಗಶಿರಾ ನಕ್ಷತ್ರದಲ್ಲಿತ್ತು. ಆ ಘಟನೆಯು ಸುಮಾರು ಕ್ರಿ. ಪೂ. ೪೫೦೦ರ ಸಂಗತಿ. ಆದ್ದರಿಂದ ಋಗ್ವೇದವು ಆ ಕಾಲಮಾನದ್ದೆಂಬುದು ತಿಲಕರ ಇಂಗಿತ. "ಕೃತ್ತಿಕಾ ನಕ್ಷತ್ರವು ಪೂರ್ವದಲ್ಲಿ ಉದಯಿಸುತ್ತದೆ" ಎಂಬುದನ್ನು ಕುರಿತಂತೆ ಶತಪಥ ಬ್ರಾಹ್ಮಣದಲ್ಲಿ ದೀರ್ಘವಾದ ಪ್ರಸ್ತಾಪವಿದೆ. ಬೇರೆಡೆ ನಾವಿದನ್ನು ವಿವರವಾಗಿ ಚರ್ಚಿಸಿರುವುದನ್ನು ಗಮನಿಸಬಹುದು (ಭಾರತೀಯ ವಿಜ್ಞಾನದ ಹಾದಿ, ಪು. ೪೬–೪೮). ಅದರ ಸಾರಾಂಶವೇನೆಂದರೆ ವೈದಿಕ ಸಾಹಿತ್ಯದಲ್ಲಿ ದಾಖಲಾಗಿರುವ ಖಗೋಳಶಾಸ್ತ್ರೀಯ ಅಂಶಗಳು ಕಡ್ಡಾಯವಾಗಿ ಅದೇ ಸಾಹಿತ್ಯದ ಕಾಲದ ಸಂಗತಿಗಳಾಗಿರದೆ ಹಿಂದಿನ ಯಾವುದೋ ಕಾಲದ ಅವಲೋಕನದ ಸ್ಮೃತಿಯ ರೂಪದಲ್ಲಿರುತ್ತವೆ. ತೈತ್ತಿರೀಯ ಬ್ರಾಹ್ಮಣವು ಹೇಳುವಂತೆ (೧.೧.೨.೪–೬) ಖಗೋಳಶಾಸ್ತ್ರ ಜ್ಞಾನವು ವೈದಿಕ ಆರ್ಯರಿಗೆ ಯಾವುದೋ ಅಸುರರಿಂದ ದೊರೆತಿದ್ದಿತು. ಅವರು ಆರ್ಯರಿಂದ ಭಿನ್ನರು. ಅವರು ಹರಪ್ಪ ನಾಗರಿಕತೆಯ ಜನರಾಗಿದ್ದಿರಲು ಸಾಧ್ಯ. ಆದ್ದರಿಂದ ತಿಲಕರ ಸಂಶೋಧನೆಗೆ ಸೂಕ್ತ ಗೌರವವನ್ನು ಸೂಚಿಸುತ್ತಾ ಅವರ ತೀರ್ಮಾನವನ್ನು ಪ್ರಶ್ನಿಸಬೇಕಾಗುತ್ತದೆ. ಖಡಾಖಂಡಿತವಾಗಿ ಇಂಥದೇ ಶತಮಾನದಲ್ಲಿ ಋಗ್ವೇದದ ರಚನೆಯಾಯಿತೆಂದು ಹೇಳುವುದು ಕಷ್ಟವೆಂಬುದು ಇದೆಲ್ಲದರ ಮಥಿತಾರ್ಥ. ಸಾಮಾನ್ಯತಃ ಹೇಳುವುದಾದರೆ ಝೆಂಡ್ ಅವೆಸ್ತಾ ಕಾಲಕ್ಕೆ ಋಗ್ವೇದವೂ ಸೇರುತ್ತದೆ ಎಂಬುದು ಒಂದು ಅಂಗೀಕೃತ ನಿಲುವು. ಆ ದೃಷ್ಟಿಯಿಂದ ಕ್ರಿ. ಪೂ. ೧೬೦೦ ಋಗ್ವೇದದ ಆರಂಭಿಕ ಹಂತದ ಕಾಲವೆಂಬುದು ತಪ್ಪಾಗಲಾರದು. ಇದಕ್ಕೆ ಪೂರಕವಾದ ಇನ್ನೊಂದು ಪುರಾವೆ ಮಧ್ಯ ಏಷ್ಯದ ಭೋಗಾಜ್–ಕೋಯಿ ಎಂಬಲ್ಲಿ ದೊರೆತಿದ್ದ ಶಾಸನಗಳು. ಅವು ಅವೆಸ್ತಾದ ಸಮಕಾಲೀನ ದಾಖಲೆಗಳು. ಅವುಗಳ ನಂತರದಲ್ಲಿ ಮಿಟಾನಿ ಒಪ್ಪಂದಗಳೆಂಬ ದಾಖಲೆಗಳು ದೊರೆತಿವೆ. ಅವು ಕ್ರಿ. ಪೂ. ೧೪೦೦ಕ್ಕೆ ಸೇರುತ್ತವೆ. ಅವುಗಳಲ್ಲಿ ಮಿತ್ರ, ವರುಣ ಮತ್ತು ನಾಸತ್ಯರ ಪ್ರಸ್ತಾಪವಿದೆಯೆನ್ನುತ್ತಾರೆ. ಆದ್ದರಿಂದ ಋಗ್ವೇದವು ಅದಕ್ಕಿಂತಲೂ ಕನಿಷ್ಠ ಇನ್ನೂರು ವರ್ಷ ಮುಂಚಿನದಾಗಿರಬೇಕು. ಹೀಗಾಗಿ ಕ್ರಿ. ಪೂ. ೧೬೦೦ ಋಗ್ವೇದದ ರಚನೆಯ ಕಾಲವೆಂಬುದು ಮಾನ್ಯತೆಗೆ ಅರ್ಹವಾಗಿದೆ. ಹರಪ್ಪ–ಮೊಹೆಂಜೊದಾರೊ ನಾಗರಿಕತೆಯ ನಂತರ ಮತ್ತು ಬುದ್ಧನಿಗೆ ಮುನ್ನ ಎಂಬುದು ಪ್ರಶ್ನಾತೀತ. ನಿರ್ದಿಷ್ಟವಾಗಿ ಇಂಥದೇ ಕಾಲದ್ದೆಂದು ತಿಳಿಯದಿದ್ದರೂ ಲಭ್ಯವಾಗಿರುವ ವಿಸ್ತೃತ ಸಾಹಿತ್ಯ ಕ್ಷೇತ್ರದಲ್ಲಿ ಮಾನವ ಜನಾಂಗದ ಮೊಟ್ಟಮೊದಲ ಸ್ಥಾನವು ಋಗ್ವೇದಕ್ಕೆ ಸಲ್ಲುತ್ತದೆಂಬುದರಲ್ಲಿ ಅನುಮಾನವಿಲ್ಲ. ಇಂಡೋ–ಯೂರೋಪಿಯನ್ ಸಮುದಾಯದ ಈ ಆದಿಗ್ರಂಥವು ಸಾಹಿತ್ಯ, ದಾರ್ಶನಿಕ ಚಿಂತನೆ, ಮತಧರ್ಮದ ಆಚರಣೆ, ಸಾಮಾಜಿಕ ಅಂತಃಕಲಹಗಳ ದಾಖಲೆ, ಹೀಗೆ ಬಹುಮುಖೀ ಆಯಾಮಗಳನ್ನು ಹೊಂದಿದೆ. ಬುಡಕಟ್ಟು ಜೀವನದಿಂದ ಆಧುನಿಕ ನಾಗರೀಕತೆಯತ್ತ ಹೆಜ್ಜೆ ಹಾಕುವಾಗ ನಮ್ಮ ದೇಶವು ಮಾನವ ಜನಾಂಗಕ್ಕಿತ್ತ ಮೊದಲ ಪ್ರಶಸ್ತ ಕೊಡುಗೆ ಋಗ್ವೇದ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ,
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ನನ್ನ ಜೀವನದ ಮೊಟ್ಟಮೊದಲ ಸ್ತ್ರೀಯು ಕಟ್ಟಕಡೆಯ ಸ್ತ್ರೀಗೆ ಹೇಳಿದ್ದು






ಮಗಳೇ,
ಅದು ಕಡಲ ತೀರ
ಕಗ್ಗತ್ತಲು
ಉರಿದುರಿದು ಹೋಗುತ್ತಿರುವ
ಕೋಣೆಯ ಮೇಣದ ಬತ್ತಿಗಳು.

ಪರ್ವತಾರೋಹಿಗಳು
ಕೈಕೊಡಲಿಯಿಂದ ಕೊಚ್ಚಿ ಊರುತ್ತಾ
ನನ್ನಾಳಕ್ಕೆ ನುಗ್ಗಿ ಮೇಲೇರುತ್ತಿದ್ದರು.
ಸುಟ್ಟು ಕರಿದರೂ
ಒಂದೆಲೆಯನ್ನು ಗಟ್ಟಿಯಾಗಿ ಹಿಡಿದು ನಿಂತ ಮರದಂತೆ
ಅವನನ್ನು ಹಸಿರಾಗಿಯೇ ನಿಲ್ಲಿಸಿದ್ದೆ.

ಕಡೆಗೆ,
ಅವನು ಇಳಿದು ಹೋದ –
ನನ್ನಾಳದ ನೋವಿನಿಂದ
ನೋವೇ ಇಲ್ಲದ ಹಾಗೆ.
ತುಂಡಾದ ಕಳ್ಳುಬಳ್ಳಿ
ಮುಂಭಾಗದಲ್ಲೇ ಬಾಲವಿರುವ
ಒಂದು ಹಂದಿಯಾಗಿಸಿತು ನನ್ನನ್ನು.

ಈಗ,
ಅದೇ ಹಂದಿ
ವಾರ್ಧಕ್ಯದ ಕೆಸರುಗುಂಡಿಯಲ್ಲಿ
ಮೈಮುದುರಿ ಮಲಗಿದೆ.
ನನಗೀಗ ಸಾವಿರ ಸಾವಿರ ಬಾಲಗಳು –
ಉಸಿರಾಡಲು
ಉಚ್ಚೆ ಉಯ್ಯಲು
ಊಟ ಮಾಡಲು
ಔಷಧಿ ಒಯ್ಯಲು.

ಮಗಳೇ,
ಈ ವಾರ್ಧಕ್ಯ ಅಂದ್ರೆ ಹಾಗೇನೇ.
ಅಲ್ಲಿ
ಬಾಲವೇ ತಲೆಗಿಂತ ದೊಡ್ಡದು
ನಿಶ್ಚಲತೆ ಚಲನೆಗಿಂತ ಸ್ಥಾಯಿ
ಫ್ಯಾನಿನ ಹೂದಳಗಳಂಥ ರೆಕ್ಕೆಗಳು
ಮಗನ ಕೈಗಳೆಂಬೊ ರೆಕ್ಕೆಗಳಿಗಿಂತ
ಪ್ರೀತಿಯನ್ನುಣಿಸುತ್ತದೆ.

ಮಗಳೇ,
ಅವನು
ನಿನ್ನ ಬೆರಳುಗಳಲ್ಲಿ ಬೆರಳು ಸೇರಿಸಿ
ಕೂರುವನೇ ನಿನಗಂಟಿಕೊಂಡು ?
ನಾಲ್ಕೈದು ಮಾತ್ರೆಗಳ ಬದಲಿಗೆ
ಒಂದು ಚುಂಬನದಿಂದ
ಗುಣಪಡಿಸುವನೇ ನಿನ್ನ ಕಾಯಿಲೆಯನ್ನು ?
ಕಸಬಿದ್ದ ಕಣ್ಣಿಗೆ
ಫೂ... ಫೂ... ಊದುವನೇ ನಿನ್ನನ್ನಪ್ಪಿ ?
ಎಷ್ಟೆಷ್ಟೋ ಅಗ್ನಿಕುಂಡಗಳ
ಧಗಧಗಿಸುವ ಗಾಳಿಯನ್ನು
ಅವನೊಳಗೆ ಕೂಡಿಟ್ಟಿದ್ದೆ ನಾನು.

ಇಷ್ಟಾದರೂ ಅವನಿಗೆ ತಿಳಿದಿಲ್ಲ.
ಪ್ರಿಯ ಮಗಳೇ,
ಸುಮ್ಮನೆ ಅವನ ತೊಡೆಯನ್ನೊಮ್ಮೆ ಅಪ್ಪಿಕೊಂಡಿದ್ದಿದ್ದರೆ
ಸಾವು ಅವನ ಮುಖದ ಮೇಲೆ
ಮಂಜುಗಡ್ಡೆಯನ್ನಿಡುತ್ತಿತ್ತೇನೊ.

ಮುದ್ದು ಮಕ್ಕಳು
ಉತ್ತೀರ್ಣರಾಗುತ್ತಿದ್ದರೂ
ಅನುತ್ತೀರ್ಣಗೊಳ್ಳುತ್ತಲೇ ಇರುವ
ಶಾಲೆಗಳಂತೆ
ಏನಾದರೂ ಸರಿ
ನಾವು ತಳವೂರಿ ನಿಲ್ಲುತ್ತಿದ್ದೇವೆ.

ತೋಯ್ದು ತೊಪ್ಪೆಯಾಗಿ ಬರುವ
ಒಂದು ಬಲಿಷ್ಠ ನಾಯಿಗೆ
ಮುರಿದ ಗುಡಿಸಲಿನ ಕೆಳಗೆ
ಆಶ್ರಯ ಇನ್ನೂ ಇದ್ದೇಯಿದೆ.

ಆ ನಾಯಿ
ಅವನೇ ಆಗಿದ್ದರೂ ಕೂಡ.

ಮಲಯಾಳಂ ಮೂಲ : **ಪಿ. ಎನ್. ಗೋಪಿಕೃಷ್ಣನ್**
ಕನ್ನಡಕ್ಕೆ : **ಕಾಜೂರು ಸತೀಶ್**
ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕರಿಕೆ ಕಾಲೋನಿ, ಮಡಿಕೇರಿ ತಾಲ್ಲೂಕು – ೫೭೧ ೨೪೭

ಮದ್ಯದ ದೊರೆ ಎಂದೇ ಪ್ರಖ್ಯಾತನಾಗಿರುವ ಉದ್ಯಮಿ ವಿಜಯ ಮಲ್ಯನ ಅವ್ಯವಹಾರಗಳಿಂದ ಕಿಂಗ್‌ಫಿಷರ್ ವಿಮಾನ ಸಂಸ್ಥೆ ದಿವಾಳಿಯಾಯಿತು. ಅಲ್ಲಿ ನೌಕರಿ ಮಾಡುತ್ತಿದ್ದವರು ಬೀದಿಪಾಲಾದರೂ ಈತ ಹಾಯಾಗಿದ್ದಾನೆ. ಅಲ್ಲದೆ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಸಾವಿರಾರು ಕೋಟಿ ರೂ.ಗಳು ಸಾಲ ಪಡೆದು ನಾಮ ಹಾಕಿದ್ದಾನೆ. ಸರಕಾರ ಈತನ ಮೇಲೆ ಏನೂ ಕ್ರಮ ಕೈಗೊಂಡಿಲ್ಲ ಇದುವರೆಗೆ. ಈತ ಪಾರ್ಲಿಮೆಂಟ್ ಸದಸ್ಯ ಬೇರೆ ಕಾಂಗ್ರೆಸ್ ಬೆಂಬಲದಿಂದ ರಾಜ್ಯಸಭೆ ಸದಸ್ಯನಾಗಿದ್ದ ಯುಪಿಎ ಆಡಳಿತಾವಧಿಯಲ್ಲಿ. ಮಹಾರಾಷ್ಟ್ರದ ಮುಖ್ಯಮಂತ್ರಿಯನ್ನು ಆಹುತಿ ತೆಗೆದುಕೊಂಡ ಇನ್ನೊಂದು ಪ್ರಕರಣ ಮುಂಬಯಿನ ಆದರ್ಶ ಹೌಸಿಂಗ್ ಹಗರಣ. ಅಕ್ರಮವಾಗಿ ೩೧ ಅಂತಸ್ತಿನ ವಸತಿ ಸಮುಚ್ಚಯದ ನಿರ್ಮಾಣಕ್ಕೆ ಸಂಬಂಧಿಸಿದ್ದು. ಇದರಲ್ಲಿ ರಕ್ಷಣಾ ಇಲಾಖೆಯೂ ಶಾಮೀಲಾಗಿದೆ. ತನಿಖೆ ಮುಗಿಯದೆ ಹಾಗೇ ಇದೆ. ಇನ್ನೂ ಹಲವಾರು ಪ್ರಕರಣಗಳಿದ್ದಾಗ್ಯೂ ಅವನ್ನು ಪ್ರಸ್ತಾಪಿಸುವುದು ಅಗತ್ಯವಿಲ್ಲ. ಒಟ್ಟಿನಲ್ಲಿ ಯುಪಿಎ–೨ರ ಅವಧಿ ಒಂದು ರೀತಿಯಲ್ಲಿ ಹಗರಣಗಳದ್ದೇ ಆಗಿತ್ತು ಎನ್ನಬೇಕು.

## ಸ್ವಾತಂತ್ರ್ಯಾನಂತರದ ಭಾರತ – ೨೦

# ಯುಪಿಎ–೨ ಸರಕಾರ : ಹಗರಣಗಳ ಸರಮಾಲೆ

ಸಿ. ಆರ್. ಕೃಷ್ಣರಾವ್

ಕಾಂಗ್ರೆಸ್ ನೇತೃತ್ವದ ಯುಪಿಎಯ ಪ್ರಧಾನಿಯಾಗಿ ಡಾ॥ ಮನಮೋಹನ ಸಿಂಗ್ ಅಧಿಕಾರ ಮತ್ತೆ ವಹಿಸಿಕೊಂಡದ್ದು ೨೦೦೯ರ ಮೇ ೨೨ರಂದು. ದೇಶದ ಹದಿಮೂರನೇ ಪ್ರಧಾನಿಯಾದ ಇವರು ನೆಹರು, ಇಂದಿರಾ ಗಾಂಧಿ ನಂತರ ಹತ್ತು ವರ್ಷ ಅಧಿಕಾರದಲ್ಲಿದ್ದರು. ಎರಡನೇ ಅವಧಿಯ ಅವರ ಆಡಳಿತ ಹಗರಣಗಳಿಂದ ಕೂಡಿದ್ದು ಪ್ರಧಾನಿ ಪಟ್ಟಕ್ಕೇ ಕಳಂಕ ತಂದಿತು. ಅತ್ಯಂತ ದುರ್ಬಲ ಪ್ರಧಾನಿ ಎಂಬುದಾಗಿ ಹೆಸರು ಪಡೆದ ಮನಮೋಹನ ಸಿಂಗ್ ಸ್ವತಃ ಭ್ರಷ್ಟರೆನಿಸಿಕೊಳ್ಳದಿದ್ದರೂ ಭ್ರಷ್ಟಾಚಾರವನ್ನು ತಡೆಯಲು ನಿಸ್ಸಹಾಯಕರಾಗಿದ್ದರು. ಎರಡು ಅಧಿಕಾರ ಕೇಂದ್ರಗಳು – ಸೋನಿಯ ಗಾಂಧಿ ನೇತೃತ್ವದ ಕಾಂಗ್ರೆಸ್ ಹೈಕಮಾಂಡ್ ಮತ್ತು ಮನಮೋಹನ ಸಿಂಗ್ ನೇತೃತ್ವದ ಪ್ರಧಾನಿ ಕಚೇರಿ – ಮತ್ತು ಸಮ್ಮಿಶ್ರ ಸರಕಾರದ ಇರಸು–ಮುರಸು ಅದಕ್ಕೆ ಕಾರಣ ಎನ್ನಬಹುದು. ಪೂರ್ತಿ ಅವಧಿ ಒಂದಾದ ಮೇಲೆ ಒಂದು ಹಗರಣಗಳಿಂದ ಕೂಡಿದ್ದ ಯುಪಿಎ ೨೦೧೪ರಲ್ಲಿ ನಡೆದ ಚುನಾವಣೆಗಳಲ್ಲಿ ಸೋತು ಸುಣ್ಣವಾಗಿ ನುಚ್ಚುನೂರಾಯಿತು. ಕಾಂಗ್ರೆಸ್ ತಲೆ ಎತ್ತದ ಹಾಗೆ ನೆಲಕಚ್ಚಿ ಲೋಕಸಭೆಯಲ್ಲಿ ವಿರೋಧ ಪಕ್ಷದ ಸ್ಥಾನವನ್ನೂ ಗಳಿಸಲಾಗದೆ ಹೀನಾಯವಾದ ಸೋಲನ್ನನುಭವಿಸಿತು. ಎಡಪಕ್ಷಗಳು ಬೆರಳೆಣಿಕೆಯಷ್ಟು ಸ್ಥಾನಗಳಿಸಿದುವು. ಕಾರ್ಪೊರೇಟ್ ವಲಯದ ಬೆಂಬಲ ಪಡೆದಿದ್ದ ಬಲಪಂಥೀಯ, ಮತೀಯವಾದಿ ಭಾಜಪ ನೇತೃತ್ವದ ಎನ್‌ಡಿಎ ಅತ್ಯಧಿಕ ಸ್ಥಾನಗಳಿಸಿ ಅಧಿಕಾರಕ್ಕೆ ಬಂದಿತು. ಇದನ್ನು ಮುಂದೆ ವಿವರವಾಗಿ ಪರಿಶೀಲಿಸೋಣ.

ಸಂಭವಿಸಿದ ಹಗರಣಗಳಲ್ಲಿ ದೇಶದ ಖಜಾನೆಗೆ ಆದ ನಷ್ಟ ಲಕ್ಷ ಲಕ್ಷ ಕೋಟಿ ರೂಪಾಯಿಗಳಷ್ಟು. ಸ್ವತಂತ್ರ ಭಾರತದಲ್ಲಿ ಭ್ರಷ್ಟಾಚಾರಕ್ಕೆ ಮಿತಿಯೇ ಇಲ್ಲ. ಹಿಂದೆ ಅದು ಹಲವು ಸಹಸ್ರ ರೂಪಾಯಿಗಳಾದರೆ ಈಗ ಎಲ್ಲ ಕೋಟಿಗಳಲ್ಲೇ ವ್ಯವಹಾರ. ಸ್ವಾತಂತ್ರ್ಯಾನಂತರದಲ್ಲಿ ಬೆಳಕಿಗೆ ಬಂದ ಮೊದಲ ಹಗರಣಗಳು ಎಂದರೆ ಇಂಗ್ಲೆಂಡಿನಿಂದ ರಕ್ಷಣಾ ಇಲಾಖೆಗೆ ಜೀಪುಗಳನ್ನು ಕೊಳ್ಳುವುದರಲ್ಲಿ ನಡೆದ ಭ್ರಷ್ಟಾಚಾರ ಮತ್ತು ಮುಂದ್ರ ಪ್ರಕರಣ ಎಂದೇ ಹೆಸರಾಗಿರುವ ಜೀವ ವಿಮಾ ಹೂಡಿಕೆ ಪ್ರಕರಣ. ಅನಂತರದ ವರ್ಷಗಳಲ್ಲಿ ಹಲವು ಅವ್ಯವಹಾರಗಳು ಬೆಳಕಿಗೆ ಬಂದಿವೆ. ಚುನಾವಣಾ



ವೆಚ್ಚ ಏರಿದ ಹಾಗೆ ದೇಶದಲ್ಲಿ ಭ್ರಷ್ಟಾಚಾರವೂ ಹೆಚ್ಚಿರುವುದನ್ನು ಕಾಣಬಹುದಾಗಿದೆ. ಸ್ವಾತಂತ್ರ್ಯಾ ನಂತರದ ಅರವತ್ತೆಂಟು ವರ್ಷಗಳಲ್ಲಿ ಹಗರಣವಿಲ್ಲದ ವರ್ಷವೇ ಇಲ್ಲ ಎನ್ನಬಹುದು. ಕೇಂದ್ರ ಹಾಗೂ ರಾಜ್ಯ ಸರಕಾರಗಳೆರಡರಲ್ಲೂ ಒಂದಲ್ಲ ಒಂದು ಬಗೆಯ ಹಗರಣಗಳು ತಾಂಡವವಾಡುತ್ತಿವೆ. ನೆಹರು ಆಡಳಿತದ ಕಾಲದಲ್ಲಿ ಭ್ರಷ್ಟಾಚಾರ ಕುರಿತು ಸಹನೆ ಇತ್ತು, ಇಂದಿರಾ ಗಾಂಧಿ ಕಾಲದಲ್ಲಿ ಅದು ಕ್ರಮಬದ್ಧವಾಯಿತು, ಈಗ ಅದು ಎಗ್ಗಿಲ್ಲದೆ ಸಾಗಿದೆ ಎಂದು ಪ್ರತೀತಿ ಇದೆ. ಒಟ್ಟಿನಲ್ಲಿ ಭ್ರಷ್ಟಾಚಾರ ಎನ್ನುವುದು ಚೊಂಬಿನಿಂದ ಹೊರಬಂದ 'ಜೀನಿ'ಯಂತೆ ಬೃಹದಾಕಾರವಾಗಿ ಬೆಳೆದು ನಿಂತಿದೆ. ಬೇರೆ ಮುಂದುವರಿದ ದೇಶಗಳಲ್ಲೂ ಭ್ರಷ್ಟಾಚಾರ, ಲಂಚ, ರುಷುವತ್ತೂ ಎಲ್ಲ ಇದೆ. ಆದರೆ ಅದು ಪ್ರಮುಖವಾಗಿ ಮೇಲ್ಮಟ್ಟಕ್ಕೆ ಮಾತ್ರ ಸೀಮಿತ. ಆದರೆ ಭಾರತದಲ್ಲಿ ಅದು ಜನಜೀವನದಲ್ಲಿ ಹಾಸುಹೊಕ್ಕಾಗಿ ಬಿಟ್ಟಿದೆ, ಕೆಳಗಿನಿಂದ ಮೇಲಿನವರೆಗೆ, ಅಂದರೆ ಪೇದೆಯಿಂದ ಮಂತ್ರಿಯವರೆಗೆ ಹಬ್ಬಿಕೊಂಡಿದೆ. ಇರಲಿ, ಅದು ಬೇರೆಯೇ ವಿಷಯ.

ಯುಪಿಎ-೨ರ ಅವಧಿಯಲ್ಲಿ ಬೆಳಕಿಗೆ ಬಂದ ಬೃಹತ್ ಹಗರಣ ಎಂದರೆ '೨ಜಿ-ಸ್ಪೆಕ್ಟ್ರಮ್' ಎಂದು ಕುಖ್ಯಾತವಾಗಿರುವುದು. ಈ ಪ್ರಕರಣದಿಂದ ಸರಕಾರಕ್ಕೆ ಆದ ನಷ್ಟ ೧.೭೬ ಲಕ್ಷ ಕೋಟಿ ರೂ.ಗಳು ಎಂದು ಅಂದಾಜು ಮಾಡಲಾಗಿದೆ. ಈ ಖಾತೆ ಮೊದಲಿನಿಂದಲೂ, ಎಂದರೆ ಯುಪಿಎ ಆಡಳಿತ ಪ್ರಾರಂಭವಾದಾಗಿನಿಂದ ಸಮ್ಮಿಶ್ರ ಸರಕಾರದ ಅಂಗಪಕ್ಷವಾದ ದ್ರಾವಿಡ ಮುನ್ನೇತ್ರ ಕಳಗಂ (ಡಿಎಂಕೆ) ಕೈಯಲ್ಲಿದೆ. ಮನಮೋಹನ ಸಿಂಗ್ ಸರಕಾರದಲ್ಲಿ ಡಿಎಂಕೆಯ ಎ. ರಾಜಾ ಟೆಲಿಕಾಮ್ ಸಚಿವ. ದೂರಸಂಪರ್ಕ ಲೈಸನ್ಸ್ ನೀಡಿಕೆಯಲ್ಲಿ ೧೨೨ ಹೊಸ ಲೈಸನ್ಸ್‌ಗಳನ್ನು ಹಲವು ಖಾಸಗಿ ಕಂಪೆನಿಗಳಿಗೆ ೨೦೦೧ರ ದರದಲ್ಲಿ ಅಕ್ರಮವಾಗಿ ನೀಡಿದ್ದು. ಇಂಥ ಲೈಸನ್ಸ್ ನೀಡಿಕೆಯಲ್ಲಿ ಹರಾಜು ನಡೆಸುವ ಕ್ರಮವನ್ನು ಅನುಸರಿಸದೆ ಸಚಿವರು ಬೇಕಾಬಿಟ್ಟಿಯಾಗಿ ಖಾಸಗಿ ಕಂಪೆನಿಗಳಿಗೆ ನೀಡಿದ್ದಾರೆ ಎನ್ನುವುದೇ ಆರೋಪ. ಇದು ಬೆಳಕಿಗೆ ಬಂದದ್ದು ಭಾರತ ಸರಕಾರದ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ಅವರ ವರದಿಯಿಂದ. ಈ ಹಗರಣ ಪಾರ್ಲಿಮೆಂಟಿನ ಕಲಾಪಗಳನ್ನು ಸಾಕಷ್ಟು ನುಂಗಿ ಹಾಕಿತು. ಸಚಿವ ಸ್ಥಾನದಿಂದ ಕೆಳಗಿಳಿಯದೆ ಪಟ್ಟು ಹಿಡಿದು ಕೂತ ಎ. ರಾಜಾ ಅವರ ಮೇಲೆ ಏನೂ ಕ್ರಮ ಕೈಗೊಳ್ಳಲಾಗದೆ ಪ್ರಧಾನಿಯ ದೌರ್ಬಲ್ಯ ಈ ಹಗರಣದಲ್ಲಿ ಸ್ಪಷ್ಟವಾಗಿ ಕಂಡುಬಂದಿತು. ಸರಕಾರದಲ್ಲಿ ಪ್ರಮುಖ ಪಾಲುದಾರ ಡಿಎಂಕೆ ಆಗಿದ್ದುದೇ ಕಾರಣ. ದೇಶದ ಸರ್ವೋಚ್ಚ ನ್ಯಾಯಾಲಯ ಮಧ್ಯಪ್ರವೇಶ ಮಾಡುವವರೆಗೆ ರಾಜಾ ಕುರ್ಚಿಗೆ ಅಂಟಿಕೊಂಡಿದ್ದರು. ಸಚಿವ ಸ್ಥಾನದಿಂದ ಕೆಳಗಿಳಿದ ಮೇಲೆ ೨ಜಿ ಹಗರಣದ ಪ್ರಮುಖ ಆರೋಪಿಯಾಗಿ ಬಂಧನಕ್ಕೊಳಗಾದ ರಾಜ ಸಾಕಷ್ಟು ದೀರ್ಘಕಾಲ ಜೈಲಿನಲ್ಲಿದ್ದು, ಈಗ ಜಾಮೀನಿನ ಮೇಲೆ ಬಿಡುಗಡೆಯಾಗಿದ್ದಾರೆ. ತಮಿಳುನಾಡಿನ ಡಿಎಂಕೆ ನಾಯಕ ಎಂ. ಕರುಣಾನಿಧಿಯವರ ಪುತ್ರಿ, ಪಾರ್ಲಿಮೆಂಟ್ ಸದಸ್ಯೆ ಕನಿಮೊಳಿ ಕೂಡ ಆಪಾದಿತರಲ್ಲಿ ಒಬ್ಬರು. ಕೆಲಕಾಲ ಬಂಧನದಲ್ಲಿದ್ದು ಈಗ ಜಾಮೀನಿನ ಮೇಲೆ ಬಿಡುಗಡೆಯಾಗಿದ್ದಾರೆ. ಇದರಲ್ಲಿ ಶಾಮೀಲಾಗಿರುವ ಅಧಿಕಾರಿಗಳು, ಪ್ರಭಾವಿಗಳು ಹಲವರಿದ್ದಾರೆ. ಎಲ್ಲರೂ ಆಪಾದಿತರೇ. ವರ್ಷಗಳು ಉರುಳಿದರೂ ಇನ್ನೂ ವಿಚಾರಣೆ ಮುಂದುವರಿಯುತ್ತಲೇ ಇದೆ. ಯಾವಾಗ ಮುಗಿದು ಅಪರಾಧಿಗಳಿಗೆ ಶಿಕ್ಷೆಯಾದೀತೋ ಕಾದು ನೋಡಬೇಕು. ನಮ್ಮ ದೇಶದಲ್ಲಿ ರಾಜಕಾರಣಿಗಳಿಗೆ ಸಂಬಂಧಿಸಿದ ಎಲ್ಲ ಪ್ರಕರಣಗಳ ಗತಿಯೂ ಇದೇ ಆಗಿದೆ.

ಗಣಿಗಾರಿಕೆಗೆ ಸಂಬಂಧಿಸಿದ ಹಗರಣಗಳು ಹಲವು. ಕಬ್ಬಿಣದ ಅದಿರು, ಕಲ್ಲಿದ್ದಲು, ಮರಳು, ಮ್ಯಾಂಗನೀಸ್, ಗ್ರಾನೈಟ್, ಹೀಗೆ ಪಟ್ಟಿ ಮಾಡುತ್ತ ಹೋಗಬಹುದು. ಕೇಂದ್ರ ಹಾಗೂ ರಾಜ್ಯ ಸರಕಾರಗಳಿಗೆ ನೈಸರ್ಗಿಕ ಸಂಪನ್ಮೂಲಗಳ ಹಂಚಿಕೆಯ ಕಳಂಕ ಕಟ್ಟಿಟ್ಟ ಬುತ್ತಿ. ಕಲ್ಲಿದ್ದಲು ಹಗರಣ ಬಹು ದೊಡ್ಡದು. ೨೦೧೨ರಲ್ಲಿ ಬಯಲಾದ ಈ ಪ್ರಕರಣದಲ್ಲಿ ಸರಕಾರಕ್ಕಾಗಿರುವ ನಷ್ಟ ೧.೮೬ ಲಕ್ಷ ಕೋಟಿ ಎಂದು ಅಂದಾಜು ಮಾಡಲಾಗಿದೆ. ೨೦೦೪ರಿಂದಲೇ ಕಲ್ಲಿದ್ದಲ ಗಣಿಗಾರಿಕೆ ಪರವಾನಗಿ ಹಂಚಿಕೆಯಲ್ಲಿ ಅಕ್ರಮ ನಡೆದಿದೆ. ಸರಕಾರ ೧೯೪ ಕಲ್ಲಿದ್ದಲ ಗಣಿಗಾರಿಕೆ ಪ್ರದೇಶಗಳನ್ನು ಹರಾಜು ಮೂಲಕ ಹಂಚದೆ ಹಾಗೇ ವ್ಯವಹಾರ ಮಾಡಿದ್ದು ಬೆಳಕಿಗೆ ಬಂದಿದೆ. 'ಕೋಲ್‌ಗೇಟ್ ಪ್ರಕರಣ' ಎಂದೇ ಹೆಸರಾಗಿರುವ ಈ ಅವ್ಯವಹಾರ ಬೆಳಕಿಗೆ ಬಂದದ್ದು ೨೦೧೨ರಲ್ಲಿ. ಸರ್ವೋಚ್ಚ ನ್ಯಾಯಾಲಯ ಈ ಹಗರಣದ ತನಿಖೆಯನ್ನು ಕೈಗೊಂಡಿದೆ. ಸರ್ಕಾರವನ್ನು ನ್ಯಾಯಾಲಯ ತರಾಟೆಗೆ ತೆಗೆದುಕೊಂಡು ಛೀಮಾರಿ ಹಾಕಿದೆ. ಪ್ರಧಾನ ಮಂತ್ರಿಗಳಿಗೆ, ಅವರ ಕಚೇರಿಗೆ ಕಲ್ಲಿದ್ದಲ ಗಣಿಗಾರಿಕೆಯಲ್ಲಿ ಸಂಭವಿಸಿದ ಅಕ್ರಮಗಳನ್ನು ತಡೆಯಲು ಯಾವುದೇ ಕ್ರಮ ತೆಗೆದುಕೊಳ್ಳಲಿಲ್ಲ. ಕಾರ್ಪೊರೇಟ್


ಎ. ರಾಜಾ ಮತ್ತು ಕನಿಮೊಳಿ


ವಿಜಯ ಮಲ್ಯ

ಸಂಸ್ಥೆಗಳು, ಕಂಟ್ರಾಕ್ಟರುಗಳು, ಪ್ರಭಾವಿ ರಾಜಕಾರಣಿಗಳು ಇದರಲ್ಲಿ ಶಾಮೀಲಾಗಿರುವುದರಿಂದ ಕಲ್ಲಿದ್ದಲು ಮಾಫಿಯಾ ದೇಶದಲ್ಲಿ ಪ್ರಬಲವಾಗಿ ಬೆಳೆದಿದೆ. ದೇಶದ ನೈಸರ್ಗಿಕ ಸಂಪತ್ತನ್ನು ದೋಚುವ ಇಂಥವರಿಗೆ ಯಾವಾಗ ಶಿಕ್ಷೆಯಾಗುವುದೋ ಊಹಿಸುವುದೂ ದುಸ್ಸಾಧ್ಯ. ನಮ್ಮ ಕರ್ನಾಟಕದ ಬಳ್ಳಾರಿ ಗಡಿ ಧಣಿಗಳ ಅಕ್ರಮ ವ್ಯವಹಾರ, ಅಂದಿನ ಕಳ್ಳ ಸಾಗಾಣಿಕೆಯಿಂದ ಕೋಟಿ ಕೋಟಿ ನಷ್ಟವಾಗಿದೆ. ಸಾಕಷ್ಟು ದೀರ್ಘ ಕಾಲ ಕಾರಾಗೃಹದಲ್ಲಿದ್ದ ರೆಡ್ಡಿಗಳು ಈಗ ಜಾಮೀನಿನ ಮೇಲೆ ಬಿಡುಗಡೆಯಾಗಿದ್ದಾರೆ. ಪ್ರಕರಣದ ಪ್ರಮುಖ ಆರೋಪಿಗಳಾದ ರೆಡ್ಡಿ ಸೋದರರು ರಾಜ್ಯದಲ್ಲಿ ಭಾಜಪ ಅಧಿಕಾರದಲ್ಲಿದ್ದಾಗ ಸಚಿವರಾಗಿದ್ದರು. ಇವರಿಗೆ ಈಗ ಮೋದಿ ಸರಕಾರದಲ್ಲಿ ವಿದೇಶಾಂಗ ಸಚಿವೆಯಾಗಿರುವ ಸುಷ್ಮಾ ಸ್ವರಾಜ್ ಅವರ ರಕ್ಷಣೆಯೂ ಇತ್ತು ಎಂಬುದನ್ನು ಮರೆಯದಿರೋಣ. ಅಂತೂ ಇದುವರೆಗೆ ಇಂಥ ಹಗರಣಗಳಲ್ಲಿ ಸಿಕ್ಕಿಕೊಂಡಿರುವವರೆಲ್ಲ ಹೇಗೋ ನುಣುಚಿಕೊಂಡು ಕಾರಾಗೃಹದಿಂದ ಹೊರಗಿದ್ದಾರೆ. ನ್ಯಾಯಾಲಯ ವಿಧಿಸಿರುವ ದುಬಾರಿ ಮೊತ್ತದ ಹಣವನ್ನು ಜೋಡಿಸಲಾಗದೆ ಸಹಾರಾ ಕಂಪೆನಿಯ ಒಡೆಯ ಮಾತ್ರ ಇನ್ನೂ ಬಂಧನದಲ್ಲಿದ್ದಾರೆ. ಹಣದ ಥೈಲಿ ಇರುವವರು ವರ್ಷಗಟ್ಟಲೆ ಮೊಕದ್ದಮೆಗಳನ್ನು ಎಳೆದಾಡುವುದು ಹೊಸದೇನಲ್ಲ. ಬೇಕಾದಷ್ಟು ಹೆಸರುಗಳನ್ನು ಪಟ್ಟಿ ಮಾಡಬಹುದು. ಅದು ಈ ವಿಷಯಕ್ಕೆ ಹೊರತಾದ್ದು.

ಹಲವು ವರ್ಷಗಳ ಹಿಂದೆ ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ರಾಷ್ಟ್ರೀಯ ಕ್ರೀಡಾ ಪಂದ್ಯಗಳು ನಡೆದಾಗ ಬೇಕಾದಷ್ಟು ಅವ್ಯವಹಾರಗಳು ನಡೆದು ಸಾವಿರಾರು ಕೋಟಿ ರೂ.ಗಳನ್ನು ಲಪಟಾಯಿಸಲಾಯಿತು. ಪಂದ್ಯಗಳು ಮುಗಿದು ಹಲವು ವರ್ಷಗಳಾದರೂ ವಿಚಾರಣೆ ಮಾತ್ರ ಮುಗಿಯಲಿಲ್ಲ. ಇದರಲ್ಲಿ ಆಪಾದಿತರಾದವರಿಗೆ ಶಿಕ್ಷೆಯಾಯಿತೋ ಇಲ್ಲವೋ ತಿಳಿಯದು. ಪ್ರಕರಣ ಹಳತಾದಂತೆ ಜನರ ನೆನಪಿನಿಂದ ಅದು ಮರೆಯಾಗುವುದು ಸಹಜ. ಇದು ಸರಕಾರಕ್ಕೂ, ರಾಜಕಾರಣಿಗಳಿಗೂ ಚೆನ್ನಾಗಿ ತಿಳಿದಿದೆ. ಅದರಲ್ಲೂ ಒಂದರ ಹಿಂದೆ ಒಂದು ಪ್ರಕರಣ

ಹೊಸದಾಗಿ ಬರುತ್ತಿದ್ದ ಹಾಗೆ ಹಳೆಯದು ಮರೆಯಾಗುತ್ತಿರುತ್ತದೆ. ಅಂಥದೇ ಪ್ರಕರಣ ದೆಹಲಿಯಲ್ಲಿ ೨೦೧೦ರಲ್ಲಿ ಜರುಗಿದ ಕಾಮನ್‌ವೆಲ್ತ್ ಕ್ರೀಡಾಕೂಟಕ್ಕೆ ಸಂಬಂಧಿಸಿದ್ದು. ದೇಶದ ಕ್ರೀಡಾ ಜಗತ್ತಿನ ಅನಭಿಷಿಕ್ತ ದೊರೆ ಎನಿಸಿಕೊಂಡಿದ್ದ ಕಾಂಗ್ರೆಸ್ಸಿನ ಸುರೇಶ ಕಲ್ಮಾಡಿ ಈ ಸಾವಿರಾರು ಕೋಟಿ ವ್ಯವಹಾರದ ಪ್ರಧಾನ ಆರೋಪಿ. ಈಗಲೂ ಈತ ಆರಾಮವಾಗಿ ಓಡಾಡಿಕೊಂಡಿದ್ದಾನೆ. ಈತ ಎಂಥ ಭಂಡ ಎಂದರೆ ಏನೇ ಆರೋಪಗಳಿದ್ದರೂ ಅಧಿಕಾರದಿಂದ ಕೆಳಗಿಳಿಯಲು ನಿರಾಕರಿಸಿದ್ದ ಭೂಪ. ಕ್ರೀಡಾಕೂಟಕ್ಕಾಗಿ ಸ್ಟೇಡಿಯಮ್ ನಿರ್ಮಾಣ, ಕ್ರೀಡಾ ಗ್ರಾಮದ ನಿರ್ಮಾಣ, ಇತ್ಯಾದಿ ಎಲ್ಲದರಲ್ಲೂ ಅಕ್ರಮ. ಇದರಲ್ಲಿ ದೆಹಲಿ ಮುಖ್ಯಮಂತ್ರಿ ಶೀಲಾ ದೀಕ್ಷಿತ್ ಕೈವಾಡವೂ ಇತ್ತು. ಚುನಾವಣೆಗಳಲ್ಲಿ ಈಕೆಗೆ ತಕ್ಕ ಶಾಸ್ತಿಯಾಯಿತಲ್ಲದೆ, ಕಾಂಗ್ರೆಸ್ ಹೇಳಹೆಸರಿಲ್ಲದೆ ನಿರ್ನಾಮಗೊಂಡಿತು. ದೆಹಲಿಯಲ್ಲಿ ಕಾಂಗ್ರೆಸ್ ಸಾಕಷ್ಟು ದೀರ್ಘಕಾಲ ಆಡಳಿತದಲ್ಲಿತ್ತು. ಸಾರ್ವಜನಿಕ ಒತ್ತಾಯ, ಬಾಯ್‌ಕಾಟ್ ಬೆದರಿಕೆ ಬರುವವರೆಗೆ ಸುರೇಶ ಕಲ್ಮಾಡಿ ಕುರ್ಚಿಗೆ ಅಂಟಿಕೊಂಡಿದ್ದುದು ಎಲ್ಲರಿಗೂ ತಿಳಿದ ವಿಷಯ. ಪಂದ್ಯಗಳು ಪ್ರಾರಂಭ ವಾಗುವುದಕ್ಕೆ ಕೆಲವೇ ದಿನಗಳ ಮುಂಚೆ ನ್ಯಾಯಾಲಯದ ಮಧ್ಯಪ್ರವೇಶದಿಂದ ಈತ ಅಧಿಕಾರ ತ್ಯಜಿಸಿದ. ಪ್ರಕರಣ ಕುರಿತು ವಿಚಾರಣೆ, ಮೊಕದ್ದಮೆ ಇನ್ನೂ ಮುಗಿದಿಲ್ಲ.

ಈ ಪ್ರಮುಖ ಹಗರಣಗಳೇ ಅಲ್ಲದೆ ಯುಪಿಎ ಅಧಿಕಾರಾವಧಿಯಲ್ಲಿ ಬೇಕಾದಷ್ಟು ಭ್ರಷ್ಟಾಚಾರ ಬಯಲಾಗಿದೆ. ಎಲ್ಲವನ್ನೂ ಇಲ್ಲಿ ಪಟ್ಟಿ ಮಾಡಲಾಗುವುದಿಲ್ಲ. ಈಗೆಲ್ಲ ಒಂದೊಂದು ಪ್ರಕರಣದಲ್ಲೂ ಸರಕಾರಕ್ಕೆ ಆಗುವ ನಷ್ಟ ಕೋಟಿಗಟ್ಟಲೆ. ಇಪ್ಪತ್ತೊಂದನೇ ಶತಮಾನ ಭ್ರಷ್ಟಾಚಾರದ ಶತಮಾನವಾದೀತೇ ಎಂಬ ಅನುಮಾನ ಬರುತ್ತಿದೆ ಈಚೆಗಿನ ವಿದ್ಯಮಾನಗಳನ್ನು ಪರಿಗಣಿಸಿದರೆ. ಏಕೆಂದರೆ ಶತಮಾನದ ಮೊದಲ ಹದಿನೈದು ವರ್ಷಗಳಲ್ಲೇ ಸಾವಿರಾರು ಕೋಟಿ ಅವ್ಯವಹಾರಗಳು ಬೆಳಕಿಗೆ ಬಂದಿವೆ. ಶುದ್ಧ ಆಡಳಿತ, ಭ್ರಷ್ಟಾಚಾರದ ವಿಚಾರದಲ್ಲಿ ಶೂನ್ಯ ಅಸಹನೆ (ಜೀರೋ ಟಾಲರೆನ್ಸ್), ಇತ್ಯಾದಿ, ಇತ್ಯಾದಿ ಘೋಷಣೆಗಳಿಂದ ಪ್ರಧಾನಿ ಪಟ್ಟಕ್ಕೇರಿದ ಮೋದಿ ಸರಕಾರ ಒಂದು ವರ್ಷ ದಾಟುತ್ತಿದ್ದಂತೆಯೇ ಪ್ರಕರಣಗಳು ಬಯಲಾಗುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಮನಮೋಹನ ಸಿಂಗ್ ಮೌನಿ ಎನಿಸಿಕೊಂಡಿದ್ದರೆ ಪ್ರಧಾನಿ ಮೋದಿ ಅವರನ್ನು ಮೀರಿಸಿದ್ದಾರೆ. ಇದನ್ನು ಮುಂದೆ ನೋಡೋಣ. ಯುಪಿಎ–೨ರ ಹಗರಣಗಳ ಕಡೆ ಗಮನ ಹರಿಸೋದು ಉಚಿತ.

ರಕ್ಷಣಾ ಇಲಾಖೆಗೆ ಸಂಬಂಧಿಸಿದ ಖರೀದಿಗಳ ವಿಚಾರದಲ್ಲಿ ನಮ್ಮ ದೇಶದಲ್ಲಷ್ಟೇ ಅಲ್ಲ, ಎಲ್ಲ ದೇಶಗಳಲ್ಲೂ ಭ್ರಷ್ಟಾಚಾರ ಇದ್ದದ್ದೆ. ಈ ಖರೀದಿಗಳಲ್ಲಿ ತೊಡಗುವ ಮೊತ್ತವೂ ಅಗಾಧ, ಲಂಚವೂ ಅಷ್ಟೇ ದೊಡ್ಡ ಪ್ರಮಾಣದ್ದು. ಮಧ್ಯವರ್ತಿಗಳದ್ದೇ ಇಲ್ಲಿ ಪಾರುಪತ್ಯ. ಶಸ್ತ್ರಾಸ್ತ್ರ ಮಾರಾಟದಲ್ಲಿ ಅಗ್ರಸ್ಥಾನದಲ್ಲಿರುವ ಅಮೆರಿಕ ಕೂಡ ಭ್ರಷ್ಟಾಚಾರದಿಂದ ಮುಕ್ತವಲ್ಲ. ಅಮೆರಿಕದಲ್ಲಿ ರಕ್ಷಣಾ ಇಲಾಖೆಗೆ ಸರಬರಾಜಾಗುವ ಪದಾರ್ಥಗಳ ಬೆಲೆ ಯಾವತ್ತೂ ದುಬಾರಿ, ಮಾರುಕಟ್ಟೆ ಬೆಲೆಗಿಂತ ಐದಾರು ಪಟ್ಟು ಜಾಸ್ತಿ. ಸರಕಾರ ಖರೀದಿಸುವ ಎಲ್ಲ ಸರಕುಗಳಲ್ಲೂ ಇದು ಇದ್ದದ್ದೆ. ನಮ್ಮ ದೇಶದಲ್ಲಿ ಸಾಕಷ್ಟು ದೀರ್ಘಕಾಲ, ಮಧ್ಯವರ್ತಿ ಸಾಯುವವರೆಗೆ ಎಳೆದಾಡಿದ ಒಂದು ಪ್ರಕರಣ ಎಂದರೆ ಬೋಫೋರ್ಸ್ ಪ್ರಕರಣ. ಈ ವ್ಯವಹಾರದಲ್ಲಿ ಒಳಗೊಂಡಿದ್ದ ಹಣಕ್ಕಿಂತ ಎರಡು ಪಟ್ಟು ಹಣ ಅದರ ತನಿಖೆಗೆ ವೆಚ್ಚವಾಯಿತು ಸರಕಾರಕ್ಕೆ ಎಂದರೆ ಉತ್ಪ್ರೇಕ್ಷೆ ಏನಲ್ಲ. ಶಸ್ತ್ರಾಸ್ತ್ರಗಳ ಮಾರಾಟದ ವ್ಯವಹಾರದಲ್ಲಿ ದಳ್ಳಾಳಿಗಳದ್ದೇ ಕಾರುಬಾರು. ಅದಲ್ಲದೆ ರಕ್ಷಣೆಯ ಹೆಸರಿನಲ್ಲಿ ಎಲ್ಲವೂ ಗೋಪ್ಯ. ಇನ್ನೇನು ಬೇಕು. ಹಾಗಾದರೂ ಕೆಲವೊಂದು ವ್ಯವಹಾರಗಳು ಬಯಲಾಗುತ್ತವೆ. ಅಂಥದ್ದೇ ರಕ್ಷಣಾ ಇಲಾಖೆಗೆ ಖರೀದಿಸಿದ ಹೆಲಿಕಾಪ್ಟರುಗಳಿಗೆ ಸಂಬಂಧಪಟ್ಟದ್ದು. ಇಟಲಿಯ ಕಂಪೆನಿಯಿಂದ ೩೬೦೦ ಕೋಟಿ ರೂ.ಗಳನ್ನು ತೆತ್ತು ಕೊಂಡು ತಂದ ೧೨ ಹೆಲಿಕಾಪ್ಟರುಗಳು. ಇದು ಬೆಳಕಿಗೆ ಬಂದದ್ದು ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ವರದಿಯಿಂದ. ಇನ್ನೆಷ್ಟು ಅವ್ಯವಹಾರಗಳು ಬೆಳಕಿಗೆ ಬಾರದೆ ಹುದುಗಿವೆಯೋ ಯಾರು ಬಲ್ಲರು.

ಯುಪಿಎ–೨ರ ಅಧಿಕಾರಾವಧಿಯಲ್ಲಿ ಸರಕಾರಕ್ಕೆ ನೇರವಾಗಿ ಸಂಬಂಧವಿಲ್ಲದೆ ಇದ್ದರೂ ಸಾರ್ವಜನಿಕ ವಲಯದಲ್ಲಿ ಆತಂಕ ಮೂಡಿಸಿದ ಹಗರಣಗಳು ಹಲವು. ಇಲ್ಲಿ ಅವುಗಳ ಪೈಕಿ ಕೆಲವನ್ನು ಮಾತ್ರ ಗಮನಿಸೋಣ. ನಮ್ಮ ದೇಶದಲ್ಲಿ ಇತರ ಯಾವುದೇ ಕ್ರೀಡಾ ಪಂದ್ಯಗಳಿಗೆ ಪ್ರಾಶಸ್ತ್ಯ ಇಲ್ಲದೆ ಹೋದರೂ ಕ್ರಿಕೆಟ್‌ಗೆ ವಿಶೇಷ ಮಾನ್ಯತೆ. ಇದು ಬ್ರಿಟಿಷ್ ಆಡಳಿತದ ಪಳೆಯುಳಿಕೆ. ಕಾಮನ್‌ವೆಲ್ತ್ ದೇಶಗಳಿಗೆ, ಎಂದರೆ ಬ್ರಿಟಿಷರು ಆಳ್ವಿಕೆ ನಡೆಸಿದ್ದ ವಸಾಹತುಗಳಿಗೆ ಸೀಮಿತವಾದ್ದು. ಅಂತರರಾಷ್ಟ್ರೀಯ ಒಲಿಂಪಿಕ್ ಪಂದ್ಯಗಳಲ್ಲಿ ಮಾನ್ಯತೆ ಪಡೆಯದಿರುವ ಒಂದು ಕ್ರೀಡಾ ಪಂದ್ಯ. ಶ್ರೀಮಂತರಿಂದ ಶ್ರೀಮಂತರಿಗಾಗಿ ಹುಟ್ಟಿಕೊಂಡ ಕ್ರಿಕೆಟ್ ಪ್ರಪಂಚದಲ್ಲಿ ಫುಟ್ಬಾಲ್ ಬಿಟ್ಟರೆ ಕೋಟಿ ಕೋಟಿಗಟ್ಟಲೆ ಹಣ ಹೊಂದಿರುವ ವ್ಯವಸ್ಥೆ. ಟೆಲಿವಿಷನ್ ಬಂದಮೇಲೆ ಇದು ಇನ್ನಷ್ಟು ಸಿರಿ ಕಂಡಿತು. ಕ್ರಿಕೆಟ್ ಆಟಗಾರರೂ ಕೂಡ ಕೋಟ್ಯಾಧಿಪತಿಗಳಾದರು. ಭಾರತದಲ್ಲಿ ಅತಿ ಬುದ್ಧಿವಂತ ಲಲಿತ್ ಮೋದಿ ಎಂಬಾತ ಹುಟ್ಟುಹಾಕಿದ್ದೇ ಇಂಡಿಯನ್ ಪ್ರೀಮಿಯರ್ ಲೀಗ್ ಎಂಬ ಜೂಜು ಕಟ್ಟೆ. ಟ್ವೆಂಟಿ–ಟ್ವೆಂಟಿ ಎಂಬ ಹಣೆಪಟ್ಟಿಯೊಂದಿಗೆ ಈತ ಪ್ರಾರಂಭಿಸಿದ ಕ್ರಿಕೆಟ್ ಪಂದ್ಯಗಳು ಅಂತರರಾಷ್ಟ್ರೀಯ ವ್ಯಾಪ್ತಿಯದ್ದು. ಸಹಸ್ರಾರು ಕೋಟಿ ರೂ.ಗಳ ವ್ಯವಹಾರ. ವಸ್ತುಶಃ ಕ್ರಿಕೆಟ್ ಆಟಗಾರರನ್ನು ಗುಲಾಮರಂತೆ ಹರಾಜು ಹಾಕುವ ಪ್ರಕ್ರಿಯೆ ಪ್ರಾರಂಭಿಸಿದ ಭೂಪ ಈತ. ಹಣದ ಥೈಲಿ ಇದ್ದ ಕಡೆ ಭ್ರಷ್ಟಾಚಾರ ಇದ್ದದ್ದೆ. ಅವ್ಯವಹಾರ ನಡೆಸಿ, ನೂರಾರು ಕೋಟಿ ರೂ. ತೆರಿಗೆ ವಂಚಿಸಿ, ಲಂಡನ್ನಿನಲ್ಲಿ ಅಡಗಿ ಕೂತಿದ್ದಾನೆ ಈ ಮೋದಿ ಎಂಬಾತ ಐದು ವರ್ಷಗಳಿಂದ. ಮೋದಿ ಸರಕಾರದ ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್ ಬೆನ್ನಿಗಂಟಿಕೊಂಡು ಕಾಡುತ್ತಿದ್ದಾನೆ ಈತ. ಈಕೆಯ



ಲಲಿತ್ ಮೋದಿ

ಜೊತೆಗೆ ರಾಜಾಸ್ಥಾನದ ಭಾಜಪ ಮುಖ್ಯಮಂತ್ರಿ ವಸುಂಧರಾ ರಾಜೆ ಕೂಡ ಇದ್ದಾರೆ. ಈ ಪ್ರಕರಣ ಎಲ್ಲಿಗೆ ಮುಟ್ಟುತ್ತೋ ನೋಡೋಣ. ಅಂತೂ ಈ ಮೋದಿ 'ಶುದ್ಧಾಡಳಿತದ' ಮೋದಿ ಮುಖಕ್ಕೆ ಮಸಿ ಬಳಿದಿದ್ದಾನೆ. ಇದೇ ರೀತಿಯಲ್ಲಿ ಬಯಲಾದ ಖಾಸಗೀ ಅವ್ಯವಹಾರ ಎಂದರೆ ಆಂಧ್ರಪ್ರದೇಶದ ಸತ್ಯಮ್ ಕಂಪ್ಯೂಟರ್ಸ್ ಹಗರಣ. ಬಿ. ರಾಮಲಿಂಗಾರೆಡ್ಡಿ ಎಂಬಾತ ಪ್ರಮುಖ ಆರೋಪಿ. ಸಹಸ್ರಾರು ಮಂದಿ ಸಾಮಾನ್ಯ ಹೂಡಿಕೆದಾರರಿಗೆ ನಾಮ ಹಾಕಿರುವ ಪ್ರಕರಣ ಇದು. ಹಾಗೆಯೇ ಮದ್ಯದ ದೊರೆ ಎಂದೇ ಪ್ರಖ್ಯಾತನಾಗಿರುವ ಉದ್ಯಮಿ ವಿಜಯ ಮಲ್ಯನ ಅವ್ಯವಹಾರಗಳು. ಕಿಂಗ್‌ಫಿಷರ್ ವಿಮಾನ ಸಂಸ್ಥೆ ದಿವಾಳಿಯಾಯಿತು. ಅಲ್ಲಿ ನೌಕರಿ ಮಾಡುತ್ತಿದ್ದವರು ಬೀದಿಪಾಲಾದರೂ ಈತ ಹಾಯಾಗಿದ್ದಾನೆ. ಅಲ್ಲದೆ, ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಸಾವಿರಾರು ಕೋಟಿ ರೂ.ಗಳು ಸಾಲ ಪಡೆದು ನಾಮ ಹಾಕಿದ್ದಾನೆ. ಸರಕಾರ ಈತನ ಮೇಲೆ ಏನೂ ಕ್ರಮ ಕೈಗೊಂಡಿಲ್ಲ ಇದುವರೆಗೆ. ಈತ ಪಾರ್ಲಿಮೆಂಟ್ ಸದಸ್ಯ ಬೇರೆ ಕಾಂಗ್ರೆಸ್ ಬೆಂಬಲದಿಂದ ರಾಜ್ಯಸಭೆ ಸದಸ್ಯನಾಗಿದ್ದ ಯುಪಿಎ ಆಡಳಿತಾವಧಿಯಲ್ಲಿ. ಮಹಾರಾಷ್ಟ್ರದ ಮುಖ್ಯಮಂತ್ರಿಯನ್ನು ಆಹುತಿ ತೆಗೆದುಕೊಂಡ ಇನ್ನೊಂದು ಪ್ರಕರಣ ಮುಂಬಯಿನ ಆದರ್ಶ ಹೌಸಿಂಗ್ ಹಗರಣ. ಅಕ್ರಮವಾಗಿ ೩೧ ಅಂತಸ್ತಿನ ವಸತಿ ಸಮುಚ್ಚಯದ ನಿರ್ಮಾಣಕ್ಕೆ ಸಂಬಂಧಿಸಿದ್ದು. ಇದರಲ್ಲಿ ರಕ್ಷಣಾ ಇಲಾಖೆಯೂ ಶಾಮೀಲಾಗಿದೆ. ತನಿಖೆ ಮುಗಿಯದೆ ಹಾಗೇ ಇದೆ. ಇನ್ನೂ ಹಲವಾರು ಪ್ರಕರಣಗಳಿದ್ದಾಗ್ಯೂ ಅವನ್ನು ಪ್ರಸ್ತಾಪಿಸುವುದು ಅಗತ್ಯವಿಲ್ಲ. ಒಟ್ಟಿನಲ್ಲಿ ಯುಪಿಎ–೨ರ ಅವಧಿ ಒಂದು ರೀತಿಯಲ್ಲಿ ಹಗರಣಗಳದ್ದೇ ಆಗಿತ್ತು ಎನ್ನಬೇಕು.

*(ಮುಂದುವರಿಯುವುದು)*

ಸಿ. ಆರ್. ಕೃಷ್ಣರಾವ್
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫




**ದ್ವಾಪರ** (ಸಂಕೀರ್ಣ ಮಹಾಭಾರತಕ್ಕೊಂದು ವಿಭಿನ್ನ ವಿಶ್ಲೇಷಣೆ)

*ಕಂನಾಡಿಗಾ ನಾರಾಯಣ*

**ಪುಟ : ೩೬೪**

**ಬೆಲೆ : ರೂ. ೨೫೦**

**ನವಕರ್ನಾಟಕ ಪ್ರಕಾಶನ**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*ಇದುವರೆಗಿನ ನಮ್ಮ ಗ್ರಹಿಕೆಯ ಮಹಾಭಾರತದ ಪಾತ್ರಗಳೇ ಬೇರೆ. ಪುರಾಣಕಾವ್ಯದಲ್ಲಿ ಪಾಂಡವರು ಧರ್ಮಿಷ್ಠರು, ಸುಯೋಧನ ದುಷ್ಟ, ಕರ್ಣ ಜಾತಿಹೀನ, ವಿದುರ ಧರ್ಮಾತ್ಮ, ಭೀಷ್ಮ ಆಜನ್ಮ ಬ್ರಹ್ಮಚಾರಿ ಮಾತ್ರವಲ್ಲ, ಮಹಾಪ್ರತಿಜ್ಞೆಗೈದವನು. ಕೃಷ್ಣನಂತೂ ದೇವಾಂಶ ಸಂಭೂತನಾಗಿ ಧರ್ಮಗ್ಲಾನಿಯಾದಾಗ ಅವತರಿಸಿದ ಸಾಕ್ಷಾತ್ ಮಹಾವಿಷ್ಣು! ಆದರೆ... ಸ್ವಲ್ಪ ಸಾಧ್ಯತೆಗಳತ್ತ ಹೊರಳೋಣ. ಅರಮನೆಯಲ್ಲಿ ಇದ್ದ ಸ್ವೇಚ್ಛಾಪ್ರವೃತ್ತಿಯಿಂದ ಅನಾಹುತಗಳಾದವೆ? ಮಹಾಭಾರತದ ಪಾತ್ರಗಳನ್ನೆಲ್ಲ ಅವರವರ ನಡೆ–ನುಡಿಗಳೊಂದಿಗೆ ವಿಶ್ಲೇಷಿಸಿ ಕಥೆಯ ಚೌಕಟ್ಟಿನಲ್ಲೇ ನೋಡಿದರೆ ಬೇರೊಂದು ದೃಷ್ಟಿಕೋನದಲ್ಲಿಟ್ಟು ನೋಡೋಣ. ಅಲ್ಲಿ ಮನುಷ್ಯ ಸ್ವಭಾವದ ಅಪರೂಪದ ಗುಣವೊಂದು ಪರಿಚಯವಾಗುತ್ತದೆ. ಪೂರ್ವಗ್ರಹಗಳಿಂದ ಮುಕ್ತವಾದ ವಾತಾವರಣದಲ್ಲಿ ಪಾತ್ರಗಳನ್ನು ಸಾಧ್ಯತೆಗಳತ್ತ ಗಮನ ಕೊಟ್ಟು ನೋಡಿದಾಗ ನಿಜರೂಪ ಅನಾವರಣಗೊಳ್ಳುತ್ತದೆ. ಸುಯೋಧನನ ಹೆಸರನ್ನು ದುರ್ಯೋಧನ ಎಂದು ಬದಲಿಸಿದ್ದು ಯಾರು – ಯಾವಾಗ? ಜೂಜುಕೋರ ಧರ್ಮ, ದೇಹದಾರ್ಢ್ಯವಷ್ಟೇ ಇರುವ ಭೀಮ, ಅಣ್ಣನ ಮಾತೆಂದರೆ ಒಳಗೊಳಗೇ ಧುಮುಗುಟ್ಟುವ ಅರ್ಜುನ, ಲೆಕ್ಕಕ್ಕೇ ಇಲ್ಲದ ನಕುಲ–ಸಹದೇವರು, ಮಾತುಮಾತಿಗೆ ಅಸಹನೆ ತೋರಿ ನ್ಯಾಯ ಕೇಳುವ ದ್ರೌಪದಿ – ಎಲ್ಲರೂ ಒಗ್ಗಟ್ಟಾಗಿ ಇದ್ದುದು ನಿಜವೆ? ಮಹಾಭಾರತದಲ್ಲಿ ವೈಭವೀಕರಣಗೊಂಡ ಪಾತ್ರಗಳನ್ನೂ ಇಲ್ಲಿ ವಿಶ್ಲೇಷಣೆಗೆ ಒಳಪಟ್ಟ ಪಾತ್ರಗಳನ್ನೂ ಅಕ್ಕಪಕ್ಕದಲ್ಲಿ ಇಟ್ಟು ಮನದ ತಕ್ಕಡಿಯಲ್ಲಿಟ್ಟು ತೂಗಿ ನೋಡಿ! ವಿಭಿನ್ನ ದೃಷ್ಟಿಯಿಂದ ರಚಿಸಲಾದ ಕೃತಿ ಇದು.*



**ಕರಿಮೆಣಸಿನ ಗಿಡ** (ಅನುವಾದಿತ ಕಾದಂಬರಿ)

*ತೆಲುಗು ಮೂಲ : ಡಾ॥ ವಿ. ಚಂದ್ರಶೇಖರ ರಾವ್, ಅನುವಾದಕರು : ಸೃಜನ್*

**ಪುಟ : ೧೯೨** **ಬೆಲೆ : ರೂ. ೨೦೦**

**ಪಲ್ಲವ ಪ್ರಕಾಶನ,** ಚನ್ನಪಟ್ಟಣ

*‘ಕರಿ ಮೆಣಸಿನ ಗಿಡ’ ಸೃಜನ್ ಅನುವಾದಿಸಿರುವ ತೆಲುಗು (ಮೂಲ ಲೇಖಕರು: ಡಾ॥ ವಿ. ಚಂದ್ರಶೇಖರರಾವ) ಕಾದಂಬರಿ. ಮೂಲತಃ ಕಲಾವಿದರಾಗಿರುವ ಸೃಜನ್ ಅವರ ಕೈಯಲ್ಲಿ ಈ ಕಾದಂಬರಿಯ ಅನುವಾದವು ಕುಸುರಿ ಕಲೆಯಂತೆ ಅರಳುತ್ತ, ನಿಧಾನವಾಗಿ ವಸ್ತುವಿನುದ್ದಕ್ಕೂ ಜೀವಂತವಾಗಿ ವ್ಯಾಪಿಸುತ್ತ, ದಲಿತ ಜನಾಂಗವೊಂದು (ಮಾದಿಗ) ಪ್ರಸ್ತುತ ಸಂದರ್ಭದಲ್ಲಿ ಎದುರಿಸುತ್ತಿರುವ ಹೊಸ ಸಮಸ್ಯೆ–ಸವಾಲುಗಳ ಮೇಲೆ ಬೆಳಕು ಚೆಲ್ಲುತ್ತದೆ. ಕಾಲಾಂತರದಲ್ಲಿ ಸ್ವಜಾತಿ ದಲಿತ ನಾಯಕರ ದುರಾಸೆಯ ದೆಸೆಯಿಂದಾಗಿ ದಲಿತ ಚಳುವಳಿಯ ಮೂಲ ಉದ್ದೇಶಗಳಲ್ಲುಂಟಾಗುತ್ತಿರುವ, ಮನುಷ್ಯ ಬದುಕಿಗೆ ವಿರುದ್ಧವಾದ ಪಲ್ಲಟಗಳನ್ನು, ಕಾದಂಬರಿಯ ಮುಖ್ಯಪಾತ್ರ ರಾಜಯ್ಯನ ವಿಕ್ಷಿಪ್ತ ಬದುಕಿನ ಮೂಲಕ ಅನಾವರಣ ಮಾಡುತ್ತಲೇ ಈ ಹೊತ್ತು ಅಮಾಯಕ ದಲಿತ ಜನಾಂಗದ ಕಟ್ಟಕಡೆಯ ಮನುಷ್ಯ ನಿರ್ವಹಿಸುತ್ತಿರುವ ಅತಿ ಘೋರ ಬದುಕಿನ ಚಿತ್ರಣವನ್ನು ಕಣ್ಮುಂದೆ ತರುತ್ತದೆ. ಇಡಿಯಾಗಿ, ಕಾದಂಬರಿಯ ಆಶಯ, ಪ್ರಾರಂಭದಲ್ಲಿ ಬರುವ ಪಾರಿವಾಳಗಳ ಚಿತ್ರಣ ಮತ್ತು ಆ ಮೂಲಕ ಕಥಾನಾಯಕ ರಾಜಯ್ಯನ ಮಗ ರೂಮಿಯ, ತನ್ನ ಅಪ್ಪನಿಗೆ ವಿರುದ್ಧವಾದ ಮನೋಸ್ಥಿತಿಯು ದಲಿತರು ತಮ್ಮ ಹಕ್ಕಿಗಾಗಿ ತಮ್ಮವರೊಂದಿಗೇನೆ ಹೋರಾಡಬೇಕಾದ ಅನಿವಾರ್ಯತೆ ಈ ಹೊತ್ತಿನ ತುರ್ತು– ಎಂಬ ಅರ್ಥದಲ್ಲಿ ಧ್ವನಿಸುತ್ತದೆ.*




**ಕಥೆ ಹುಟ್ಟುವ ಪರಿ**

*ಸಂಪಾದಕರು : ಡಾ॥ ಅಮರೇಶ ನುಗಡೋಣಿ*

**ಪುಟ : xxii + ೪೧೪** **ಬೆಲೆ : ರೂ. ೩೦೦**

**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ

*ಕಥೆಗೆ ಲೋಕಾನುಭವಗಳು ಬೇಕು. ಈ ಲೋಕಾನುಭವಗಳ ಒಡಲಿನಿಂದ ಹುಟ್ಟುವ ವಸ್ತು ಬೇಕು. ಈ ವಸ್ತುವನ್ನು ಕಥೆಯ ರೂಪದಲ್ಲಿ ಹೆಣೆಯಲು ಪಾತ್ರ, ಸನ್ನಿವೇಶಗಳು ಬೇಕು. ಇವೆಲ್ಲವುಗಳನ್ನು ಬಳಸಿ ಆಕಾರ ನೀಡಲು ತಾತ್ವಿಕ ನಿಲುವು ಬೇಕು. ಕಥೆಗಾರನಲ್ಲಿ ಈ ತಾತ್ವಿಕತೆ ರೂಪುಗೊಳ್ಳುವುದಕ್ಕೆ ಕುಟುಂಬ, ವ್ಯಕ್ತಿ, ಸಮಾಜ, ಚಳುವಳಿ – ಇವೆಲ್ಲವೂ ಕಾರಣವಾಗುತ್ತವೆ. ತನ್ನ ಅನುಭವಗಳನ್ನು ನುಡಿಯಲ್ಲಿ ಮರುರೂಪಿಸಿಕೊಳ್ಳಲು ಕಥೆಗಾರನ ಕಲ್ಪನೆ ವಿಶಿಷ್ಟವಾಗಿರಬೇಕು. ಕಥೆಗಾರನಿಗೆ ಈ ಕಲ್ಪನೆ ದೊಡ್ಡವರ ಕಥೆಯಲ್ಲಿ ಹೊಸ ಲೋಕವೊಂದನ್ನು ಕಾಣಿಸಲು ಈ ಕಲ್ಪನೆಯಿಂದ ಮಾತ್ರ ಸಾಧ್ಯ. ಇದರೊಂದಿಗೆ, ಕಥೆ ಕಟ್ಟುವಾಗ ಕಥೆಗಾರನಿಗೆ ಇರಬೇಕಾದದ್ದು ಸಂಯಮ ಮತ್ತು ತನ್ಮಯತೆ. ಈ ಮಾತುಗಳಿಗೆ ಪೂರಕವಾಗಿ ಡಾ॥ ಅಮರೇಶ ನುಗಡೋಣಿಯವರು ಸಂಪಾದಿಸಿರುವ ‘ಕಥೆ ಹುಟ್ಟುವ ಪರಿ’ ಎಂಬ ಕೃತಿಯಲ್ಲಿ ದಶಕಗಳಿಂದ ಕಥಾ ರಚನೆಯಲ್ಲಿ ತೊಡಗಿರುವ ಕನ್ನಡದ ಅರವತ್ತೂರು ಕಥೆಗಾರರು, ಕಥೆ ಹುಟ್ಟುವ ಪರಿಯ ಬಗ್ಗೆ ತಮ್ಮ ಲೇಖನಗಳಲ್ಲಿ ಹೇಳಿಕೊಂಡಿದ್ದಾರೆ. ಇದರಲ್ಲಿ ಹದಿನೇಳು ಕಥೆಗಾರ್ತಿಯರೂ ಸಹ ಕಥೆಯ ಕುರಿತಾದ ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಕಥೆ ಕುರಿತಾದ ಕಥೆಗಾರನ ಅನುಭವಗಳನ್ನು ಬೇರೆ ಬೇರೆ ಪರಿಸರದಲ್ಲಿರುವ ಕಥೆಗಾರರಿಂದ ಲೇಖನಗಳ ರೂಪದಲ್ಲಿ ಬರೆಸಿ, ಅವುಗಳನ್ನು ಒಟ್ಟಾಗಿಸಿ ಹೀಗೆ ಕೃತಿಯ ರೂಪದಲ್ಲಿ ತಂದಿರುವುದು ಕನ್ನಡದ ಕಥಾ ಸಾಹಿತ್ಯ ಪ್ರಕಾರದಲ್ಲಿ ಮೊದಲ ಪ್ರಯತ್ನ. ಇದುವರೆಗೂ ಆಂಗ್ಲ ಭಾಷಾ ಕಥಾ ಸಾಹಿತ್ಯ ಪ್ರಕಾರದಲ್ಲಿ ರೂಢಿಯಲ್ಲಿದ್ದ ಇಂಥ ಪ್ರಯತ್ನವನ್ನು ಕನ್ನಡದಲ್ಲಿ ಮೊದಲ ಬಾರಿಗೆ ಮಾಡಿರುವ ಹೆಸರಾಂತ ಕಥೆಗಾರ ಡಾ॥ ಅಮರೇಶ ನುಗಡೋಣಿ ಮತ್ತು ಕೃತಿಯನ್ನು ಪ್ರಕಾಶಿಸಿದ ಕನ್ನಡ ವಿಶ್ವವಿದ್ಯಾಲಯ, ಹಂಪಿ – ಇವರ ಪ್ರಯತ್ನ ಸ್ತುತ್ಯರ್ಹ.*

– **ಕಲ್ಲೇಶ್ ಕುಂಬಾರ್,** ಹಾರೂಗೇರಿ, ಬೆಳಗಾವಿ

---




ಸಂಪಟೂರು ವಿಶ್ವನಾಥ್ ಅವರ ೩ ಹಾಸ್ಯಕೃತಿಗಳು

**೧. ಹಾಸ್ಯ ಪಟಾಕಿ ೨. ಹಾಸ್ಯ ಸಂಭ್ರಮ, ೩. ಹಾಸ್ಯ ಕಿಡಿ** (ನಗೆಹನಿಗಳು) ಸಂಪಟೂರು ವಿಶ್ವನಾಥ್

**ಪುಟ : ೬೪** **ಬೆಲೆ : ರೂ. ೨೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ನಗು ಸಾರ್ವತ್ರಿಕ. ಅದಕ್ಕೆ ಬಡವ–ಬಲ್ಲಿದ–ಜಾತಿ–ಧರ್ಮಗಳ ಹಂಗಿಲ್ಲ. ಬದುಕಿನಲ್ಲಿ ಏಕತಾನತೆ, ಬೇಸರ, ಒಂಟಿತನ ಕಾಡಿದಾಗ ನಗೆಹನಿಗಳು ಮರುಭೂಮಿಯಲ್ಲಿನ ಓಯಸಿಸ್‌ನಂತೆ ಮುದ ನೀಡುತ್ತವೆ. ನಗು ಟಾನಿಕ್‌ನಂತೆ ಎಂದು ವೈದ್ಯರು ಪುಷ್ಟಿ ಮಾಡುತ್ತಾರೆ. ನಕ್ಕರೆ ಸ್ವರ್ಗ ಎಂದು ನಗೆ ಸಾಹಿತಿಗಳು ಓದುಗನ ಬೆನ್ನು ಹತ್ತಿದ್ದಾರೆ. ಹಾಸ್ಯ ಸಾಹಿತ್ಯ ಒಂದು ಸಮುದ್ರವಿದ್ದಂತೆ. ಅಲ್ಲಿ ನಗುವಿನ ಅಲೆಗಳ ಭಂಡಾರವೇ ಇರುತ್ತದೆ. ಒಂದರ ಹಿಂದೊಂದು ಹೊಸ ಹೊಸ ಅಲೆಗಳು. ಒಂದು ಮಾಯವಾದಂತೆ ಇನ್ನೊಂದು ಮುನ್ನೆಲೆಗೆ ಬರುತ್ತದೆ. ಸಮಯ ಸಂದರ್ಭಕ್ಕೆ ತಕ್ಕಂತೆ ವೈವಿಧ್ಯಮಯ ಸನ್ನಿವೇಶಗಳು. ನೀವು ಬೇಡವೆಂದರೂ ಉಕ್ಕಿಬರುವ ಸಂತಸದ ಕ್ಷಣಗಳು. ‘ನಗುವು ಸಹಜದ ಧರ್ಮ’ ಎಂದಿದ್ದಾರೆ ಮಾನ್ಯ ಡಿ. ವಿ. ಜಿ.ಯವರು. ಆದರೆ ಇಂದಿನ ದಿನಗಳಲ್ಲಿ ಸಹಜ ಅಂತಿರಲಿ, ಕೃತಕ ನಗುವಿಗೂ ಬರ ಬಂದಿದೆ. ಎಲ್ಲೆಲ್ಲೂ ಧಾವಂತ – ಆತಂಕ – ದುಗುಡ ತುಂಬಿದ ಮುಖಗಳೇ. ಇಂಥ ಅಪರೂಪದ ಕ್ಷಣಗಳನ್ನು ಕಲೆಹಾಕಿ, ಪೋಣಿಸಿ ನಗೆಹಾರವನ್ನು ಈ ಮೂರೂ ಪುಸ್ತಕಗಳಲ್ಲಿ ನೇಯ್ದುಕೊಟ್ಟಿದ್ದಾರೆ ಲೇಖಕರು. ನಗೆ ಎಂಬ ಮಿಂಚನ್ನು ಮುಖಕ್ಕೆ ಬಡಿದು ಕ್ಷಣಕಾಲ ಬೆಳಗಲೆಂದು ಯತ್ನಿಸಿದ್ದಾರೆ.*

– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು – ೨೨



ವೈ. ಜಿ. ಮುರಳೀಧರನ್

# ಮತಗಟ್ಟೆಯ ಹಿಂದೆ ಚುನಾವಣಾ ಸುಧಾರಣೆಗಳು



ಭಾರತದಲ್ಲಿ ಚುನಾವಣಾ ಪದ್ಧತಿಯಲ್ಲಿ ತರಬೇಕಾದ ಸುಧಾರಣೆ ಮತ್ತು ಮಾರ್ಪಾಟುಗಳ ಬಗ್ಗೆ ಈಗಾಗಲೆ ಸಾಕಷ್ಟು ಚರ್ಚೆ ನಡೆದಿದೆ. ಕೇಂದ್ರ ಸರ್ಕಾರವು ರಚಿಸಿದ ಹಲವು ಸಮಿತಿಗಳು ನೀಡಿರುವ ಸಲಹೆ ಮತ್ತು ಸೂಚನೆಗಳು ಇನ್ನೂ ಕಾರ್ಯಗತವಾಗ ಬೇಕಿದೆ. ಇದರ ಮಧ್ಯೆ ಸುಪ್ರೀಂಕೋರ್ಟ್ ನೀಡಿರುವ ತೀರ್ಪುಗಳ ಹಿನ್ನೆಲೆಯಲ್ಲಿ ಕೆಲವೊಂದು ಕ್ರಮವನ್ನು ಜರುಗಿಸಲಾಗಿದೆ. ಆದರೂ ಚುನಾವಣೆ ಪ್ರಕ್ರಿಯೆಯಲ್ಲಿ ಮೂಲಭೂತವಾಗಿ ಆಗಬೇಕಾದ ಬದಲಾವಣೆ ಆಗಿಲ್ಲ. ಕೇಂದ್ರ ಸರ್ಕಾರವು ೧೯೯೦ರಲ್ಲಿ ರಚಿಸಿದ ಗೋಸ್ವಾಮಿ ಸಮಿತಿಯ ವರದಿಯಿಂದ ಆರಂಭವಾದ ಈ ಪ್ರಯತ್ನ ಈಗಲೂ ಮುಂದುವರಿಯುತ್ತಿದೆ. ಗೋಸ್ವಾಮಿ ವರದಿಯ ನಂತರ ೧೯೯೩ರಲ್ಲಿ ವೋಹ್ರಾ ಸಮಿತಿಯ ವರದಿಯು ಕೆಲವೊಂದು ಸೂಚನೆಗಳನ್ನು ನೀಡಿತ್ತು. ಐದು ವರ್ಷದ ತರುವಾಯ ೧೯೯೮ರಲ್ಲಿ ಇಂದ್ರಜಿತ್ ಗುಪ್ತಾ ಸಮಿತಿಯು ಚುನಾವಣೆಯ ಖರ್ಚು ವೆಚ್ಚಗಳ ಬಗ್ಗೆ ತನ್ನ ವರದಿಯನ್ನು ಸಲ್ಲಿಸಿತ್ತು.

ರಾಷ್ಟ್ರೀಯ ಕಾನೂನು ಆಯೋಗ ೧೯೯೯ರಲ್ಲಿ ಚುನಾವಣಾ ಕಾನೂನುಗಳ ಬಗ್ಗೆ ಅಧ್ಯಯನ ನಡೆಸಿ ವರದಿ ನೀಡಿತ್ತು. ಭಾರತದ ಸಂವಿಧಾನದ ಕಾರ್ಯಾಚರಣೆ ಕುರಿತು ರಚಿತವಾದ ಆಯೋಗ ೨೦೦೧ರಲ್ಲಿ ಚುನಾವಣಾ ಪದ್ಧತಿಯಲ್ಲಿ ಆಗಬೇಕಾದ ಬದಲಾವಣೆ ಕುರಿತು ಕೆಲವೊಂದು ಸಲಹೆಗಳನ್ನು ನೀಡಿತ್ತು. ಭಾರತೀಯ ಚುನಾವಣಾ ಆಯೋಗ ೨೦೦೪ರಲ್ಲಿ ಚರ್ಚಾ ಪತ್ರವನ್ನು ಸಿದ್ಧಪಡಿಸಿ ಚುನಾವಣಾ ಸುಧಾರಣೆ ಬಗ್ಗೆ ತನ್ನ ಅನಿಸಿಕೆಗಳನ್ನು ಕೇಂದ್ರಕ್ಕೆ ಕಳುಹಿಸಿತ್ತು. ಇದಾದ ನಂತರ ೨೦೦೮ರಲ್ಲಿ ಡಾ|| ವೀರಪ್ಪ ಮೊಯ್ಲಿ ಅವರ ನೇತೃತ್ವದ ಎರಡನೇ ಆಡಳಿತ ಸುಧಾರಣಾ ಆಯೋಗವೂ ಚುನಾವಣೆಗೆ ಸಂಬಂಧಪಟ್ಟಂತೆ ಹಲವಾರು ಸೂಚನೆಗಳನ್ನು ನೀಡಿತ್ತು. ಇದೀಗ ರಾಷ್ಟ್ರೀಯ ಕಾನೂನು ಆಯೋಗ ಮತ್ತೊಂದು ವರದಿಯನ್ನು (ವರದಿ ೨೫೫, ಮಾರ್ಚ್ ೨೦೧೫) ಸಿದ್ಧಪಡಿಸಿ ಸರ್ಕಾರಕ್ಕೆ ಒಪ್ಪಿಸಿದೆ. ಸುಮಾರು ೨೫೦ ಪುಟಗಳ ಈ ಬೃಹತ್ ವರದಿ ಸಾಕಷ್ಟು ವಿವರಗಳನ್ನು ಹೊಂದಿದೆ. ಚುನಾವಣಾ ಪದ್ಧತಿಯಲ್ಲಿ ಆಗಬೇಕಾದ ಎಲ್ಲಾ ಅಂಶಗಳ ಬಗ್ಗೆ ಬೆಳಕು ಚೆಲ್ಲಿದೆ. ಆದರೆ ವರದಿಯ ಬಗ್ಗೆ ಚರ್ಚೆ ಆಗದಿರುವುದು ರಾಜಕೀಯ ಪಕ್ಷಗಳ ಮತ್ತು ಸರ್ಕಾರದ ನಿಲುವು ಏನೆಂಬುದನ್ನು ಸೂಚಿಸುತ್ತದೆ.

ಚುನಾವಣೆಗೆ ರಾಜಕೀಯ ಪಕ್ಷಗಳು ಮಾಡುವ ಖರ್ಚು ವೆಚ್ಚಗಳ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಪ್ರತಿಯೊಂದು ಚುನಾವಣೆ ನಡೆದಾಗಲೂ ಕೋಟ್ಯಂತರ ರೂಪಾಯಿ ಖರ್ಚು ಮಾಡುವ ರಾಜಕೀಯ ಪಕ್ಷಗಳು ಮತ್ತು ಅಭ್ಯರ್ಥಿಗಳಿಗೆ ಆ ಹಣ ಎಲ್ಲಿಂದ ಬರುತ್ತದೆ, ಯಾರು ಅದನ್ನು ನೀಡುತ್ತಾರೆ, ಅದನ್ನು ಹೇಗೆ ಖರ್ಚು ಮಾಡಲಾಗುತ್ತದೆ ಇತ್ಯಾದಿಗಳ ಬಗ್ಗೆ ಯಾವುದೇ ಮಾಹಿತಿ ದೊರೆಯುವುದಿಲ್ಲ. ರಾಜಕೀಯ ಪಕ್ಷಗಳು ಮತ್ತು ಅಭ್ಯರ್ಥಿಗಳು ಮಾಡಬಹುದಾದ ಖರ್ಚು ವೆಚ್ಚಕ್ಕೆ ಕಡಿವಾಣ ಹಾಕುವ ಪ್ರಯತ್ನಗಳೆಲ್ಲಾ ವಿಫಲವಾಗಿವೆ. ಈ ವಿಷಯದ ಬಗ್ಗೆ ಕೆಲವೊಂದು ಸೂಚನೆಗಳನ್ನು ನೀಡಲಾಗಿದೆ. ಈಗಿರುವ ಕಾನೂನಿನ ಪ್ರಕಾರ ಅಭ್ಯರ್ಥಿಗಳು ತಮ್ಮ ನಾಮಪತ್ರವನ್ನು ಸಲ್ಲಿಸುವ ದಿನಾಂಕದಿಂದ ಫಲಿತಾಂಶ ಪ್ರಕಟವಾಗುವ ದಿನದವರೆಗೂ ಮಾಡುವ ಖರ್ಚನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತಿದೆ. ಈ ನಿಯಮಕ್ಕೆ ತಿದ್ದುಪಡಿ ತಂದು, ಚುನಾವಣೆಯ ದಿನಾಂಕವನ್ನು ಪ್ರಕಟಿಸಿದ ದಿನದಿಂದ ಮಾಡುವ ಖರ್ಚನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಆಯೋಗ ಸಲಹೆ ನೀಡಿದೆ. ರೆಪ್ರಸೆಂಟೇಷನ್ ಆಫ್ ಪೀಪಲ್ಸ್ ಅಧಿನಿಯಮದ ಸೆಕ್ಷನ್ ೭೭ಕ್ಕೆ ಸೂಕ್ತ ತಿದ್ದುಪಡಿ ಮಾಡುವಂತೆ ವರದಿಯಲ್ಲಿ ತಿಳಿಸಲಾಗಿದೆ.

ರಾಷ್ಟ್ರೀಯ ಕಾನೂನು ಆಯೋಗ ಬೃಹತ್ ವರದಿಯನ್ನು ನೀಡಿದ್ದರೂ ಕೆಲವೊಂದು ಸಲಹೆಗಳು ಚರ್ಚೆಗೆ ಅವಕಾಶ ಮಾಡಿಕೊಡುವಂತಿವೆ. ಈ ಹಿಂದಿನ ವರದಿಗಳಂತೆ ಈ ವರದಿಯೂ ಧೂಳು ಹಿಡಿಯಬಾರದು. ಸಾರ್ವಜನಿಕರು, ನಾಗರಿಕ ಸಂಘಟನೆಗಳು ಮತ್ತು ರಾಜಕೀಯ ಪಕ್ಷಗಳು ಇದರತ್ತ ಗಮನಹರಿಸುವುದು ಸೂಕ್ತ.

ರಾಜಕೀಯ ಪಕ್ಷಗಳಿಗೆ ಕಂಪನಿಗಳಿಂದ ಬರುವ ದೇಣಿಗೆ ಬಗ್ಗೆ ಸಾಕಷ್ಟು ಗೊಂದಲವಿದೆ. ಎಲ್ಲ ರಾಜಕೀಯ ಪಕ್ಷಗಳೂ ಉದ್ಯಮದಿಂದ ದೇಣಿಗೆ ಪಡೆದರೂ ಅದನ್ನು ಬಹಿರಂಗಪಡಿಸುವುದಿಲ್ಲ. ಇದನ್ನು ಸರಿಪಡಿಸಲು, ಕಂಪನಿಯ ಅಧಿನಿಯಮದ ಸೆಕ್ಷನ್ ೧೮೨[೧]ಕ್ಕೆ ತಿದ್ದುಪಡಿ ತಂದು, ದೇಣಿಗೆಯನ್ನು ವಾರ್ಷಿಕ ಸಭೆಯಲ್ಲಿ ಚರ್ಚಿಸಿ ಅನಂತರ ತೀರ್ಮಾನ ಕೈಗೊಳ್ಳಬೇಕೆಂದು ವರದಿ ಹೇಳುತ್ತದೆ. ಈಗ ಆಡಳಿತ ಮಂಡಳಿ ಇದರ ಬಗ್ಗೆ ತೀರ್ಮಾನ ಕೈಗೊಳ್ಳುತ್ತಿದೆ. ಷೇರುದಾರರಿಗೆ ಅದರ ಬಗ್ಗೆ ಸುಳಿವು ಸಿಗುತ್ತಿಲ್ಲ.

ಈಗಿರುವ ನಿಯಮದ ಪ್ರಕಾರ ಚುನಾವಣೆಗೆ ನಿಲ್ಲುವ ಅಭ್ಯರ್ಥಿಗಳು ತಮ್ಮ ಖರ್ಚು ವೆಚ್ಚಗಳ ಬಗ್ಗೆ ಲೆಕ್ಕ ಇಡಬೇಕೇ ಹೊರತು ಅದನ್ನು ಯಾರಿಗೂ ಬಹಿರಂಗಪಡಿಸುವ ಅಗತ್ಯವಿಲ್ಲ. ಯಾರಿಂದ ಎಷ್ಟು ಹಣ ಪಡೆದರು ಎಂಬುದನ್ನು ಪ್ಯಾನ್ ಕಾರ್ಡ್ ಸಮೇತ ಬಹಿರಂಗಪಡಿಸುವಂತೆ ತಿದ್ದುಪಡಿ ತರಬೇಕೆಂದು ವರದಿಯಲ್ಲಿ ಸೂಚಿಸಲಾಗಿದೆ. ಅಭ್ಯರ್ಥಿಗಳಿಂದ ಸಲ್ಲಿಕೆಯಾಗುವ ಖರ್ಚು ವೆಚ್ಚಗಳ ವಿವರವನ್ನು ಚುನಾವಣಾ ಆಯೋಗ ತನ್ನ ವೆಬ್‌ಸೈಟ್‌ನಲ್ಲಿ ಪ್ರಕಟಿಸಲು ಅನುವಾಗುವಂತೆ ಕಾನೂನು ತಿದ್ದುಪಡಿ ಮಾಡುವುದು ಸೂಕ್ತವೆಂದು ಆಯೋಗ ಅಭಿಪ್ರಾಯಪಟ್ಟಿದೆ. ರಾಜಕೀಯ ಪಕ್ಷಗಳು ತಮ್ಮ ಲೆಕ್ಕಪತ್ರಗಳನ್ನು ಚಾರ್ಟರ್ಡ್ ಅಕೌಂಟೆಂಟ್ ಅವರಿಂದ ಪರಿಶೋಧನೆ ನಡೆಸಿ ಅದನ್ನು ಚುನಾವಣಾ ಆಯೋಗಕ್ಕೆ ಸಲ್ಲಿಸುವಂತೆ ಸೂಚನೆ ನೀಡಬೇಕು ಮತ್ತು ಸಾರ್ವಜನಿಕರು ಈ ವರದಿಗಳ ಪ್ರತಿಯನ್ನು ಪಡೆಯುವ ಅವಕಾಶ ಇರಬೇಕೆಂದು ವರದಿ ಹೇಳುತ್ತದೆ. ಚುನಾವಣೆಯ ವೆಚ್ಚವನ್ನು ಸರ್ಕಾರವೇ ಭರಿಸಬೇಕೇ ಬೇಡವೇ ಎಂಬುದರ ಬಗ್ಗೆ ಸಾಕಷ್ಟು ವಾದವಿವಾದವಿದೆ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಸರ್ಕಾರ ವೆಚ್ಚವನ್ನು ಭರಿಸಬಾರದು ಎಂಬುದು ಆಯೋಗದ ಅಭಿಪ್ರಾಯ. ಅಲ್ಲದೆ, ಈಗಿರುವ ಪದ್ಧತಿಯನ್ನೇ ಮುಂದುವರಿಸಬೇಕೆಂದು ಸೂಚಿಸಿದೆ.

ರಾಜಕೀಯ ಪಕ್ಷಗಳ ಆಂತರಿಕ ವ್ಯವಸ್ಥೆಯ ಬಗ್ಗೆಯೂ ವರದಿ ಬೆಳಕು ಚೆಲ್ಲಿದೆ. ಪಕ್ಷಗಳಲ್ಲಿ ಪ್ರಜಾಪ್ರಭುತ್ವ ಇಲ್ಲದಿರುವುದು, ಜಾತಿ, ಮತ, ಭಾಷೆ ಇತ್ಯಾದಿ ಆಧಾರದ ಮೇಲೆ ಅವಲಂಬಿತವಾಗಿರುವ ಪಕ್ಷಗಳಲ್ಲಿ ಬದಲಾವಣೆ ಆಗಬೇಕೆಂದು ವರದಿ ಹೇಳುತ್ತದೆ. ನಿಯಮ ಉಲ್ಲಂಘನೆ ಮಾಡುವ ರಾಜಕೀಯ ಪಕ್ಷಗಳ ನೋಂದಣಿಯನ್ನು ರದ್ದು ಪಡಿಸುವ ಅಧಿಕಾರವನ್ನು ಚುನಾವಣಾ ಆಯೋಗಕ್ಕೆ ನೀಡಬೇಕೆಂಬ ಮಹತ್ವದ ಸಲಹೆಯನ್ನು ನೀಡಲಾಗಿದೆ. ಅನುಪಾತ ಆಧರಿಸಿ ಅಭ್ಯರ್ಥಿಗಳ ಸೋಲು/ ಗೆಲುವನ್ನು ನಿರ್ಧರಿಸುವ ಪದ್ಧತಿಗೆ ಆಯೋಗ ತನ್ನ ಸಮ್ಮತಿಯನ್ನು ಸೂಚಿಸಿದೆ.

ಚುನಾವಣಾ ಆಯೋಗವನ್ನು ಬಲಪಡಿಸುವ ನಿಟ್ಟಿನಲ್ಲೂ ಕೆಲವೊಂದು ಸಲಹೆಗಳನ್ನು ನೀಡಲಾಗಿದೆ. ಚುನಾವಣಾ ಆಯೋಗದ ಸದಸ್ಯರಿಗೆ ಸಂವಿಧಾನಾತ್ಮಕ ವಾದ ಸ್ಥಾನಮಾನ ನೀಡಬೇಕೆಂದೂ ಸೂಚಿಸಲಾಗಿದೆ. ಚುನಾವಣಾ ಆಯುಕ್ತರ ನೇಮಕಾತಿ, ಆಯೋಗದ ಕಚೇರಿ ಇತ್ಯಾದಿಗಳ ಬಗ್ಗೆಯೂ ಕೆಲವೊಂದು ಸೂಚನೆ ಗಳನ್ನು ನೀಡಿದೆ. ಲೋಕಸಭೆ ಮತ್ತು ರಾಜ್ಯಸಭೆಗೆ ಪ್ರತ್ಯೇಕವಾಗಿ ಇರುವಂತೆ ಚುನಾವಣಾ ಆಯೋಗಕ್ಕೂ ಪ್ರತ್ಯೇಕ ಸಚಿವಾಲಯ (ಸೆಕ್ರೆಟೇರಿಯಟ್) ಇರಬೇಕೆಂದು ವರದಿಯಲ್ಲಿ ಸೂಚಿಸಲಾಗಿದೆ. ರಾಜಕೀಯ ಪಕ್ಷಗಳು ಮತ್ತು ಅಭ್ಯರ್ಥಿಗಳು ನೀಡುವ ಜಾಹೀರಾತಿನ (ಪೇಡ್ ನ್ಯೂಸ್) ಬಗ್ಗೆಯೂ ಕೆಲವೊಂದು ಸೂಚನೆಗಳನ್ನು ನೀಡಲಾಗಿದೆ. ವಾರ್ತೆಯ ಹೆಸರಿನಲ್ಲಿ ಪ್ರಕಟವಾಗುವ ಜಾಹೀರಾತನ್ನು ನಿಯಂತ್ರಿಸಲು ಚುನಾವಣಾ ಕಾಯ್ದೆಯಲ್ಲಿ ಮಾರ್ಪಾಟು ಅಗತ್ಯವೆಂದೂ ಹೇಳಿದೆ. ಯಾವುದು ಜಾಹೀರಾತು, ಯಾವುದು ವಾರ್ತೆ ಎಂಬುದನ್ನು ಓದುಗರು ಗುರುತಿಸುವಂತೆ ಇರಬೇಕೆಂದು ವರದಿ ಹೇಳಿದೆ.

ಚುನಾವಣೆಯಲ್ಲಿ ಸಾರ್ವಜನಿಕರು ಸಾಕಷ್ಟು ಸಂಖ್ಯೆಯಲ್ಲಿ ಭಾಗವಹಿಸುವುದಿಲ್ಲ, ಮತ ಚಲಾಯಿಸುವುದಿಲ್ಲ ಎಂಬ ಮಾತುಗಳ ಹಿನ್ನೆಲೆಯಲ್ಲಿ ಮತ ಚಲಾಯಿಸುವುದನ್ನು ಕಡ್ಡಾಯಗೊಳಿಸಬೇಕೆಂಬ ಒತ್ತಾಯವಿದೆ. ಈಗಾಗಲೇ ಗುಜರಾತ್ ಮತ್ತು ಕರ್ನಾಟಕ ರಾಜ್ಯ ಸರ್ಕಾರಗಳು ಸ್ಥಳೀಯ ಚುನಾವಣೆಗಳಿಗೆ ಇದನ್ನು ಜಾರಿಗೊಳಿಸಿವೆ. ಆದರೆ ರಾಷ್ಟ್ರೀಯ ಕಾನೂನು ಆಯೋಗ ಇದಕ್ಕೆ ತನ್ನ ಸಮ್ಮತಿ ಸೂಚಿಸಿಲ್ಲ. ಭಾರತದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ ಚಲಾಯಿಸುವುದನ್ನು ಕಡ್ಡಾಯಗೊಳಿಸುವುದು ಸೂಕ್ತವಲ್ಲ ಎಂದು ಖಡಾಖಂಡಿತವಾಗಿ ಹೇಳಿದೆ. ಇದೇ ರೀತಿ ನೋಟಾ (ಯಾರನ್ನೂ ಚುನಾಯಿಸ ದಿರುವುದು) ಬಗ್ಗೆಯೂ ಆಯೋಗ ವಿರೋಧ ವ್ಯಕ್ತಪಡಿಸಿದೆ. ಚುನಾವಣೆಗೆ ಸಂಬಂಧಪಟ್ಟ ದೂರು ಗಳನ್ನು ಪರಿಹರಿಸುವ ಬಗ್ಗೆಯೂ ವರದಿಯಲ್ಲಿ ಕೆಲವೊಂದು ಮಾರ್ಪಾಟುಗಳನ್ನು ಸೂಚಿಸಿದೆ. ಜಯ ಗಳಿಸಿದ ಅಭ್ಯರ್ಥಿಯನ್ನು ಹಿಂದಕ್ಕೆ ಕರೆಸಿಕೊಳ್ಳುವ (ರೀಕಾಲ್) ಪದ್ಧತಿಯನ್ನು ಸಹ ಆಯೋಗ ವಿರೋಧಿಸಿದೆ. ಒಬ್ಬ ವ್ಯಕ್ತಿ ಒಂದು ಕ್ಷೇತ್ರದಿಂದ ಮಾತ್ರ ಚುನಾವಣೆಗೆ ನಿಲ್ಲಬೇಕೆಂಬ ನಿಯಮ ಜಾರಿಗೊಳಿಸ ಬೇಕೆಂದು ವರದಿ ಹೇಳುತ್ತದೆ.

ರಾಷ್ಟ್ರೀಯ ಕಾನೂನು ಆಯೋಗ ಬೃಹತ್ ವರದಿಯನ್ನು ನೀಡಿದ್ದರೂ ಕೆಲವೊಂದು ಸಲಹೆಗಳು ಚರ್ಚೆಗೆ ಅವಕಾಶ ಮಾಡಿಕೊಡುವಂತಿವೆ. ಈ ಹಿಂದಿನ ವರದಿಗಳಂತೆ ಈ ವರದಿಯೂ ಧೂಳು ಹಿಡಿಯಬಾರದು. ಸಾರ್ವಜನಿಕರು, ನಾಗರಿಕ ಸಂಘಟನೆಗಳು ಮತ್ತು ರಾಜಕೀಯ ಪಕ್ಷಗಳು ಇದರತ್ತ ಗಮನಹರಿಸುವುದು ಸೂಕ್ತ.

**ವೈ. ಜಿ. ಮುರಳೀಧರನ್**
ನಂ. ೯೦೦, 'ಸಂಧ್ಯಾರಾಗ', ೧ನೇ ಹಂತ, ೧ನೇ ಫೇಸ್
ಚಂದ್ರಾ ಲೇಔಟ್, ೧೫ನೇ ಅಡ್ಡರಸ್ತೆ, ನಾಗರಭಾವಿ ಅಂಚೆ
ಬೆಂಗಳೂರು – ೫೬೦ ೦೭೨

## ಒಂಟಿ ಹೂವಿನ ಆಲಾಪ

ಕಾವ್ಯಲೋಕ



ಬಿಂಕವ ತೋರಿ ಫಳ ಫಳಿಸೋ ನಕ್ಷತ್ರಕ್ಕೇ ಇಲ್ಲಿ ಕಿಮ್ಮತ್ತು
ಕುಂಡದಲಿ ಅರಳಿದ ಹೂಗಳಿಗೇ ಇಲ್ಲಿ ಬೆಲೆ
ಮಿಣುಕುವ ಚಿಮಣಿಗೆ, ಘಮ ಘಮಿಸುವ ಹೂವಿಗೆ
ನಿಮ್ಮ ಹಂಗು ಬೇಕಿಲ್ಲ ಬಿಡಿ

ನಯ, ನಾಜೂಕು ಮಾತುಗಳೇ ಸಂಗೀತ ನಿಮಗೆ
ಅಲಾದಿ ನಗುವ ತುಟಿಗಳೇ ಬಲು ಇಷ್ಟ ನಿಮಗೆ
ಲಾಲಿ ಹಾಡಿಗೆ ನಿಮ್ಮ ಬಹುಮಾನ, ಮೆಚ್ಚುಗೆ ಬೇಡ ಬಿಡಿ

ಎದೆಯ ಭಾವಗಳ ಬಸಿದು ಪದವ ಹಾಡಿದೆ
ಜನಪದವೇ ನುಡಿಯಾಗಿಸಿ ಕತೆಯ ಹೇಳಿದೆ
ನೀವು ಕೇಳಿಯೂ ಕೇಳದಂತಿದ್ದಿರಿ
ನಿಮ್ಮ ಮಜುಕುರ ಗೊತ್ತು ;
ದೇವರಾಣೆ, ನೀವು ಕೇಳಲೇಬೇಕೆಂದು ವಸೂಲಿ ಹಚ್ಚಲಾರೆ

ನಾನೊಂದು ಒಂಟಿ ಹೂ
ಘಮ ಘಮಾಡಿಸುತ ನಿಂತಿರುವೆ
ಮಕರಂದ ಹೀರುವ ದುಂಬಿ ಬಂದೇ ಬರುವುದು

**ಟಿ. ಎಸ್. ಗೊರವರ,** ಅಂಚೆ : ರಾಜೂರ, ರೋಣ ತಾಲ್ಲೂಕು, ಗದಗ ಜಿಲ್ಲೆ



# ಜೋಳದ ರೊಟ್ಟಿ

ಗುಂಡುರಾವ್ ದೇಸಾಯಿ

ಮಕ್ಕಳು ಬೀದಿಯಲ್ಲಿ ಆಟ ಆಡುತ್ತಿರುವಾಗ ಹುಡುಗನೊಬ್ಬಗೆ ತತ್ತಿಯಾಕಾರದ ಒಂದು ವಸ್ತು ಸಿಕ್ಕಿತು. ಹುಡುಗ ಕುತೂಹಲದಿಂದ ಅದನ್ನು ಒಯ್ದು ಅಪ್ಪನಿಗೆ ತೋರಿಸಿದ. ಅಪ್ಪನಿಗೂ ಧಾನ್ಯದ ಆಕಾರದಂತಿದ್ದ ಆ ವಸ್ತು ಗೊತ್ತಾಗಲಿಲ್ಲ, ರಾಜನೆಡೆ ಒಯ್ದ. ರಾಜನಿಗೂ ಕುತೂಹಲ ಹೆಚ್ಚಿ ಆಸ್ಥಾನದ ವಿದ್ವಾಂಸರಿಗೆಲ್ಲ ಪರಿಶೀಲಿಸಲು ತಿಳಿಸಿದ. ಅದರಲ್ಲಿ ಒಬ್ಬ ವಿದ್ವಾಂಸ, “ಹಿರಿಯ ವೃದ್ಧರಿಗೆ ತೋರಿಸಿದ್ರೆ ಗೊತ್ತಾಗುತ್ತೆ” ಎಂದು ಸಲಹೆ ನೀಡಿದ. ಅದರಂತೆ ರಾಜ್ಯವನ್ನೆಲ್ಲ ಸುತ್ತಾಡಿ ಹಣ್ಣು ಹಣ್ಣು ಮುದುಕನಾಗಿದ್ದೊಬ್ಬನನ್ನು ನಾಲ್ಕು ಜನ ಎತ್ತಿಕೊಂಡು ಬಂದ್ರು. ‘ಓಹೋ ! ಇದಾ, ನಮ್ಮ ಕಾಲದಲ್ಲಿ ಇದ್ದಿಲ್ಲ. ನಮ್ಮಪ್ಪ ಇದರ ಬಗ್ಗೆ ಹೇಳತಿದ್ದ, ಅವರನ್ನು ಕರೆಸಿದರೆ ಈ ಧಾನ್ಯದ ಬಗ್ಗೆ ಗೊತ್ತಾಗುತ್ತೆ’ ಎಂದ. ‘ನಿಮ್ಮಪ್ಪನಿಗೆ ತೋರಿಸಬೇಕೆ ? ಇನ್ನೂ ಇದ್ದಾರೆಯೆ ?’ ಎಂದು ಆಶ್ಚರ್ಯದಿಂದ ರಾಜ ಅವರ ಅಪ್ಪನ ಬರುವಿಕೆಗೆ ಇದಿರು ನೋಡತೊಡಗಿದ. ಅವರಪ್ಪ ಬಡಿಗೆ ಹಿಡಿದುಕೊಂಡು ಬಂದಾಗ ಇಡೀ ಆಸ್ಥಾನವೇ ಅಚ್ಚರಿಗೊಂಡಿತು. ಅವನನ್ನು ಕೇಳಲಾಗಿ “ಇಲ್ಲ ನಮ್ಮಪ್ಪನವರ ಕಾಲಕ್ಕ ಈ ರೀತಿಯ ಧಾನ್ಯ ಬೆಳಿತಿದ್ದರಂತೆ, ಅವರನ್ನ ಕರೆಸಿದರೆ ಖಂಡಿತ ಗೊತ್ತಾಗಬಹುದು !” ಎಂದ. ರಾಜನಿಗೆ, ಅಲ್ಲಿದ್ದವರಿಗೆ ಪರಮಾಶ್ಚರ್ಯವಾಯಿತು. ಅಂತೆಯೇ ಅವರಪ್ಪನನ್ನು ಆಸ್ಥಾನಕ್ಕೆ ಕರೆಸಲಾಯಿತು. ಅವರ ಅಪ್ಪ ಆಸ್ಥಾನಕ್ಕೆ ಯಾವ ಆಧಾರವಿಲ್ಲದೆ ಬಂದ, ಮೇಲಾಗಿ ಇನ್ನು ಗಟ್ಟಿಮುಟ್ಟಾದ ಆಸಾಮಿಯಾಗಿದ್ದ. ಅವನನ್ನು ನೋಡಿ ರಾಜರಾದಿ ಎಲ್ಲರೂ ದಂಗಾದರು. ಬಂದ ವ್ಯಕ್ತಿ ಧಾನ್ಯ ಪರೀಕ್ಷಿಸಿ ಖುಷಿಯಿಂದ ‘ನಮ್ಮ ತಾತನವರ ಕಾಲಕ್ಕೆ ಬೆಳೆಯುತ್ತಿದ್ದ ಜೋಳದ ಧಾನ್ಯ ಇದು. ಆಗ ಈ ಗಾತ್ರದಲ್ಲಿದ್ದವು, ಬದಲಾದ ಕೃಷಿ ಪದ್ಧತಿಯಿಂದ ಕಾಲಾನುಕ್ರಮದಲ್ಲಿ ಸಣ್ಣ ಆಗತಾ ಬಂದ್ವು. ನಾವು ಬಾಲ್ಯದಲ್ಲಿ ಅಂತಹ ಆಹಾರ ಸೇವಿಸುತ್ತಿದ್ದರಿಂದಲೇ ಹೀಗೆ ಗಟ್ಟಿಮುಟ್ಟಾಗಿ ಇದ್ದೇನೆ.

ಜೋಳದ ಗಟ್ಟಿತನದ ಇತಿಹಾಸವನ್ನು ತಿಳಿಸುವ ಈ ಕಥೆ ಸುಳ್ಳಂತ ನನಗನಿಸೋದೆ ಇಲ್ಲ. ನಾವು ಚಿಕ್ಕೋರಿದ್ದಾಗ ಜೋಳವನ್ನು ಹಗೇವುನಲ್ಲಿ ಹಾಕಿದರೆ ಅವುಗಳ ಗಾತ್ರದಲ್ಲಿ ಹೆಚ್ಚಳ ಆಗುತ್ತೆ ಅಂತಿದ್ರು. ಹಗೇವು ಅಂದ್ರೆ ಹೊಲದಲ್ಲಿ ಬೆಳೆದ ಹೆಚ್ಚುವರಿ ಧಾನ್ಯಗಳನ್ನು ಭೂಮಿಯ ಆಳದಲ್ಲಿ ತೋಡಿ ಸಂಗ್ರಹಿಸುವ ವಿಧಾನ, ಆಧುನಿಕ ಗೊಡೌನಗಳಂತೆ. ಇಲಿ ಹೆಗ್ಗಣ, ಕ್ರಿಮಿಕೀಟಗಳಿಂದ ಹಗೇವು ರಕ್ಷಣೆ ಒದಗಿಸುತ್ತಿತ್ತು. ಜೊತೆಗೆ ಹಗೇವಿನಲ್ಲಿ ಜೋಳ ಅಥವಾ ಯಾವುದೇ ಧಾನ್ಯ ಹಾಕಲಿ, ಪುನಃ ತೆಗೆಯುವಾಗ ಅದರ ಪ್ರಮಾಣ ಹೆಚ್ಚಿರುತ್ತಿತ್ತು. ಕಾರಣ ಒಳಗಿನ ವಾತಾವರಣಕ್ಕೆ ಧಾನ್ಯದ ಗಾತ್ರದಲ್ಲಿ ಹೆಚ್ಚಳವಾಗುತ್ತಿತ್ತು ಎನ್ನುವುದು ವೈಜ್ಞಾನಿಕ ಸಂಗತಿ.

“ಅಕ್ಕಿಯನು ತಿನ್ನುವವನು ಹಕ್ಕಿಯಂತಾಗುವವನು, ಜೋಳವನು ತಿನ್ನುವವನು ತೋಳದಂತಾಗುವನು, ನವಣೆಯ ತಿನ್ನುವವನು ಹವಣಾಗಿ ಇರುತಿಹನು, ರಾಗಿಯನು ತಿನ್ನುವವನು ನಿರೋಗಿಯೆಂದೆನಿಸುವನು” ಎಂದಿರುವ ಸರ್ವಜ್ಞ ಕವಿ ಜೋಳದ ಬಗ್ಗೆ ತೋರಿರುವ ಪಕ್ಷಪಾತ ಬಗ್ಗೆ ನಿಜಕ್ಕೂ ಖೇದವೆನಿಸುತ್ತದೆ. ‘ರಾಗಿಯನು ಉಂಬುವವನು ನಿರೋಗಿ ಎಂದೆನಿಸುವನು, ರಾಗಿಯು ಭೋಗಿಗಳಿಗಲ್ಲ ಬಡವರಿಗಾಗಿ ಬೆಳೆದಿಹುದು ಸರ್ವಜ್ಞ’ ಅಂತಿದೆ. ಅಂದರೆ ಜೋಳ ಶ್ರೀಮಂತರ ಆಹಾರವಾಗಿತ್ತೆ ? ಹಾಗೆ ನೋಡಿದರೆ ಅದು ಉತ್ತರ ಕರ್ನಾಟಕ ಭಾಗದ ಪಕ್ಕಾ ಬಡವರ ಆಹಾರ. ಅಂದರೆ ನಮ್ಮ ಉತ್ತರ ಕರ್ನಾಟಕದ ಭಾಗ ಒಂದು ಕಾಲಕ್ಕೆ ಫಲವತ್ತತೆಯಿಂದ ಕೂಡಿತ್ತು, ಜೋಳ ಇಲ್ಲಿಯ ಶ್ರೇಷ್ಠ ಆಹಾರವಾಗಿತ್ತು .

ಸೋರ್ಗಮ್ ವರ್ಗದ ಹುಲ್ಲಿನ ಜಾತಿಯ ಈ ಸಸ್ಯ ಉತ್ತರ ಕರ್ನಾಟಕದ ಜನರ ಜೀವಾಳ. ಇಡೀ ದೇಶದಲ್ಲಿ ಜೋಳದ ಉತ್ಪಾದನೆಗೆ ನಮ್ಮ ರಾಜ್ಯ ಮಹಾರಾಷ್ಟ್ರದ ನಂತರದ ಎರಡನೇ ಸ್ಥಾನದಲ್ಲಿದೆ. ಉಷ್ಣವಲಯದ ಭಾಗಗಳಲ್ಲಿ ಬೆಳೆಯುವ ಮೂರು ನಾಲ್ಕು ತಿಂಗಳಲ್ಲಿ ಬರುವ ಈ ಬೆಳೆಗೆ ಹೆಂಡಿಗೊಬ್ಬರ ಬಿಟ್ಟರೆ ಯಾವುದೇ ರಾಸಾಯನಿಕ ಗೊಬ್ಬರದ ಉಪಚಾರ ಬೇಕಾಗಿಲ್ಲ. ಖರ್ಚಿಲ್ಲದೆ ಭೂಮಿ ಒಮ್ಮೆ ತಂಪಾದರೆ ಹೇರಗಟ್ಟಲೆ ಬೆಳೆಯಬಹುದಾದ ಬೆಳೆ. ಜೋಳವನ್ನು ತೆನೆಯಿಂದ ಬೇರ್ಪಡಿಸಿದಾಗ ಸಿಗುವ ಈ ಜೋಳವನ್ನು ಹಿಟ್ಟಾಗಿ ಪರಿವರ್ತಿಸಿ ಅದರಿಂದ ರೊಟ್ಟಿಯನ್ನು ತಯಾರಿಸುತ್ತಾರೆ. ಒಂದು ಜೋಳದ ರೊಟ್ಟಿಯಲ್ಲಿ ೮೨% ಶರ್ಕರ, ಪಿಷ್ಟ, ೪% ಮೇದಸ್ಸು, ೧೪% ಪ್ರೋಟಿನ್ ಇದ್ದು ೦% ಕೊಲೆಸ್ಟ್ರಾಲ್ ಇದೆ. ಸಕ್ಕರೆ ಕಾಯಿಲೆ, ರಕ್ತದ ಒತ್ತಡ, ಕೊಲೆಸ್ಟ್ರಾಲ್ ಹೆಚ್ಚಿರುವವರಿಗೆ, ಬೊಜ್ಜು ದೇಹಿಗಳಿಗೆ, ಸ್ಲಿಮ್ ಆಗಿ ದೇಹ ಮೆಂಟೇನ್ ಮಾಡಬೇಕೆನ್ನುವವರಿಗೆ ವೈದ್ಯರು ಸಜೆಸ್ಟ್ ಮಾಡುವ ಆಹಾರ ಇದಾಗಿದೆ.

ರೊಟ್ಟಿ ತಯಾರಿಸುವುದು ಎಲ್ಲರಿಗೂ ಸಿದ್ಧಿಸುವಂತದಲ್ಲ. ಬಿಸಿನೀರಿನಲ್ಲಿ ಹಿಟ್ಟನ್ನು ಕಲೆಸಿ ಕಣಕವಾಗಿಸಿ ಹದಮಾಡಿಕೊಂಡು ತಟ್ಟುವ ಕೈಚಳಕದ ಮೇಲೆ ಇದೆ. ತಟ್ಟುತ್ತಾ ಹೋದಂತೆ ಹಿಗ್ಗುತ್ತಾ ತೆಳುವಾಗುತ್ತ ಹೋಗುತ್ತದೆ. ದುಂಡಾಗಿ ಪರಿವರ್ತಿಸುವಲ್ಲಿ ತಯಾರಿಸುವ ಹೆಣ್ಣಿನ ಜಾಣ್ಮೆ ಇದೆ. ಅದನ್ನು ನಿಧಾನವಾಗಿ ಹಂಚಿನ ಮೇಲೆ ಹಾಕಿ ಹಸಿ ಬಟ್ಟೆಯಿಂದಲೋ ಹಾಗೆ ಸ್ವಲ್ಪ ನೀರು ಚಿಮುಕಿಸಿ ಒರೆಸಿ ಅದರ ಶಾಖದಲ್ಲಿ ಬೆಂದು ತಿನ್ನಲು ಸಿದ್ಧವಾಗುತ್ತದೆ. ಬಿಸಿಯಾದ ರೊಟ್ಟಿ ತಿನ್ನುವುದೆ ಸಂಭ್ರಮ. ತುಪ್ಪ, ಹುಂಚೆಟ್ನಿಪುಡಿ ಇದ್ದರಂತೂ ಮುಗಿದುಹೋಯಿತು. ರೊಟ್ಟಿ ಮಾಡುವವರ ಕೈ ಸೇದಿಹೋಗಬೇಕು. ಇದು ಮುದುಕರಿಗೆ ಹುಡುಗರಿಗೆ ಇಷ್ಟವಾಗುವಂಥದ್ದು ಬಲುಬೇಗ ಜೀರ್ಣವಾಗುವಂತಹದ್ದು. ಕಟಕ್, ಖಡಕ್ ಎಂದು ಕರೆಯುವ ಕಟಿ ರೊಟ್ಟಿ ಮಾಡಬೇಕಾದರೆ ಬೆಂದರೊಟ್ಟಿಯನ್ನು ಇನ್ನೂ ಬೇಯಿಸಲಾಗುತ್ತದೆ ಅಥವಾ ಶಾಖ ತಗಲುವ ಹತ್ತಿರದಲ್ಲಿ ಇಡಲಾಗುತ್ತದೆ. ಅದರ ತೆಳು ಶಾಖದಿಂದ ಗಟ್ಟಿತನ ಪಡೆಯುತ್ತವೆ. ಇವನ್ನು ತಿಂಗಳು ಬೇಕಾದರು ಉಪಯೋಗಿಸಬಹುದು. ಹಪ್ಪಳದಂತೆ ತೆಳುವಾಗಿರುವ ರೊಟ್ಟಿಯ ರುಚಿ ಬಲ್ಲವನೆ ಬಲ್ಲ. ಈ ರೊಟ್ಟಿಗೆ ಪಕ್ಕ ವಾದ್ಯ ಎಂದರೆ ಎಣ್ಣೆಗಾಯಿ (ಬದನೆಕಾಯಿ ಪಲ್ಯ), ಪುಂಡಿ ಪಲ್ಯ ಕಾಳು, ಗಟ್ಟಿ ಮೊಸರು, ಪುಡಿ ಮೊದಲಾದವು. ಇವುಗಳ ಕಾಂಬಿನೇಷನ್‌ನಲ್ಲಿ ತಿನ್ನುವ ರುಚಿಯೇ ಬೇರೆ. ಇನ್ನು ಚಿಕ್ಕಮಕ್ಕಳಿಗೆ ಬಿಸಿರೊಟ್ಟಿಗೆ ತುಪ್ಪ, ಹುಣಸೆ ಚಟ್ನಿ ಸವರಿ ಉಂಡಿ ಮಾಡಿಕೊಟ್ಟರೆ ಆಡುತ್ತ ತಿನ್ನುತ್ತಾ ಬಂದು ಅಮ್ಮ ಇನ್ನೊಂದು ಉಂಡಿ ಅಂತ ಬಾರದೆ ಇರವು. ಹಳ್ಳಿಗಳಲ್ಲಿ ರೊಟ್ಟಿ ಇಲ್ಲದೆ ಯಾವ ಮನೆಗಳು ದಿನವನ್ನು ಪ್ರಾರಂಭಿಸುವುದಿಲ್ಲ. ನಸುನಸುಕಿನಲ್ಲೆ ಟಪ-ಟಪ ಟಪಟಪಟಪ ಹೊಡೆಯುವ ಶಬ್ದ ಕೋಳಿಯ ಕೂಗಿನ ಜೊತೆ ಸ್ವರ ಮಾಧುರ್ಯ ಉಂಟುಮಾಡುತ್ತದೆ. ಒಕ್ಕಲಿಗ ಹೆಣ್ಣುಮಕ್ಕಳು ಹಿಂದಕ್ಕೆಲ್ಲ ನಸುಕಿನಲ್ಲಿ ಎದ್ದು ಜೋಳವ ಕುಟ್ಟಿ, ಬೀಸಿ ಜರಡಿ ಹಿಡಿದು ರೊಟ್ಟಿಯನ್ನು ಬಡಿಯುತ್ತಿದ್ದರು. ಈಗ ಬೀಸುವುದು ಕುಟ್ಟುವುದು ಹೋಗಿದ್ದರು ಬಡಿಯುವುದು ಹೋಗಿಲ್ಲ. ಬಡಿದ ನಂತರ ಮನೆಯಲ್ಲಿರುವ ಪಲ್ಯ ಚಟ್ನಿ ಬುತ್ತಿ ಕಟ್ಟಿಕೊಂಡು ತತ್ರಾಣಿಯಲ್ಲಿ ನೀರು ತುಂಬಿಕೊಂಡು ಹೊಲ ತೋಟಗಳಿಗೆ ಹೋಗುವುದು ನಿಂತಿಲ್ಲ.

ಎಲ್ಲಾ ಆಹಾರ ಪ್ರಿಯರನ್ನು ಸೆಳೆಯುವ, ಸೈಡ್ ಎಫೆಕ್ಟ್ ಇಲ್ಲದ ಏಕೈಕ ಆಹಾರ ಎಂದರೆ ರೊಟ್ಟಿ ಅಂತ ಅನಕೊಂಡಿನಿ.ಯಾವತ್ತಿಗೂ ಆಹಾರವನ್ನು ಹಲ್ಲಿನಲ್ಲಿ ಅಗೆದು ಅಗೆದು ತಿಂದ್ರನೆ ಖುಷಿ. ಆದ್ರೆ ಮುದ್ದೇನ ಹಲ್ಲಿನಿಂದ ಅಗೆಯೋಕೆ ಸಾಧ್ಯ ಏನ್ರಿ? ನಾಲಿಗೆ ಸವಿಯದೆ ಗುಳಿಗಿ ಹಾಂಗ ನುಂಗೋದಂದ್ರೇನ್ರಿ? ನನ್ನ ಅನೇಕ ಸಹೋದ್ಯೋಗಿಗಳು ಮುದ್ದೆ ತಿನ್ನೋರಿದ್ದಾರೆ. ಅವರೊಂದಿಗೆ ಇದೇ ವಿಷಯದ ಬಗ್ಗೆ ಜಗಳ ನಡೀತಾನೆ ಇರುತ್ತೆ.

ನಮ್ಮ ಮಕ್ಕಳೊಡನೆ ಪ್ರವಾಸಕ್ಕೆಂದು ಕೊಡಗಿಗೆ ಹೋದಾಗಲ್ಲಿದ್ದ ಹಳೆಯ ಸ್ನೇಹಿತ ನಮ್ಮ ಗಾಡಿಯಲ್ಲಿದ್ದ ರೊಟ್ಟಿಯ ದೊಡ್ಡ ರಟ್ಟಿನ ಬಾಕ್ಸ್ ನೋಡಿ 'ಹ್ಯಾಂಗಾದ್ರೂ ನೀವು ತಿಂತಾ ಇರತಿರಾ, ದಯವಿಟ್ಟು ಕೊಟ್ಟ ಬಿಡ್ರೀ ರೊಟ್ಟಿನ' ಎಂದು ಕೇಳಿದ್ದಲ್ಲದೆ ಕೊಡುವ ಮೊದಲೆ ನಾವು ತಂದಿದ್ದ ರೊಟ್ಟಿಯನ್ನೆಲ್ಲ ಪ್ರೀತಿಯಿಂದ ಕಸಿದುಕೊಂಡು, ಉಪಚರಿಸಿದ. ವಿಜಯಪುರ ಕಡೆ ಹೋದ್ರೆ ಬಾದಾಮಿ, ಬನಶಂಕರಿ ಮಹಾಕೂಟದಲ್ಲೆಲ್ಲ ಕಟಗರೊಟ್ಟಿ ಸುಗ್ಗಿಯೇ. ಆ ಹೆಣ್ಣುಮಕ್ಕಳು ಕಡಿಮೆ ರೇಟಿನಲ್ಲಿ ಕೊಡುವ ಕಟಗರೊಟ್ಟಿ, ಕಾಳು, ಗಡಿಗಿ ಮೊಸರು ಅದರ ಟೇಸ್ಟೇ ಟೇಸ್ಟು. ಮೊದಲೆ ಪ್ರಸ್ತಾಪಿಸಿದ ಹಾಗೆ ರೊಟ್ಟಿ ಸೆಂಟ್ ಪರ್ಸೆಂಟ್ ರಾಗಿ ಹಾಂಗ ಬಡವರ ಆಹಾರನೆ. ಅತಿ ಕಡಿಮೆ ಬೆಲೆಗೆ ಸಿಗುವ ಧಾನ್ಯ. 'ರೊಟ್ಟಿ ಜಾರಿ ತುಪ್ಪಕ್ಕ ಬಿತ್ತು' ಅನ್ನೊ ಗಾದೆ ಬಡವರ ಆಹಾರ ಎನ್ನುವುದಕ್ಕೆ ಪುಷ್ಠಿ ನೀಡುತ್ತದೆ. ನಾವು ಚಿಕ್ಕೋರಿರೊ ಕಾಲಕ್ಕೆ ಶಾಲೆಯಲ್ಲಿ ಬುತ್ತಿಗೆ ರೊಟ್ಟಿ ಒಯ್ದರೆ ಸ್ನೇಹಿತರು ಊಟ ಮಾಡಲು ಹಿಂದೇಟು ಹಾಕುತ್ತಿದ್ದರು. ಮನೆಯಲ್ಲಿ ಬಂದ ಬಂಧುಗಳು ಅಕ್ಕಿಯನ್ನೆ ಬೇಡುತ್ತಿದ್ದರು. ಕೆಲ ದಶಕಗಳ ಹಿಂದೆ ಉಳ್ಳವರು ಅರ್ಥಾತ್ ಶ್ರೀಮಂತರು, ಅನುಕೂಲಸ್ಥರು ನಾವು ಅನ್ನಾನೆ ಊಟ ಮಾಡೋದು ಅಂತ ಬೀಗುತ್ತಿದ್ದರು. ರೊಟ್ಟಿ ಬಡವರ ಮನೆಯಲ್ಲಿ ಮಾಡುವ ಹೋಳಿಗೆಯಂತಾಗಿತ್ತು. ಯಾವಾಗ ಶುಗರು ಬಿ.ಪಿ. ಅನ್ನದಿಂದ ಸ್ಟಾರ್ಟ ಆತೋ ರೊಟ್ಟಿಯ ಪಟ ಏರತು. ಎಲ್ಲರ ಮನೆಯ ಆಹಾರ ವಸ್ತು ಆಗಾಕ ಸ್ಟಾರ್ಟ ಆಯ್ತು. ಮದುವೆ, ಆರತಕ್ಷತೆ, ಡಿನ್ನರಗಳಲ್ಲಿ ಆಕರ್ಷಣೆಯಾಯಿತು. ಜೊತೆಗೆ ಮಾರುಕಟ್ಟೆಯ ವಸ್ತು ಆಯ್ತು. ಇವತ್ತ ನಮ್ಮೂರಿಂದ ದಿನಾ ಬೆಂಗಳೂರಿಗೆ ಸಾವಿರಾರು ರೊಟ್ಟಿಗಳು ಎಕ್ಸಪೋರ್ಟ ಆಗುತ್ತಿವೆ. ಅನೇಕ ಬಡವರಿಗೆ ರೊಟ್ಟಿ ಮಾಡಿಕೊಡುವುದೆ ಕಾಯಕ ಆಗುತ್ತಿದೆ. ಇತ್ತೀಚಿಗೆ ರೊಟ್ಟಿಗಳನ್ನು ಸಿದ್ಧಪಡಿಸುವ ಯಂತ್ರಗಳು ಬಂದಿರುವುದು ರೊಟ್ಟಿಯ ಬೇಡಿಕೆಯ ಪ್ರಮಾಣಕ್ಕೆ ಸಾಕ್ಷಿ. ಅದು ಒಂದು ಉದ್ಯಮವಾಗಿ ಬೆಳೆಯುತ್ತಿರುವುದು, ಎಲ್ಲೆಲ್ಲೂ ರೊಟ್ಟಿ ಕೇಂದ್ರಗಳು ತಲೆ ಎತ್ತುತ್ತಿರುವುದು ಸಂತಸದ ವಿಷಯ. ಇನ್ನು ಜೋಳದಿಂದ ರೊಟ್ಟಿಯಲ್ಲದೆ ಸಂಕಟಿ, ಹುಳಿ ಒಯ್ದಿಟ್ಟು ನುಚ್ಚಿನನ್ನ ಮಾಡ್ತಾರೆ. ಅದಕ್ಕ ಬೊಳ್ಳೊಳ್ಳಿ ಒಗ್ಗರಣಿಕೊಟ್ಟ ಸಾಂಬರ ಇದ್ರಂತೋ 'ಸೊರ್ ಸೊರ್' ಅಂತ ಡಬರಿ ಖಾಲಿ ಆಗತನ ಹೀರತಿರಿ. ಅದರ ಕಾಂಬಿನೇಷನ್ ಅಷ್ಟು ಟೇಸ್ಟ ಆಗಿರುತ್ತದೆ.

ಮಠ-ಮಂದಿರಗಳೇ ಇರಲಿ ಅಲ್ಲಿ ದಾಸೋಹಕ್ಕೆ ರೊಟ್ಟಿಯ ಅಖಾಡಗಳೆ ಇರುತ್ತವೆ. ಕೊಪ್ಪಳದ ಗವಿಮಠದ ಜಾತ್ರಾ ದಾಸೋಹಕ್ಕೆ ಲಕ್ಷಗಟ್ಟಲೆ ರೊಟ್ಟಿಗಳನ್ನು ದಾನವಾಗಿ ನೀಡುತ್ತಿರುವುದನ್ನು ಪತ್ರಿಕೆಯಲ್ಲಿ ಗಮನಿಸಿರಬಹುದು. ಕಲಬುರಗಿಯ ದಾಸೋಹಿ ಶರಣಬಸಪ್ಪನ ಜಾತ್ರೆಯಲ್ಲಿ ಇದೇ ಮುಖ್ಯ ಪ್ರಸಾದ. ಉತ್ತರ ಕರ್ನಾಟಕದ ಕಡೆ ರೊಟ್ಟಿ ಹಬ್ಬ ಅಂತಲೇ ವಿಶಿಷ್ಟವಾದ ಉತ್ಸವ ಮಾಡುತ್ತಾರೆ. ಖಡಕ್ ರೊಟ್ಟಿಯ ವೈಶಿಷ್ಟ್ಯವೇ ಅಂತಹದು. ಇದು ಹಸಿದು ಬಂದವರಿಗೆ ಆಪದ್ಬಾಂಧವ. ಅಪರಾತ್ರಿ, ಅವೇಳೆಯಲ್ಲಿ ಬಂದವರಿಗೆ ತಾಳ್ಮೆ ಯಾರಿಗಿರುತ್ತೆ. ಒಂದು ವೇಳೆ ಬಿಸಿದೂ ಮಾಡಬೇಕೆಂದರೂ ಅಲ್ಲಿವರೆಗೆ ತಡಕೊಳ್ಳುವ ಶಕ್ತಿ ಇರಬೇಕಲ್ಲ!

ಇನ್ನೂ ಕೀರ್ತನೆ, ವಚನಗಳಲ್ಲಿ ರಾಗಿಯ ಪ್ರಸ್ತಾಪ ಬಂದಿರಬಹುದು. ಅವರೆಲ್ಲ ಬಡಪಾಯಿ ಜೋಳದ ಬಗ್ಗೆ ಯಾಕೆ ಭೇದವೆಣಿಸಿದರೊ ಕಾಣೆ. ಆದರೆ ಒಡಪು, ಒಗಟು, ಗಾದೆಗಳಲ್ಲಂತೂ ರೊಟ್ಟಿಯ ನೆನಿಕೆ ಇದೆ. 'ಕಟಗ ರೊಟ್ಟಿ, ಎಣ್ಣಿ ಬದನೆಕಾಯಿ ಕಟಿಗೊಂಡು ಹೋಗಂದ್ರ ಶೆಟಗೊಂಡು ಹೋಗ್ತಾರ ನಮ್ಮ ತಿಪ್ಪಶೆಟ್ರು' ಇದು ಉತ್ತರ ಕರ್ನಾಟಕದ ಗ್ರಾಮ ಭಾಗದಲ್ಲಿ ಹೆಣ್ಣುಮಕ್ಕಳು ಗಂಡನ ಹೆಸರು ಕೇಳಿದಾಗ ಹಾಸ್ಯ ಹಾಗೂ ಶೃಂಗಾರಭರಿತವಾಗಿ ಹೇಳುವ ಒಡಪಿನ ಧ್ವನಿ, 'ಅಂಗೈ ಅಗಲದ ರೊಟ್ಟಿಗೆ ಲೆಕ್ಕವಿಲ್ಲದಷ್ಟು ಉಪ್ಪಿನಕಾಯಿ' ಆಕಾಶ ನಕ್ಷತ್ರದ ಉತ್ತರ ಕಾಣಿಸುವ ಇದು ಒಗಟಿನ ಸಾಲು, ಮಹಾಭಾರತದಲ್ಲಿ ಬರುವ ಜೋಳದ ಪಾಳಿಗೆ ಎನ್ನುವ ಪದಕ್ಕೆ ಅನ್ನದ ಋಣ ಎನ್ನುವ ಮಾತಿದೆ. ಮಹಾಭಾರತ ಕಾಲಕ್ಕೆ ಇದು ಪ್ರಮುಖ ಆಹಾರ ಧಾನ್ಯವಾಗಿತ್ತೆ! ಎನ್ನುವ ಸಂಶೋಧನೆ ಆಗಬೇಕಿದೆ. ಆಧುನಿಕ ಶಿಶುಗೀತೆಗಳಲ್ಲೂ

*ರೊಟ್ಟಿ ಅಂಗಡಿ ಕಿಟ್ಟಪ್ಪ*
*ನನಗೊಂದು ರೊಟ್ಟಿ ತಟ್ಟಪ್ಪ*
*ಪುಟಾಣಿ ರೊಟ್ಟಿ*
*ಕೆಂಪಗೆ ಸುಟ್ಟು ಒಂಬತ್ತು ಕಾಸಿಗೆ ಕಟ್ಟಪ್ಪ*

ಅನ್ನುವ ಗೀತೆ ಗಮನಿಸಿದರೆ ರೊಟ್ಟಿ ಸುಟ್ಟುಕೊಡುವ ಅಂಗಡಿಗಳು ಇದ್ದವೇನೋ ಎನ್ನುವ ಆಶಾಭಾವವೂ ಮೂಡುತ್ತೆ.

ಮೊದಲ ಹೇಳಿದಾಂಗ ರೊಟ್ಟಿ ಇಲ್ಲದ ಊಟ ಅದು ಊಟನ ಅಲ್ಲ. ಯಾವುದೇ ಆಹಾರ ತಿಂದ್ರ ಏನಾದ್ರೂ ಬ್ಯಾನಿ ಬಡಕೊಬಹುದು ರೊಟ್ಟಿ ತಿನ್ನೊರಿಗೆ ಬ್ಯಾನಿ ಬಡಕೊಂಡಿದ್ದು ಉದಾಹರಣೆಗಳೇ ಇಲ್ಲ. ರೊಟ್ಟಿ ತಿಂದರ ಹೊಟ್ಯಾಗಾಗತ್ತ, ಅನ್ನ ಉಂಡ್ರ ಹೊಟ್ಟಿ ಬರುತ್ತ. ಇದು ಸೇರಿಸಬಹುದಾದ ಹೊಸ ಗಾದೆ. ರೊಟ್ಟಿಯಲ್ಲಿ ರೈತನ ಕಳಕಳಿ ಇದೆ, ಅಮ್ಮನ ಪ್ರೀತಿ ಇದೆ. ಹಸಿದವರಿಗೆ ತಣಿಸುವ ದಯಾಗುಣ ಅದರಲ್ಲಿ ಇದೆ. ಅಂತೆಯೆ ನಮ್ಮ ಭಾಗದ ಹಿರಿಯ ಕವಿ ಜಂಬಣ್ಣ ಅಮರಚಿಂತರು

*ರೊಟ್ಟಿ*
*ವಿಸ್ತಾರದಲ್ಲಿ ಭೂಮಿಗಿಂತ ಮಿಗಿಲು*
*ಇದರ ಎತ್ತರ ಎವರೆಸ್ಟಿಗೂ ದಿಗಿಲು*

ಎಂದು ಹೇಳುವಲ್ಲಿ ಈ ನೆಲದ ಸತ್ವವೂ ಇದೆ. ಖರೆ ಅಲ್ಲವೇನ್ರಿ?

**ಗುಂಡುರಾವ್ ದೇಸಾಯಿ**
ಮಸ್ಕಿ, ರಾಯಚೂರು ಜಿಲ್ಲೆ

## ಅಭಿನಂದನೆಗಳು

ಡಾ॥ ಬರಗೂರು ಪ್ರತಿಷ್ಠಾನವು ನೀಡುವ ೨೦೧೫ರ ಸಾಲಿನ 'ಪ್ರೊ॥ ಬರಗೂರು ಪ್ರಶಸ್ತಿ'ಯು ಹಿರಿಯ ಸಾಹಿತಿ ಡಾ॥ ಬಿ. ಎ. ಸನದಿ ಅವರಿಗೆ ಲಭಿಸಿದೆ. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದಿಂದ ಅಭಿನಂದನೆಗಳು.



# ಮೈಸೂರು ಸಂಸ್ಥಾನ ಎಲ್ಲಿದೆ?

ಹಿಂದಿನ ಮೈಸೂರು ರಾಜನಿಷ್ಠರಿಗೆ ಇಷ್ಟವಾದ ಸಿಹಿಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. "ಮೈಸೂರು ಸಂಸ್ಥಾನಕ್ಕೆ ಹೊಸ ಅರಸ", "ಯದುವಂಶದ ಹೊಸ ತಿಲಕ", "ಮೈಸೂರಿಗೆ ಹೊಸ ಮಹಾರಾಜ", "ಮೈಸೂರಿಗೆ ಯದುವೀರ ಹೊಸ ಮಹಾರಾಜ", "೨೭ನೇ ದೊರೆಯಾಗಿ ವೈಭವೋಪೇತ ಪಟ್ಟಾಭಿಷೇಕ", "ಅಂಬಾವಿಲಾಸದಲ್ಲಿ ಸಂಭ್ರಮದ ಪಟ್ಟಾಭಿಷೇಕ ಯದುವೀರ ಮಹಾರಾಜ". ಇಂಗ್ಲಿಷಿನ ದಿನಪತ್ರಿಕೆ "...And He is 'KING'" ಎಂಬ ಒಂದು ಪುಟದ ಸುದ್ದಿಯನ್ನು ಪ್ರಕಟಿಸಿದೆ. ಇದಾದ ಕೆಲವು ದಿನಗಳ ನಂತರ ಇನ್ನೊಂದು ಸುದ್ದಿ ಪ್ರಕಟವಾಯಿತು – "ದತ್ತುಪುತ್ರನಿಗೆ ಕೆ. ಆರ್. ಸಾಗರ ತೋರಿಸಿದ ಪ್ರಮೋದ ದೇವಿ".

ಈ ವರದಿ ನೋಡಿದಾಗ ಕೆಲವರು ಗಹಗಹಿಸಿ ನಕ್ಕರು. ಕೆಲವರು ಉದಾಸೀನ ತೋರಿದರು.

'ಮೈಸೂರು ಸಂಸ್ಥಾನದ ನೂತನ ಅರಸು' ಎಂಬ ಸುದ್ದಿಯನ್ನು ಓದಿದಾಗ ಮೈಸೂರು ಸಂಸ್ಥಾನ ಎಲ್ಲಿದೆ ? ಎಂದು ಉಜ್ವಲ ವಿದ್ಯುತ್‌ದೀಪದ ಬೆಳಕಿನಲ್ಲಿ ಭರತಖಂಡದ ಭೂಪಟವನ್ನೆಲ್ಲಾ ಹುಡುಕಿದೆ. ಎಲ್ಲೆಲ್ಲಿಯೂ ಆ ಹೆಸರಿನ ಒಂದು ಪ್ರದೇಶವೂ ಕಂಡು ಬರಲಿಲ್ಲ. ಪ್ರದೇಶವೇ ಇಲ್ಲದ ರಾಜ್ಯಕ್ಕೆ, ಪ್ರಜೆಗಳೇ ಇಲ್ಲದ ದೊರೆಗಳೆಂಬುದು ಸೋಜಿಗದ ಸಂಗತಿ. ಈ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನ ಭೂಪಟದಿಂದ ಅಳಿದ ಇತಿಹಾಸವನ್ನು ಪರಿಶೀಲಿಸಲಾಯಿತು.

ಬ್ರಿಟಿಷ್ ಚಕ್ರವರ್ತಿಗಳ ಕೃಪಾಶೀರ್ವಾದದಿಂದ ಚಕ್ರವರ್ತಿಗಳ ಪ್ರತ್ಯಕ್ಷ ಪ್ರತಿನಿಧಿ ವೈಸರಾಯರ ರಕ್ಷಣೆಯಲ್ಲಿ ಅವರ ಆಡಳಿತಾತ್ಮಕ ಅಧಿಕಾರಿ ರೆಸಿಡೆಂಟರ ನೇರ ಕಣ್ಗಾವಲಿನಲ್ಲಿ 'ಒಡೆಯ'ರೆಂಬ ಹೆಸರಿನಲ್ಲಿ ಮೈಸೂರು ಅರಸರು, 'ಮೈಸೂರು' ಎಂಬ ಪ್ರದೇಶದಲ್ಲಿ ಆಡಳಿತ ನಡೆಸುತ್ತಿದ್ದರು. ಬ್ರಿಟಿಷರು ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಟ್ಟು ಇಲ್ಲಿಂದ ನಿರ್ಗಮಿಸುವುದಾಗಿ ಘೋಷಿಸಿದ ಮೇಲೆ ಈ ದೇಶದಲ್ಲಿ ಆಗ ವಿವಿಧ ಹೆಸರುಗಳ ಸಣ್ಣಪುಟ್ಟ ದೇಶೀ ಸಂಸ್ಥಾನಿಕರು, ಸಾಮಂತರು, ದೇಶಗತಿ, ದರ್ಬಾರ್... ಇತ್ಯಾದಿ ಹೆಸರಿನಿಂದ ಸಣ್ಣ ಸಂಸ್ಥಾನಿಗಳಿಂದ ಹಿಡಿದು ಮೈಸೂರು, ಕಾಶ್ಮೀರ, ಬರೋಡಾ, ಹೈದರಾಬಾದ್... ಮುಂತಾದ ದೊಡ್ಡ ೬೫೬ ಸಂಸ್ಥಾನಗಳು

**ಕೋ. ಚೆನ್ನಬಸಪ್ಪ**

ಉಳಿಯಬೇಕೆ, ಬೇಡವೆ, ಎಂಬ ವಿಚಾರವಾಗಿ ಬ್ರಿಟಿಷ್ ಸರ್ಕಾರ ಮತ್ತು ದೇಶದ ರಾಷ್ಟ್ರೀಯ ಮುಖಂಡರು ಬಹುದೀರ್ಘ ಆಲೋಚನೆ ಮಾಡಿ, ಆ ರಾಜ್ಯಗಳನ್ನು ಭಾರತದಲ್ಲಿ 'ಅಂತರ್ಗತ' ಮಾಡಬೇಕೆಂದು ತೀರ್ಮಾನಿಸಿದರು. ಈ ನಿರ್ಧಾರವನ್ನು ವಿರೋಧಿಸಿ ತಿರುವಾಂಕುರ್-ಕೊಚ್ಚಿನ್, ಹೈದ್ರಾಬಾದ್, ಭೂಪಾಲ್... ಮುಂತಾದ ರಾಜ್ಯಗಳು ತಾವು ಭಾರತದಲ್ಲಿ ವಿಲೀನ ವಾಗುವುದಿಲ್ಲವೆಂದೂ, ಸ್ವತಂತ್ರ ರಾಜ್ಯವನ್ನಾಗಿ ಉಳಿಸಿ ಕೊಳ್ಳುವೆವೆಂದು ನಿರ್ಧರಿಸಿದರು. ಈ ಸಂಸ್ಥಾನಿಕರು, ಸಾಮಂತ ರಾಜರು, ಮುಂತಾದವರು 'ಚೇಂಬರ್ ಆಫ್ ಪ್ರಿನ್ಸಸ್' ಎಂಬ ಸಂಘವನ್ನು ಸ್ಥಾಪಿಸಿಕೊಂಡು ಸ್ವತಂತ್ರ ರಾಜ್ಯಗಳಿಗಾಗಿ ಹೆಣಗಾಡಿದರು. ಆ ಎಲ್ಲ ಪ್ರಯತ್ನಗಳು ಹುಸಿಯಾದವು. ಮೈಸೂರಿನ ಮಟ್ಟಿಗೆ ಇಲ್ಲಿಯ ರಾಜಕೀಯ ಮುಖಂಡರು ಜವಾಬ್ದಾರಿ ಸರ್ಕಾರಕ್ಕಾಗಿ ಹಿಂದೆ ಚಳವಳಿ ಹೂಡಿದ್ದರು. ಈಸೂರು, ವಿದುರಾಶ್ವತ್ಥ, ಮಂಡ್ಯದಲ್ಲಿ ನಡೆದ ಧ್ವಜ ಸತ್ಯಾಗ್ರಹ... ಮುಂತಾದ ಕಡೆ ನಡೆದ ತೀವ್ರ, ಘೋರ ಚಳವಳಿಯಿಂದಾಗಿ ಅಂದಿನ ಮೈಸೂರು ಅರಸರೇ ಪ್ರಜಾಭಿಪ್ರಾಯಕ್ಕೆ ಮಣಿದು, ಮನ್ನಣೆ ಕೊಟ್ಟು ಜವಾಬ್ದಾರಿ ಸರ್ಕಾರವನ್ನು ಕೊಡಲೊಪ್ಪಿ ತಮ್ಮ ಅಧಿಕಾರವನ್ನು ತಾವೇ

ಮೈಸೂರು ರಾಜ್ಯ ಭರತಖಂಡದ ಭೂಭಾಗವಾಗಿ ಅಂತರ್ಗತವಾದ ಅರಸೊತ್ತಿಗೆ ಕೊನೆಗೊಂಡ ಪೂರ್ಣ ಇತಿಹಾಸವನ್ನು ಭಾರತ ಸರ್ಕಾರವೇ ೧೯೪೮ರಲ್ಲಿ ಪ್ರಕಟಿಸಿದ 'ವೈಟ್ ಪೇಪರ್ ಆನ್ ಇಂಡಿಯನ್ ಸ್ಟೇಟ್ಸ್' – ಎಂಬ ಪುಸ್ತಕವನ್ನು ಓದಬಹುದು. ಆಗ ಮೈಸೂರು ಸಂಸ್ಥಾನ ಎಂಬುದು ಇದೆಯೆ, ಇಲ್ಲವೇ ? ಎಂಬುದು ಸ್ಪಷ್ಟವಾಗುತ್ತದೆ. ಜನ ತಿಳಿಯಬೇಕಾದ ಮುಖ್ಯ ಸತ್ಯಸಂಗತಿ ಎಂದರೆ – ಮೈಸೂರು ಸಂಸ್ಥಾನವೆಂಬುದು ಭರತಖಂಡದ ಭೂಪಟದಲ್ಲಿ ಎಲ್ಲೆಲ್ಲಿಯೂ ಇಲ್ಲ. ಅದಕ್ಕೊಬ್ಬ 'ನೂತನ ಅರಸ'ನ ಪಟ್ಟಾಭಿಷೇಕವಾಯಿತು ಎಂಬುದು ಶುದ್ಧ ನಗೆಪಾಟಲು. ಅರಮನೆಯಲ್ಲಿ ನಡೆದ ಪಟ್ಟಾಭಿಷೇಕ... ಇತ್ಯಾದಿ.. ಇತ್ಯಾದಿ ಮಂತ್ರಘೋಷ ಸಹಿತ ವಿಧಿವಿಧಾನಗಳೆಲ್ಲ ಕೇವಲ ಹುಡುಗಾಟ.

ಬಿಟ್ಟುಕೊಟ್ಟರು. ಅಲ್ಲಿಗೆ ಅರಸೊತ್ತಿಗೆ ಅರ್ಧ ಅಸ್ತಂಗತವಾಗಿತ್ತು. ಇನ್ನುಳಿದರ್ಧ ಅರಸೊತ್ತಿಗೆಯು ನಾಮಕಾವಸ್ತೆ ಇತ್ತು. ೧೯೪೬ರಲ್ಲಿ ಕೇಂದ್ರದಲ್ಲಿ ಕಾಂಗ್ರೆಸ್ ನೇತೃತ್ವದಲ್ಲಿ ಪರಿವರ್ತನೆ ಕಾಲದ 'ತಾತ್ಕಾಲಿಕ ಸರ್ಕಾರ' ಹೆಜ್ಜೆ ಹೆಜ್ಜೆಗೆ ದೇಶೀಯ ಸಂಸ್ಥಾನಗಳ ವಿವಿಧ ಶಾಸನಾಧಿಕಾರವನ್ನು ವಹಿಸಿಕೊಂಡಿತು.

ಮೈಸೂರು ರಾಜ್ಯವನ್ನು ಭರತಖಂಡದಲ್ಲಿ ವಿಲೀನ ಮಾಡಲು 'ಇನ್‌ಸ್ಟ್ರುಮೆಂಟ್ ಆಫ್ ಆ್ಯಕ್ಸೆಷನ್' ಅನ್ನು ಜಯಚಾಮರಾಜೇಂದ್ರ ಒಡೆಯರ್ ಅವರೇ ಕೇಂದ್ರ ಸರ್ಕಾರಕ್ಕೆ ಬರೆದುಕೊಟ್ಟರು. ಆ ಮೂಲಕ ರಾಜ್ಯ ಪರಿತ್ಯಾಗ ಮಾಡಿದರು. ಹೀಗೆ ರಾಜ್ಯ ಪರಿತ್ಯಾಗ ಮಾಡಿದ ಮೇಲೆ, ಮೈಸೂರು ಸಂಸ್ಥಾನವು ಫೆಡರಲ್, ಫಿನಾನ್‌ಷಿಯಲ್, ಇನ್‌ಟೆಗ್ರೇಷನ್ ವಿಷಯಗಳಲ್ಲೂ ಭಾರತ ಸರಕಾರವೆ ವಹಿಸಿಕೊಳ್ಳಲು ಮೈಸೂರು ಸೀಮೆ ಒಪ್ಪಿಕೊಂಡಿತು.

೧೯೪೭ ಅಕ್ಟೋಬರ್ ೧೯ನೇ ತಾರೀಖು ಅಂದಿನ ಮಹಾರಾಜರು 'ಮೈಸೂರು ರಾಜ್ಯಕ್ಕೆ ಪ್ರಜಾಪ್ರತಿನಿಧಿಗಳು ಒಂದು ಸಂವಿಧಾನವನ್ನು ರಚಿಸಬೇಕೆಂದು' ಘೋಷಿಸಿ, ಅದಕ್ಕಾಗಿ ಒಂದು ಸಂವಿಧಾನ ರಚನಾ ಸಭೆಯನ್ನು ಆಯ್ಕೆ ಮಾಡಲಾಯಿತು. ಆ ಸಮಿತಿ ಒಮ್ಮತದಿಂದ ಕೇಂದ್ರದಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಅಧ್ಯಕ್ಷತೆಯಲ್ಲಿ ನೇಮಕ ಮಾಡಿದ್ದ ಸಂವಿಧಾನ ರಚನಾ ಸಭೆ ದಿನಾಂಕ ೨೫–೧೧–೧೯೪೯ರಂದು ಸಂವಿಧಾನವನ್ನು ಅಂಗೀಕರಿಸಿತ್ತು. ಮೈಸೂರು ಸಂವಿಧಾನ ರಚನಾ ಸಮಿತಿ, ಭಾರತ ಸಂವಿಧಾನವನ್ನು ಮೈಸೂರಿಗೂ ಅನ್ವಯಿಸುವಂತೆ ಒಮ್ಮತದಿಂದ ತೀರ್ಮಾನಿಸಿತು. ಈ ಪ್ರಕ್ರಿಯೆಯ ಪರಿಣಾಮ ಶಾಸನದ ದೃಷ್ಟಿಯಿಂದ ಏನಾಯಿತೆಂದರೆ, ಮೈಸೂರು ಸಂಸ್ಥಾನ ಎನ್ನುವುದು ಭರತಖಂಡದ ಭೂಪಟದಿಂದ ಸಂಪೂರ್ಣ ಅಳಿಸಿ ಹೋಯಿತು. ಅದರ ಯಾವ ಗುರುತು ಎಲ್ಲಿಯೂ ಉಳಿಯಲಿಲ್ಲ. ಮೈಸೂರಿನ ಅರಸೊತ್ತಿಗೆ ಸಂಪೂರ್ಣ ಕಣ್ಮುಚ್ಚಿ ಹೋಯಿತು. ಈ ಎಲ್ಲ ಪ್ರಕ್ರಿಯೆಗಳ ಪರಿಣಾಮವಾಗಿ ಭರತಖಂಡದಲ್ಲಿದ್ದ ಎಲ್ಲ ಸಾಮಂತ ರಾಜರು, ಅರಸರು... ಇತ್ಯಾದಿ... ಇತ್ಯಾದಿ ರಾಜ್ಯಗಳೆಲ್ಲ ಕಣ್ಮುಚ್ಚಿದವು. ಉಳಿದದ್ದು ರಾಜ್ಯ ಪರಿತ್ಯಕ್ತರಾದ ಹಿಂದಿನ ಅರಸರಿಗೆ ಜೀವಾನೋಪಾಯಕ್ಕಾಗಿ ಕೊಡಬಹುದಾದ ಪರಿಹಾರ ದ್ರವ್ಯವೆಷ್ಟು? ಮತ್ತು ಅವರಿಗೆ ಹಿಂದಿದ್ದ ಸ್ಥಾನಮಾನದ ಸಾಂಕೇತಿಕ ಗೌರವವೇನು ?

ಆ ಘಟ್ಟದಲ್ಲಿ ಮೈಸೂರಿನ 'ಮಾಜಿ ಅರಸ'ರಿಗೆ ಜೀವನೋಪಾಯಕ್ಕಾಗಿ ಕೊಡಬಹುದಾದ ಪರಿಹಾರ ದ್ರವ್ಯ ಪ್ರೀವಿ ಪರ್ಸ್ ಮತ್ತು ಅರಸರೆಂಬ ಹೆಸರಿಗೆ ಬದಲಾಗಿ ಕೊಡುವ ಗೌರವದ ನಾಮಾಂಕಿತ. ಈ ವಿಚಾರವಾಗಿ ಅಂದಿನ ಉಪ ಪ್ರಧಾನಿ ಮತ್ತು ಗೃಹಸಚಿವರಾಗಿದ್ದ ಸರ್ದಾರ ಪಟೇಲರು ಯಾವ ಕ್ರಮ ಕೈಗೊಂಡರು ಎಂಬುದನ್ನು ಅವರ ಕಾರ್ಯದರ್ಶಿ ಆಗಿದ್ದ ಶ್ರೀ ವಿ. ಪಿ. ಮೆನನ್ ಪ್ರಖ್ಯಾತ ಆಡಳಿತಾಧಿಕಾರಿ ಭರತಖಂಡದಲ್ಲಿ ವಿಲೀನ ಮಾಡಿದ ದೇಸಿ ಸಂಸ್ಥಾನಗಳ ಬಗ್ಗೆ 'ಸ್ಟೋರಿ ಆಫ್ ಇನ್‌ಟೆಗ್ರೇಷನ್ ಆಫ್ ಸ್ಟೇಟ್ಸ್ ಇನ್ ಇಂಡಿಯಾ' ಎಂಬ ತಮ್ಮ ಉದ್ಗ್ರಂಥದಲ್ಲಿ ಮನೋಜ್ಞವಾಗಿ ಹೀಗೆ ದಾಖಲಿಸಿದ್ದಾರೆ :

## ಕಾಲ ಪುರುಷ

ಮನೆಗೆ ಬೆಂಕಿ

ಇಟ್ಟು

ಊರಿಗೆ ಬೆಳಕನ್ನು

ನೀಡಲು

ತವಕಿಸುವ

ಕಾಲಪುರುಷನ

ನೋಡಾ

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೫೬೦ ೦೭೩

"ಒಂದು ದಿನ ಬಹು ಮುಂಜಾನೆ ಸರ್ದಾರ್ ಪಟೇಲರ ಮಗಳು ಮಣಿಬೆನ್ ಪಟೇಲರು ದೂರವಾಣಿ ಕರೆ ಮಾಡಿ ಕೂಡಲೆ ಮನೆಗೆ ಬರಬೇಕೆಂದು ಕರೆದರು. ಆಗ ಸರ್ದಾರರ ಆರೋಗ್ಯ ಅಷ್ಟೊಂದು ಸರಿಯಾಗಿ ಇರಲಿಲ್ಲ. ಆದ್ದರಿಂದ ನಾನು ಒಂದಿಷ್ಟು ದಿಗಿಲಿನಿಂದಲೇ ಸರ್ದಾರರ ಮನೆಗೆ ಹೋದೆ. ಕೂಡಲೇ ಅವರನ್ನು ಕಂಡೆ. ಪಟೇಲರು ಆಗ ಮೈಸೂರು ಮತ್ತು ಹೈದ್ರಾಬಾದ್ ರಾಜರಿಗೆ ಕೊಡುವ ಗೌರವ ರಾಜಧನ ಮತ್ತು ನಾಮಾಂಕಿತದ ಬಗ್ಗೆ ತುರ್ತಾಗಿ ನಿರ್ಧರಿಸಬೇಕೆಂಬುದಾಗಿ ಹೇಳಿದರು. ಆದ್ದರಿಂದ ನಾನು ಮರುದಿನವೆ ಮೈಸೂರಿಗೆ ಬಂದು ಮಹಾರಾಜರ ಪರಿಹಾರ ದ್ರವ್ಯ ಮತ್ತು ಅವರ ಗೌರವ ನಾಮಾಂಕಿತ ನಿರ್ಧರಿಸಿದೆ. ಮೂರೇ ದಿನಗಳಲ್ಲಿ ಮಹಾರಾಜರಿಗೆ 'ರಾಜಪ್ರಮುಖ' ಎಂಬ ಗೌರವ ನಾಮಾಂಕಿತ ಕೊಡಬೇಕೆಂದು, ಪರಿಹಾರ ದ್ರವ್ಯವನ್ನು ನಿರ್ಧರಿಸಿ ರಾಜರೊಡನೆ ಒಪ್ಪಂದ ಮಾಡಿಕೊಂಡು ಬಂದೆ. ಇನ್ನುಳಿದದ್ದು, ಆ ರಾಜರ ಖಾಸಗೀ ಆಸ್ತಿ ಯಾವುದು ಎಂಬುದನ್ನು ನಿರ್ಧರಿಸಬೇಕಾಯಿತು". ಈ ವಿಚಾರದಲ್ಲಿ ಮೆನನ್ ಅವರ ಮಾತುಗಳು ಹೀಗಿವೆ:

"ಮೈಸೂರಿನಲ್ಲಿ, ಪ್ರಭುತ್ವ ಮತ್ತು ಮಹಾರಾಜರ ಆಸ್ತಿಪಾಸ್ತಿಗಳ ವಿಂಗಡಣೆಗೆ ಸಂಬಂಧಪಟ್ಟಂತೆ ಯಾವುದೇ ತಕರಾರು ಇರಲಿಲ್ಲ. ಆ ಕುರಿತು ಬಹಳ ವರ್ಷಗಳ ಹಿಂದೆಯೇ ಇತ್ಯರ್ಥವಾಗಿತ್ತು. ೧೭೯೯ರಲ್ಲಿ ಟಿಪ್ಪು ಯುದ್ಧದಲ್ಲಿ ಸೋತು ಮರಣಹೊಂದಿದ ಸಂದರ್ಭದಲ್ಲಿ ರಾಜ್ಯಾಡಳಿತ ಮತ್ತೆ ರಾಜರ ಕುಟುಂಬದ ಪಾಲಿಗೆ ಬಂದಿತಾದರೂ ಅವರು ನಿರ್ಗತಿಕರಾಗಿದ್ದರು. ಅಲ್ಲದೆ, ೧೮೩೧ರಿಂದ ೧೮೮೧ರವರೆಗೆ, ಎಂದರೆ ಸುಮಾರು ೫೦ ವರ್ಷಗಳ ಕಾಲ ಬ್ರಿಟಿಷರೇ ನೇರವಾಗಿ ಆಡಳಿತ ನಡೆಸುತ್ತಿದ್ದುದರಿಂದ ರಾಜಮನೆತನದವರಿಗೆ ಖಾಸಗೀ ಆಸ್ತಿಯನ್ನು ಗಳಿಸುವುದಕ್ಕಾಗಲಿ, ಶ್ರೀಮಂತರಾಗುವುದಕ್ಕಾಗಲಿ ಯಾವ ಅವಕಾಶವೂ ಇರಲಿಲ್ಲ. (ದಿ ಸ್ಟೋರಿ ಆಫ್ ಇನ್‌ಟೆಗ್ರೇಷನ್ ಆಫ್ ಸ್ಟೇಟ್ಸ್, ವಿ. ಪಿ. ಮೆನನ್, ಪುಟ ೨೯೬ (೧೯೫೬).

೧೯೪೭ರಲ್ಲಿ ಮಾಜಿ ಅರಸರ ಜೀವನೋಪಾಯಕ್ಕಾಗಿ ನಿಗದಿಯಾದ ಈ ರಾಜಧನವನ್ನೂ ಕೂಡ, ಇಂದಿರಾ ಗಾಂಧಿ ಪ್ರಧಾನಿಗಳಾಗಿದ್ದಾಗ ಸಂವಿಧಾನ ತಿದ್ದುಪಡಿ ತಂದು ರಾಜಧನ ಕೊಡುವುದನ್ನು ರದ್ದುಪಡಿಸಿದರು. ಹೀಗೆ ಹಿಂದಿನ ರಾಜರುಗಳಿಂದ ರಾಜ್ಯವನ್ನು ವಶಪಡಿಸಿಕೊಂಡರು, ಅವರಿಗಿದ್ದ ಬಿರುದಾವಳಿಗಳನ್ನು ರದ್ದುಪಡಿಸಿದರು ಹಾಗೂ ಜೀವನೋಪಾಯಕ್ಕಾಗಿ ನೀಡುತ್ತಿದ್ದ ರಾಜಧನವನ್ನೂ ನಿಲ್ಲಿಸಿದರು.

ಮೈಸೂರು ರಾಜ್ಯ ಭರತಖಂಡದ ಭೂಭಾಗವಾಗಿ ಅಂತರ್ಗತವಾದ ಅರಸೊತ್ತಿಗೆ ಕೊನೆಗೊಂಡ ಪೂರ್ಣ ಇತಿಹಾಸವನ್ನು ಭಾರತ ಸರ್ಕಾರವೇ ೧೯೪೮ರಲ್ಲಿ ಪ್ರಕಟಿಸಿದ 'ವೈಟ್ ಪೇಪರ್ ಆನ್ ಇಂಡಿಯನ್ ಸ್ಟೇಟ್ಸ್' – ಎಂಬ ಪುಸ್ತಕವನ್ನು ಓದಬಹುದು. ಆಗ ಮೈಸೂರು ಸಂಸ್ಥಾನ ಎಂಬುದು ಇದೆಯೆ, ಇಲ್ಲವೇ ? ಎಂಬುದು ಸ್ಪಷ್ಟವಾಗುತ್ತದೆ.

ಜನ ತಿಳಿಯಬೇಕಾದ ಮುಖ್ಯ ಸತ್ಯಸಂಗತಿ ಎಂದರೆ – ಮೈಸೂರು ಸಂಸ್ಥಾನವೆಂಬುದು ಭರತಖಂಡದ ಭೂಪಟದಲ್ಲಿ ಎಲ್ಲೆಲ್ಲಿಯೂ ಇಲ್ಲ. ಅದಕ್ಕೊಬ್ಬ 'ನೂತನ ಅರಸ'ನ ಪಟ್ಟಾಭಿಷೇಕವಾಯಿತು ಎಂಬುದು ಶುದ್ಧ ನಗೆಪಾಟಲು. ಅರಮನೆಯಲ್ಲಿ ನಡೆದ ಪಟ್ಟಾಭಿಷೇಕ... ಇತ್ಯಾದಿ.. ಇತ್ಯಾದಿ ಮಂತ್ರಘೋಷ ಸಹಿತ ವಿಧಿವಿಧಾನಗಳೆಲ್ಲ ಕೇವಲ ಹುಡುಗಾಟ. ಇನ್ನೂ ಮೈಸೂರು ಅರಮನೆ ತಮ್ಮದೆಂದು ಸಾಧಿಸುವ ಮಾಜಿ ಅರಸರ ಪತ್ನಿಯ ಯತ್ನ ಹಾಸ್ಯಾಸ್ಪದ. ದತ್ತುಪುತ್ರನನ್ನು ತೆಗೆದುಕೊಂಡು ಅರಸು ಮನೆತನವನ್ನು ಪುನರುಜ್ಜೀವನಗೊಳಿಸುವ ಯತ್ನವೂ ಧರ್ಮಬಾಹಿರ ಮತ್ತು ಶಾಸನಬಾಹಿರ. ಧರ್ಮಬಾಹಿರ ಹೇಗೆಂದರೆ – ಹಿಂದೂ ಧರ್ಮದ ದತ್ತಕ ಮೀಮಾಂಸದ ಪ್ರಕಾರ ದತ್ತು ತೆಗೆದುಕೊಳ್ಳುವುದು ಮಕ್ಕಳಿಲ್ಲದೆ ಸತ್ತ ಪುರುಷರಿಗೆ ಪಿಂಡತರ್ಪಣ ಮಾಡುವ ಉದ್ದೇಶದಿಂದ. ದತ್ತುಪುತ್ರ ದತ್ತುತಂದೆಯ ಆಸ್ತಿಯ ಒಡೆಯನಾಗುವುದಿಲ್ಲ. ನ್ಯಾಯಬಾಹಿರ ಏಕೆಂದರೆ ಇಲ್ಲಿ ಆಗಿನ ಮಹಾರಾಜರೇ ತಮ್ಮ ಸರ್ವಾಧಿಕಾರವನ್ನು ಪ್ರಜೆಗಳಿಗೆ ವರ್ಗಾಯಿಸಿದ್ದಾರೆ. ಆ ತರುವಾಯ ಭಾರತಾಂತರ್ಗತ ಮೈಸೂರಿನಲ್ಲಿ ೧೯೫೦ನೇ ಭಾರತೀಯ ಸಂವಿಧಾನದ ಪ್ರಕಾರ ಚುನಾವಣೆಗಳ ಮೂಲಕ ಕರ್ನಾಟಕದಲ್ಲಿ ಶಾಸನಬದ್ಧ ಆಡಳಿತ ಸ್ಥಾಪನೆಯಾಗಿದೆ. ಈಗ ಯಾರೊಬ್ಬರನ್ನೋ ದತ್ತು ತೆಗೆದುಕೊಂಡು 'ಯದುಕುಲ ತಿಲಕ', 'ಮೈಸೂರು ಸಂಸ್ಥಾನದ ನೂತನ ಅರಸು', '೨೭ನೇ ದೊರೆ'... ಇತ್ಯಾದಿ ಘೋಷಣೆಗಳನ್ನು ಎಬ್ಬಿಸುವುದು ಒಂದರ್ಥದಲ್ಲಿ ಸಂವಿಧಾನಬಾಹಿರ ಅಪರಾಧ ಕೃತ್ಯ. ಈಗ ಹೇಳಿ ಮೈಸೂರು ಸಂಸ್ಥಾನ ಎಲ್ಲಿದೆ ?

**ಕೋ. ಚೆನ್ನಬಸಪ್ಪ**
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್
ರಾಜಾಜಿನಗರ, ಬೆಂಗಳೂರು – ೫೬೦ ೦೮೬



# ಬುಧ ಗ್ರಹ

ಡಾ|| ಬಿ. ಎಸ್. ಶೈಲಜಾ

**ಈ** ತಿಂಗಳ ಸಂಜೆಯಲ್ಲಿ ಬುಧಗ್ರಹವನ್ನು ವೀಕ್ಷಿಸಲು ಒಳ್ಳೆಯ ಅವಕಾಶವಿದೆ. ಸಾಧಾರಣವಾಗಿ ಇದನ್ನು ಹುಡುಕುವುದು ಬಹಳ ಕಷ್ಟ. ಈ ತಿಂಗಳ ಆರಂಭದಲ್ಲಿ ದಿಗಂತದ ಅಂಚಿನಲ್ಲಿ ಕ್ಷೀಣವಾದ ಚುಕ್ಕೆಯಂತೆ ಕಾಣುವ ಇದು ೪ರಂದು ಗುರು ಮತ್ತು ಶುಕ್ರರೊಡನೆ ತ್ರಿಕೋಣವನ್ನು ರಚಿಸುತ್ತದೆ. ದಿನ ಕಳೆದಂತೆ ತ್ರಿಕೋಣದ ಆಕಾರವೇ ಬದಲಾಯಿಸ ತೊಡಗುತ್ತದೆ. ದಿಗಂತದ ಅಂಚಿಗೆ ಶುಕ್ರ ವೇಗವಾಗಿ ಧಾವಿಸಿದರೆ, ಗುರು ನಿಧಾನವಾಗಿ ಸರಿಯುತ್ತದೆ. ಬುಧ ಗ್ರಹ ಮೇಲಕ್ಕೆ ಏರುತ್ತದೆ. ಏಳರಂದು ಗುರು ಗ್ರಹದಿಂದ ಒಂದು ಡಿಗ್ರಿ ಅಂತರದಲ್ಲಿ ಇರುತ್ತದೆ. ಆ ಮುಂದೆ ಗುರು ದಿಗಂತದ ಅಂಚಿಗೆ ಸರಿದು ಕಾಣದಂತೆ ಆಗುತ್ತದೆ. ಬುಧ ಮಾತ್ರ ಮೇಲೇರುತ್ತದೆ. ೧೬ರ ಸಂಜೆ ರೇಖಾ ಚಂದ್ರದ ಪಕ್ಕದಲ್ಲೇ ಕಾಣುತ್ತದೆ. (ಅಂತರ ೨ ಡಿಗ್ರಿ ಮಾತ್ರ) ಚಂದ್ರ ದಿನೇ ದಿನೇ ಮುಂದುವರೆಯುತ್ತದೆ. ಬುಧ ಅದೇ ಎತ್ತರದಲ್ಲಿ ಉಳಿಯುತ್ತದೆ. ತಿಂಗಳ ಉದ್ದಕ್ಕೂ ಹೀಗೆ ಬುಧ ನಮಗೆ ನೋಡಲು ಸಿಗುತ್ತದೆ. ಇದೊಂದು ಅಪೂರ್ವ ಅವಕಾಶ ಎನ್ನಬಹುದು.

ಸಂಜೆಯ ಆಕಾಶದಲ್ಲಿ ಬೆಳಗುವ ಶುಕ್ರ ದಿನೇ ದಿನೇ ದಿಗಂತದ ಅಂಚಿಗೆ ಸರಿಯುತ್ತದೆ. ೧೫ರಂದು ಸೂರ್ಯನೊಂದಿಗೆ ಉದಯಿಸಿ ಅಸ್ತಮಿಸುತ್ತದೆ. ಇದು ನೀಚ ಯುತಿ. ಅಂದು ಸೂರ್ಯನಿಂದ ೮° ದಕ್ಷಿಣಕ್ಕಿರುತ್ತದೆ ಎಂಬುದನ್ನು ಸೋಹೋ ಉಪಗ್ರಹದ ಚಿತ್ರಗಳಲ್ಲಿ ಕಾಣಬಹುದು. ತಿಂಗಳ ಕೊನೆಗೆ ಬೆಳಗಿನ ಜಾವದಲ್ಲಿ – ೩೧ರಂದು ಮಂಗಳ ಗ್ರಹದ ಪಕ್ಕದಲ್ಲಿ ಕಾಣುವುದು. ಸೂರ್ಯನನ್ನು ಇನ್ನೊಂದು ಬದಿಯಿಂದ ಹಾದು ಬಂದಿರುವ ಮಂಗಳ ಗ್ರಹದ ದೂರ ಗರಿಷ್ಠವಿರುವುದರಿಂದ ಅದು ಅಷ್ಟೇನೂ ಪ್ರಕಾಶಮಾನವಾಗಿಲ್ಲ. ೩೦–೩೧ರ ಅವಧಿಯಲ್ಲಿ ಶುಕ್ರ ಗ್ರಹವನ್ನು ಹುಡುಕಿ ಅದರ ಸಹಾಯದಿಂದ ಮಂಗಳವನ್ನು ಗುರುತಿಸಬಹುದು. ಮುಂದಿನ ತಿಂಗಳ ಮೊದಲ ವಾರದಲ್ಲಿ ಅವೆರಡೂ ಇನ್ನೂ ಹತ್ತಿರವಾಗಿ ಕಾಣುವುವು.




ಗುರುಗ್ರಹವೂ ಕ್ರಮೇಣ ದಿಗಂತದ ಅಂಚಿಗೆ ಸರಿಯುವುದು. ೨೬ರಂದು ಸೂರ್ಯನೊಡನೆ ಉದಯಿಸಿ ಅಸ್ತಮಿಸುವ ಯುತಿ. ಆಗ ಸೋಹೋ ಉಪಗ್ರಹದ ಚಿತ್ರಗಳಲ್ಲಿ ಕಾಣಿಸಿಕೊಳ್ಳುವುದು. ಗುರುವಿಗೂ ನಮಗೂ ನಡುವೆ ಸೂರ್ಯ ಇರುತ್ತದೆ; ೧೫ರಂದು ನಮಗೂ ಸೂರ್ಯನಿಗೂ ನಡುವೆ ಶುಕ್ರ ಇರುತ್ತದೆ. ಆದರೆ ಒಂದು ಸರಳ ರೇಖೆಯಲ್ಲಿ ಇರುವುದಿಲ್ಲ ಎಂಬುದನ್ನು ಸೋಹೋ ಚಿತ್ರಗಳು ತೋರಿಸಿಕೊಡುತ್ತವೆ.

ಸಂಜೆಯ ಆಕಾಶದಲ್ಲಿ ಕಾಣುವ ಶನಿಗ್ರಹ ಇದೀಗ ಉಂಗುರಗಳನ್ನು ತೆರೆದಿಟ್ಟು ತೋರಿಸುತ್ತಿದೆ. ದುರ್ಬೀನು, ದೂರದರ್ಶಕಗಳಿಗೆ ಕೆಲಸ ಕೊಟ್ಟು ತಪ್ಪದೇ ವೀಕ್ಷಿಸಿ. ೨೨ರ ಚಂದ್ರದ ಮೂರು ಡಿಗ್ರಿಗಳ ಅಂತರದಲ್ಲಿ ಕಾಣುವ ಚುಕ್ಕೆಯೇ ಇದು.

ಶನಿ ಗ್ರಹವನ್ನು ಗುರುತಿಸಿದ ಮೇಲೆ ನೋಟವನ್ನು ಆಚೀಚೆ ಹರಿಸಿದರೆ ವೃಶ್ಚಿಕ, ಧನುರಾಶಿಗಳು ಸ್ಫುಟವಾಗಿ ಕಾಣುತ್ತದೆ. ಆಕಾಶ ಶುಭ್ರವಾಗಿದ್ದರೆ ಆಕಾಶಗಂಗೆ ಇವುಗಳ ಮೂಲಕ ಹಾಯುವುದನ್ನೂ ಕಾಣಬಹುದು. ಹೀಗೆಯೇ ನದಿಯಂತೆ ಮುಂದುವರೆದು ಇದು ಉತ್ತರದ ಎರಡು ಪ್ರಖರ ನಕ್ಷತ್ರಗಳ ನಡುವೆ ಶಾಖೆಯಾಗಿ ಹರಿಯುವಂತೆ ಕಾಣುತ್ತದೆ. ಅಭಿಜಿತ್ (ವೇಗಾ) ಮತ್ತು ಶ್ರವಣ (ಆಲ್ಟೇರ್) ಇವೆರಡೇ ಆ ಎರಡು ನಕ್ಷತ್ರಗಳು. ಆಕಾಶದ ಈ ಭಾಗದ ನಕ್ಷತ್ರಗಳ ಹಂಚಿಕೆ ಬಹಳ ಸುಂದರವಾಗಿದೆ. ಛಾಯಾಚಿತ್ರ ತೆಗೆಯಲು, ತೆಗೆಯುವುದನ್ನು ಪ್ರಯೋಗ

ಸೂರ್ಯನ ಉತ್ತರ-ದಕ್ಷಿಣ ಚಲನೆಗಳ ನಡುವೆ ವರ್ಷದ ಎರಡು ದಿನಗಳಲ್ಲಿ ಅದು ಸರಿಯಾಗಿ ನಮ್ಮ ನೆತ್ತಿಯನ್ನು ಹಾದುಹೋಗುತ್ತದೆ. ಏಪ್ರಿಲ್ ಕೊನೆಯ ವಾರದಲ್ಲಿ ನಮ್ಮ ನೆತ್ತಿಯನ್ನು ದಾಟಿ ಉತ್ತರಕ್ಕೆ ಹೋಗಿದ್ದ ಸೂರ್ಯ ಈಗ ದಕ್ಷಿಣಕ್ಕೆ ಹೊರಟಿದೆ. ಈ ತಿಂಗಳಲ್ಲಿ ಪುನಃ ನೆತ್ತಿಯನ್ನು ಹಾಯುತ್ತದೆ. ಆ ದಿನ ನಡುಮಧ್ಯಾಹ್ನ ನಿಮ್ಮ ನೆರಳು ಮಾಯವಾಗುತ್ತದೆ. ನೀವೊಂದು ಹ್ಯಾಟ್‌ಅನ್ನು ಹಾಕಿಕೊಂಡರೆ ಹ್ಯಾಟ್‌ನ ನೆರಳು ಮಾತ್ರ ಇರುತ್ತದೆ; ನಿಮ್ಮದು ಇರುವುದಿಲ್ಲ. ಬೆಂಗಳೂರಿನಲ್ಲಿ ಆಗಸ್ಟ್ ೧೯ರಂದು ಹೀಗೆ ೧೨:೨೪ಕ್ಕೆ ಮಾಯವಾಗುವುದು. ಆಗಸ್ಟ್ ೧೫ರಂದು ಹುಬ್ಬಳ್ಳಿಯಲ್ಲಿ, ೧೩ರಂದು ವಿಜಯಪುರದಲ್ಲಿ ಹೀಗೆ ಬೇರೆ ಬೇರೆ ಊರುಗಳಲ್ಲಿ ಬೇರೆ ಬೇರೆ ದಿನಗಳಲ್ಲಿ ನಡೆಯಲಿದೆ. ಈ ತಾರೀಖುಗಳನ್ನು ಗುರುತು ಮಾಡಿಕೊಂಡರೆ ಸೂರ್ಯನ ಚಲನೆಯನ್ನೂ ಭೂಗೋಳದ ಮೇಲೆ ಆಗುವ ಅದರ ಪರಿಣಾಮವನ್ನೂ ಅರ್ಥಮಾಡಿಕೊಳ್ಳಬಹುದು. ಶಾಲೆಗಳಲ್ಲಿ ಇದನ್ನು ನೆರಳಿಲ್ಲದ ಮಧ್ಯಾಹ್ನ ಎಂದು ಆಚರಿಸಬಹುದು.



*ಆಗಸ್ಟ್ ೭ರ ಸಂಜೆ ಬುಧ – ಗುರು – ಶುಕ್ರ*



*ಆಗಸ್ಟ್ ೧೬ರ ಸಂಜೆ ಬುಧ – ಚಂದ್ರ*

ಮಾಡಿ ನೋಡಲು ಒಳ್ಳೆಯ ನೋಟ ಒದಗಿಸುತ್ತದೆ. ಆದರೆ ಮಳೆಗಾಲದಲ್ಲಿಯೇ ಸಂಜೆ ಬರುವುದರಿಂದ ನಮ್ಮ ಕವಿಗಳ, ಚಿತ್ರಕಾರರ ಹಿಡಿತಕ್ಕೆ ಇನ್ನೂ ಸಿಕ್ಕಿಲ್ಲ.

ಈ ತಿಂಗಳಲ್ಲಿ ಪ್ರಖರವಾದ ಉಲ್ಕಾವೃಷ್ಟಿ ಇದೆ. ೧೨ರಂದು ಗರಿಷ್ಠ ಮುಟ್ಟುವ ಈ ವೃಷ್ಟಿಗೆ ಪರ್ಸಿಯೈಡ್ ಎಂಬ ಹೆಸರಿದೆ. ಮುಂಜಾವುಗಳಲ್ಲಿ ಪರ್ಸಿಯುಸ್ (ಪಾರ್ಥ) ಪುಂಜದಿಂದ ಹೊರಟಂತೆ ಕಾಣುತ್ತವೆ. ಗಂಟೆಗೆ ೫೦–೬೦ ಉಲ್ಕೆಗಳು ಕಾಣುವ ಸಾಧ್ಯತೆ ಇದೆ.

೩೦ರಂದು ಚಂದ್ರ–ಭೂಮಿ ನಡುವಿನ ದೂರ ಕನಿಷ್ಠವಾಗಿರುವುದರಿಂದ ಸಾಮಾನ್ಯ ಹುಣ್ಣಿಮೆಗಿಂತ ಈ ಹುಣ್ಣಿಮೆಯ ಚಂದ್ರ ದೊಡ್ಡದಿರುತ್ತದೆ. ಆದರೆ, ಬರಿಗಣ್ಣಿನಿಂದ ಅದನ್ನು ಗುರುತಿಸಲು ಪ್ರಯತ್ನಿಸಿ. ಉಬ್ಬರದ ಜೋರನ್ನು ಕಡಲತೀರದ ವಾಸಿಗಳು ಗಮನಿಸಬಹುದು.

**ಆಗಸ್ಟ್ ತಿಂಗಳ ಖಗೋಳ ದಿನಚರಿ**

೨ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ; ಶನಿಗ್ರಹದ ಹಿನ್ನಡೆ ಮುಕ್ತಾಯ
೪ ಸಂಜೆ ಬುಧ – ಗುರು – ಶುಕ್ರ – ತ್ರಿಕೋಣ
೭ ಚಾಂದ್ರಮಾಸದ ಕೊನೆಯ ಪಾದ; ಚಂದ್ರೋದಯ ನಡುರಾತ್ರಿಗೆ
೭ ಬುಧ – ಗುರು ನಡುವೆ ಒಂದು ಡಿಗ್ರಿ ಅಂತರ (ಸಂಜೆ)*
೧೨ ಪರ್ಸಿಯೈಡ್ಸ್ ಉಲ್ಕಾವೃಷ್ಟಿ*
೧೩ ಮಂಗಳ – ಚಂದ್ರ ನಡುವೆ ಆರು ಡಿಗ್ರಿ ಅಂತರ (ಮುಂಜಾವು)
೧೪ ಅಮಾವಾಸ್ಯೆ ೨೦:೨೩ಕ್ಕೆ
೧೫ ಶುಕ್ರ ಗ್ರಹದ ನೀಚಯುತಿ
೧೬ ಬುಧ – ಚಂದ್ರ ನಡುವೆ ೨ ಡಿಗ್ರಿ ಅಂತರ (ಸಂಜೆ)*
೧೮ ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
೨೨ ಶನಿ – ಚಂದ್ರ ನಡುವೆ ೩ ಡಿಗ್ರಿ (ಸಂಜೆ)*
ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೨೬ ಗುರುಗ್ರಹದ ಯುತಿ
೩೦ ಹುಣ್ಣಿಮೆ ೦೦:೦೫ಕ್ಕೆ; ಭೂಮಿ–ಚಂದ್ರ ನಡುವೆ ಕನಿಷ್ಠ ದೂರ
(* ಛಾಯಾಗ್ರಹಣಕ್ಕೆ ಸದವಕಾಶ)

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

## ಸಾದರ ಸ್ವೀಕಾರ

**ಕನಸೊಡೆದೆದ್ದೆ – ಸಾಹಿತ್ಯ ವಿಮರ್ಶೆಯ ಟಿಪ್ಪಣಿಗಳು**
*ಡಾ॥ ಅರುಣ್ ಜೋಳದ ಕೂಡ್ಲಿಗಿ*
**ಪುಟ : *vi + ೧೫೯* ಬೆಲೆ : ರೂ. ೧೨೦**

**ಜಾನಪದ ವರ್ತಮಾನ**
*ಡಾ॥ ಅರುಣ್ ಜೋಳದ ಕೂಡ್ಲಿಗಿ*
**ಪುಟ : *vix + ೨೦೮* ಬೆಲೆ : ರೂ. ೧೫೦**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ದೇಸಿ ಪುಸ್ತಕ,** ನಂ. ೧೨೧, ೧೩ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು–೪೦

**ಮಹಾ ಪ್ರಸಾದಿ ಕಕ್ಕಯ್ಯ** *ಭಾಲಚಂದ್ರ ಜಯಶೆಟ್ಟಿ*
**ಪುಟ : *xiv + ೧೩೮* ಬೆಲೆ : ರೂ. ೬೦**
**ಬಸವ ಧರ್ಮ ಪ್ರಸಾರ ಸಂಸ್ಥೆ,** ಹಿರೇಮಠ ಸಂಸ್ಥಾನ, ಭಾಲಕಿ – ೫೮೫ ೩೨೮, ಬೀದರ ಜಿಲ್ಲೆ

**ಜಾಗತೀಕರಣ, ಶಿಕ್ಷಣ ಮತ್ತು ಸಮಾಜ**
*ಜಿ. ಎಸ್. ಜಯದೇವ*
**ಪುಟ : ೧೬೮ ಬೆಲೆ : ರೂ. ೧೫೦**
**ಅಭಿರುಚಿ ಪ್ರಕಾಶನ,** ೩೮೬, ೧೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತೀಪುರಂ, ಮೈಸೂರು – ೯

**ಬಣಗಾರ ಸಮಾಜದ ಬೆಡಗುಗಳು – ಧಾರ್ಮಿಕ ನಂಬಿಕೆಗಳು ಹಾಗೂ ಸಂಪ್ರದಾಯಗಳು**
*ಚನ್ನಬಸಪ್ಪ ಮ. ಯಾನಮಶೆಟ್ಟಿ*
**ಪುಟ : ೨೪ ಬೆಲೆ : ರೂ. ೧೦೦**
**ಶಂಕರಲಿಂಗ ಪ್ರಕಾಶನ,** ಶಂಕರಲಿಂಗ ನಗರ, ಹಳೇ ಹುಬ್ಬಳ್ಳಿ (ಕರ್ನಾಟಕ)

**ಕಿಬ್ಬದಿಯ ಕೀಲುಳುಕಿ** *ಚನ್ನಪ್ಪ ಅಂಗಡಿ*
**ಪುಟ : *xii + ೧೧೦* ಬೆಲೆ : ರೂ. ೧೦೦**
**ಪಲ್ಲವ ಪ್ರಕಾಶನ,** ಚನ್ನಪಟ್ಟಣ ಅಂಚೆ, ಎಮ್ಮಿಗನೂರು, ಬಳ್ಳಾರಿ – ೫೮೩ ೧೧೩

**ದಲಿತ ಸಮಾಜ ಇಂದಿನ ಸವಾಲುಗಳು**
*ಹಿಂದಿ ಮೂಲ : ಡಾ॥ ಜಿಯಾಲಾಲ ಆರ್ಯ, ಕನ್ನಡಕ್ಕೆ : ಆರ್. ಪಿ. ಹೆಗಡೆ*
**ಪುಟ : ೧೨೪ ಬೆಲೆ : ರೂ. ೮೦**
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಮೊದಲ ತೊದಲು** (ಲೇಖನಗಳು) *ಶರತ್ ಎಚ್. ಕೆ.*
**ಪುಟ : ೧೩೬ ಬೆಲೆ : ರೂ. ೮೦**

**ಕರಗದ ನಗು** (ಕತೆಗಳು) *ಕಾವೇರಿ ಎಸ್. ಎಸ್.*
**ಪುಟ : ೭೭ ಬೆಲೆ : ರೂ. ೬೫**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಪ್ರಜೋದಯ ಪ್ರಕಾಶನ,** ಗಂಧದ ಕೋಠಿ ಹಿಂಭಾಗ, ಗೋಕುಲ್ ಹೋಟೆಲ್ ರಸ್ತೆ, ಕೆ. ಆರ್. ಪುರಂ, ಹಾಸನ – ೫೭೩ ೨೦೧

**ಸಬರದ ಬಸವನ ವಚನಗಳು**
*ಡಾ॥ ಬಸವರಾಜ ಸಬರದ*
**ಪುಟ : *xii + ೧೧೬ = ೧೨೮* ಬೆಲೆ : ರೂ. ೧೦೦**
**ಸುಂದರ ಸಾಹಿತ್ಯ,** ನಂ. ೪೩, ಅ. ನ. ಸು. ರಸ್ತೆ, ೫ನೇ ಅಡ್ಡರಸ್ತೆ, ೪ನೇ ಮುಖ್ಯರಸ್ತೆ, ಹನುಮಂತನಗರ, ಬೆಂಗಳೂರು – ೫೬೦ ೦೧೯

**ನಗರ ಬಾಯಾರಿಕೆ** (ಲೇಖನಗಳ ಸಂಗ್ರಹ)
*ಶ್ರೀನಿವಾಸ ಜೋಕಟ್ಟೆ*
**ಪುಟ : ೩೦೦ ಬೆಲೆ : ರೂ. ೨೦೦**
**ಶ್ರೀರಾಮ ಪ್ರಕಾಶನ,** ನಂ. ೮೯೩/ಡಿ, ೩ನೇ ಕ್ರಾಸ್, ಪೂರ್ವ ಬಡಾವಣೆ, ನೆಹರು ನಗರ, ಮಂಡ್ಯ – ೫೭೧ ೪೦೧

**ನೀರದಾರಿ** (ದಲಿತ ಮಹಿಳಾ ಪ್ರಜ್ಞೆ – ವಿಭಿನ್ನ ನೆಲೆಗಳಿಂದ)
*ಸಂಪಾದನೆ : ದು. ಸರಸ್ವತಿ*
**ಪುಟ : *xxxii+೫೧೨ = ೫೪೪* ಬೆಲೆ : ರೂ. ೪೦೦**
**ಕವಿ ಪ್ರಕಾಶನ,** ಜಲಜ ಜನರಲ್ ಮತ್ತು ಮೆಟರ್ನಿಟಿ ಕ್ಲಿನಿಕ್, ಕವಲಕ್ಕಿ – ೫೮೧ ೩೬೧, ಹೊನ್ನಾವರ ತಾಲೂಕು, ಉತ್ತರ ಕನ್ನಡ ಜಿಲ್ಲೆ

**ಅಜ್ಜಿ ಹೇಳಿದ ಕಥೆಗಳು** (ಭಾರತ ಮತ್ತು ನೆರೆಹೊರೆಯ ಜನಪದ ಕಥೆಗಳು) *ಸಂಗ್ರಹ : ರೋಹಿತ್ ಚಕ್ರತೀರ್ಥ*
**ಪುಟ : ೧೧೨ ಬೆಲೆ : ರೂ. ೫೦**

**ಹಾರುವ ಬಯಕೆ** *ಗಣೇಶ ಪಿ. ನಾಡೋರ*
**ಪುಟ : ೮೮ ಬೆಲೆ : ರೂ. ೫೦**

**ಜೆನ್ ಮಹಾಯಾನ** *ಆರ್. ಡಿ. ಹೆಗಡೆ ಆಲ್ಮನೆ*
**ಪುಟ : ೧೨೪ ಬೆಲೆ : ರೂ. ೯೫**

**ಡೇಂಜರ್ Zone** *ರಾಜೇಶ್ ಶೆಟ್ಟಿ*
**ಪುಟ : ೮೪ ಬೆಲೆ : ರೂ. ೬೫**

**ನೀವೂ ಯಶಸ್ವೀ ಮಾರಾಟಗಾರರಾಗಿ**
*ಪಿ. ಪಿ. ಉಪಾಧ್ಯ*
**ಪುಟ : ೧೧೨ ಬೆಲೆ : ರೂ. ೮೦**

**ಹಾಸ್ಯ ಕಿಡಿ** *ಸಂಪಟೂರು ವಿಶ್ವನಾಥ್*
**ಪುಟ : ೬೪ ಬೆಲೆ : ರೂ. ೨೦**

**ಹಾಸ್ಯ ಸಂಭ್ರಮ** *ಸಂಪಟೂರು ವಿಶ್ವನಾಥ್*
**ಪುಟ : ೬೪ ಬೆಲೆ : ರೂ. ೨೦**

**ಹಾಸ್ಯ ಪಟಾಕಿ** *ಸಂಪಟೂರು ವಿಶ್ವನಾಥ್*
**ಪುಟ : ೬೪ ಬೆಲೆ : ರೂ. ೨೦**
*ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಬಾನಿಗೊಂದು ಎಲ್ಲೆ ಎಲ್ಲಿದೆ...** (ಸಂಕಷ್ಟಗಳನ್ನು ಎದುರಿಸಿ ಜಯಿಸಿದ ಮಹಿಳೆಯರ ಆತ್ಮ ವೃತ್ತಾಂತಗಳು)
*ಅನು : ಭಾರತಿ ಮೋಹನ ಕೋಟಿ*
**ಪುಟ : *xvi + ೧೬೭* ಬೆಲೆ : ರೂ. ೧೨೦**
**ಬೆರಗು ಪ್ರಕಾಶನ,** ಶಿ. ಕಾ. ಬಡಿಗೇರ, ಶ್ರೀರಾಮ ಬಡಾವಣೆ, ಭಾಗ್ಯನಗರ, ಕೊಪ್ಪಳ – ೫೮೩ ೨೩೮






# ದೇಗುಲವಿಲ್ಲದ ಊರು

ಮರಾಠಿ ಮೂಲ : **ಇರಾವತಿ ಕರ್ವೆ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**

**ಬಾಳ ಮತ್ತು ಪುಟ್ಟಿಯ ವಿಷಯ ನಿನಗೆ ಗೊತ್ತಿರಬಹುದು. ಎಂಥ ಉತ್ಸಾಹವುಳ್ಳ ಮಕ್ಕಳಾಗಿದ್ದರು ಅವರು! ಅವರಿಗೆ ಯಾವುದಕ್ಕೂ ಕೊರತೆಯಿರಲಿಲ್ಲ. ಅವರಿಬ್ಬರದ್ದೂ ಅಸೂಯೆ ಮೂಡಿಸುವಂತಹ ಪರಿಸ್ಥಿತಿ! ಇಬ್ಬರೂ ರಸಭರಿತವಾಗಿ ಬದುಕುತ್ತಿದ್ದರು. ಒಬ್ಬನು ವಿದೇಶಕ್ಕೆ ಹೋಗಿ, ಕುಟುಂಬದಿಂದ ದೂರ ಹೋಗಿ, ಒಂಟಿಯಾದ, ಕೊನೆಗೆ ಜೀವ ತೊರೆದ. ಅನಂತರ ತಂದೆಗೆ ಪತ್ರ ಬರೆದ...**

**ಮತ್ತೊಬ್ಬಳು ತುಂಬಿದ ಮನೆಯಲ್ಲೇ ಜೀವ ಕೊಟ್ಟಳು. ಕೊನೆಯ ಪತ್ರದಲ್ಲಿರುವ ಅಸಹಾಯಕತೆ ಮತ್ತು ಒಂಟಿತನ ಜೀವ ಹಿಂಡುವಂತಹುದಾಗಿತ್ತು. ಆದರೆ ಸಾಮಾನ್ಯರಿಗೆ ಅರ್ಥವಾಗುವಂತಹದಲ್ಲ. ಅಮ್ಮ, ಸೋದರ–ಸೋದರಿ, ಗಂಡ, ಮಕ್ಕಳು, ಸಂಪತ್ತು, ಶಿಕ್ಷಣ, ರೂಪ, ಗೆಳೆಯರ ಬಳಗ ಎಲ್ಲವೂ ಇತ್ತು. ಹಾಗಾದರೆ ಈ ಒಂಟಿತನ ಏಕೆ? ಹಿಂದೆ ಉಳಿದವರನ್ನು ನಿರಂತರವಾಗಿ ಅಪರಾಧಿಗಳನ್ನಾಗಿ ಮಾಡಿ ಈ ಜೀವ ಹೊರಟುಹೋಯಿತು. ಏಕೆ?**

**ಕ**ಳೆದ ಕೆಲವು ದಿನಗಳಿಂದ ನಾವು ಪ್ರತಿದಿನ ಆ ಹಾದಿಯ ಗುಂಟ ಹೋಗುತ್ತಿದ್ದೆವು. ಒಂದು ಹೊಸ ವಸತಿ ನಿರ್ಮಾಣವಾಗಲಾರಂಭಿಸಿತು. ನಮ್ಮ ಕಣ್ಣೆದುರಿಗೇ ಹೊಸ ಹೊಸ ಚಿಕ್ಕ ಚಿಕ್ಕ ಮನೆಗಳು ನಿರ್ಮಾಣಗೊಳ್ಳುತ್ತಿತ್ತು. ಕ್ರಮೇಣ ಸಂಪೂರ್ಣ ವಸಾಹತು ಕಟ್ಟಿ ಮುಗಿಸಲಾಯಿತು. ಹಲವು ಮನೆಗಳಲ್ಲಿ ಕುಟುಂಬಗಳು ಬಂದು ನೆಲೆಸಿದುವು. ವಸಾಹತಿನ ಒಂದು ಬದಿಗೆ ಯಾವ ಕಟ್ಟಡವೂ ಇಲ್ಲದ ಖಾಲಿ ಜಾಗವಿತ್ತು. ಒಂದು ದಿನ ಅಲ್ಲೂ ತಳಪಾಯ ತೋಡಲಾಯಿತು. ಅದು ಉಳಿದ ಮನೆಗಳಂತೆ ಕಾಣಲಿಲ್ಲ. ನೋಡುನೋಡುವಷ್ಟರಲ್ಲಿ ಒಂದು ಚಿಕ್ಕ ದೇಗುಲ ತಲೆ ಎತ್ತಿತು. ಒಂದು ದಿನ ಮರಳಿ ಹೋಗುವ ಕಾಲಕ್ಕೆ ದೇಗುಲದ ಎದುರಿಗೆ ಜನರು ಸೇರಿದ್ದರು. ಹನುಮಂತನ ಪ್ರತಿಷ್ಠಾಪನೆ ನಡೆದಿತ್ತು. ಮರಳಿ ಬಂದೆವು. ನೋಡಿದರೆ ಆ ದೇಗುಲದಲ್ಲಿ ನಮ್ಮ ಕಡೆಗೆ ಮುಖ ಮಾಡಿ ಮಾರುತಿ ನಿಂತಿದ್ದಾನೆ. "ಮತ್ತೂ ಒಂದು ಹೊಸ ದೇಗುಲ! ಪುಣೆಯಲ್ಲಿ ದೇವರುಗಳಿಗೇನು ಕೊರತೆಯಿದೆಯೇ?" "ಆದರೆ ಈ ಹೊಸ ವಸಾಹತಿನಲ್ಲಿ ದೇಗುಲವೆಲ್ಲಿದೆ? ಈಗ ಇಲ್ಲಿಯ ಜನರಿಗೆ ದೇವರ ದರ್ಶನ ಪಡೆಯಲು, ಸಂಜೆ ಆರಾಮಾಗಿ ಕೂತಿರಲು ಒಂದು ಜಾಗ ಸಿಕ್ಕಂತಾಯಿತು." "ಏನಾದರೂ ಹೇಳಬೇಡವೇ ಮಾರಾಯತಿ. ಇಂಥ ಚಿಕ್ಕ ವಸತಿಗೆ ದೇಗುಲದ ಅಗತ್ಯವೇನಿದೆ? ಅಲ್ಲದೆ, ನಸುಕಿಗೆ ಮತ್ತು ರಾತ್ರಿಗೆ ಮಾಡುವ ಭಜನೆಯಿಂದಾಗಿ ಜನರ ತಲೆ ನೋಯಬಹುದು."

ನಾನು ನಕ್ಕು ಹೇಳಿದೆ, "ಕೋಯಿಲ್ ಇಲ್ಲೇ ಉರಿಲ್. ಕುಡಿ ಇರಕ್ಕ ವೇಂಡಾಮ್." "ಬಾಯೊಳಗೇ ಏನು ವಟಗುಟ್ಟುತ್ತಿದ್ದಿಯೆ?"

"ಏನೂ ಇಲ್ಲ. ಒಂದು ತಮಿಳು ನಾಣ್ಣುಡಿ ನೆನಪಾಯಿತು" ಎನ್ನುತ್ತ ಆ ನಾಣ್ಣುಡಿಯನ್ನು ಮತ್ತೊಮ್ಮೆ ಹೇಳಿದೆ. ಬಳಿಕ ಅದರ ಭಾಷಾಂತರ ಮಾಡಿದೆ: 'ದೇಗುಲವಿಲ್ಲದ ಊರಲ್ಲಿ ಮನೆಯಿರಬಾರದು.' "ಯಾರೋ ಹಳೆಯ ಕಾಲದ ಮನುಷ್ಯನಿರಬೇಕು! ಆದರೆ ಆ ಮನೆಗೆ ಯಾವ ಊರಲ್ಲಿ ದೇಗುಲವಿಲ್ಲವೋ, ಅಲ್ಲಿ ತನಗೆ ಉಳಿಗಾಲವಿಲ್ಲ ಎಂದೆನಿಸಿರಬೇಕು. ಯಾವ ಹಳೆಯ ಕಾಲದಲ್ಲಿ ಈ ನಾಣ್ಣುಡಿ ಬಳಕೆಯಲ್ಲಿ ಬಂತೋ! ಆಗ ದೇಗುಲವಿಲ್ಲದೆ ಊರು ಇರುವ ಸಾಧ್ಯತೆಯಿರಲಿಲ್ಲವೇನೋ ಹಳೇ ಕಾಲ ಹೋಯಿತು. ಆದರೆ ಹಳೆಯ ಸಂಸ್ಕಾರ ಮನದೊಳಗೆ ಬೇರೂರಿ ಕೂತಿದೆ. ಇಲ್ಲಿ ಪುಣೆಯಲ್ಲಿ ಮನೆ ಕಟ್ಟುವ ಹೊಸ ವಸತಿಯ ಜನರಿಗೆ ತಮಿಳು ನಾಣ್ಣುಡಿ ಗೊತ್ತಿರಲಿಕ್ಕಿಲ್ಲ. ಆದರೆ ಆ ನಾಣ್ಣುಡಿಯ ಹಿಂದಿನ ಸಂಸ್ಕಾರ ಮಾತ್ರ ಅವರ ಮನದಲ್ಲಿ ವಿಶೇಷವಾಗಿ ಮೂಡಿದೆ."

"ಸಂಸ್ಕಾರ ಎಂದರೇನು? ಅದರ ರೂಪವೇನು?" ಮರಳಿ ಪ್ರಶ್ನೆ ಬಂತು.

ನಾನು ಯೋಚನೆಯಲ್ಲಿ ಮುಳುಗಿದೆ. ನನ್ನ ವಿದ್ವತ್ತನ್ನು ತೋರಿಸುವ ಅವಕಾಶ ಬಂದಿದೆ ಎಂದು ಅರಿವಾಯಿತು. ನಾನು ಹೇಳಲಾರಂಭಿಸಿದೆ :

"ಕಳೆದ ವರ್ಷ ನಾನೊಂದು ಹಳೆಯ ಪುಸ್ತಕ ಓದುತ್ತಿದ್ದೆ. ಅದು ೧೩ನೆಯದೋ, ೧೪ನೆಯದೋ ಶತಮಾನದ್ದಿರಬೇಕು. ಸಂಸ್ಕೃತದಲ್ಲಿ ಬರೆದದ್ದು. ಸಂಪೂರ್ಣ ಪುಸ್ತಕ ನಗರ ರಚನೆ ಮತ್ತು ಗೃಹಗಳ ರಚನೆಯ ಕುರಿತಾಗಿರುವದರಿಂದ ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಆದರೆ ಅದರಲ್ಲಿದ್ದ ಕೆಲ ವಿಷಯ ಅರಿವಾಯಿತು. ನಗರ ರಚನೆಗಾಗಿ ಮೊದಲಿಗೆ ದಿಕ್ಕು ನಿಶ್ಚಯ ಮಾಡಿ ಒಂದು ಚೌಕೋನ ರೂಪಿಸಲಾಯಿತು. ಆ ಚೌಕೋನದ ಬದಿಗೆ ಸರಿಯಾಗಿ ಎಂಟು ಭಾಗ ಮಾಡಿ ಮತ್ತೆ ೬೪ ಚೌಕೋನಗಳ ಒಳಗೆ ರಚಿಸಲಾಯಿತು. ಒಂದೊಂದು ಚೌಕೋನಿಗೆ ಒಬ್ಬೊಬ್ಬ ದೇವರ ಹೆಸರು ನೀಡಲಾಯಿತು. ಎಲ್ಲಕ್ಕಿಂತ ದೊಡ್ಡ ದೇಗುಲ ಮತ್ತು ಅದರ ಅಂಗಳ ಮಧ್ಯದಲ್ಲಿತ್ತು. ಅನಂತರ ರಾವುಳ ಎಂದರೆ ರಾಜಕುಲದವರು ವಾಸಿಸುವ ಮನೆ. ಬಳಿಕ ರಾಜನ ಸರದಾರ ಮುಂತಾದವರ ದೊಡ್ಡ ವಾಡೆಗಳಿರುವ

ರಸ್ತೆ. ಅನಂತರ ಅತ್ಯಂತ ಧನಿಕ ವ್ಯಾಪಾರಿಗಳು, ಮುತ್ತು – ರತ್ನದ ವ್ಯಾಪಾರಿಗಳು ಮುಂತಾದವರಿಂದ ಆರಂಭಗೊಂಡು ತರಕಾರಿ, ಉಪ್ಪು – ಮಸಾಲೆ ಮಾರುವವರ ಅಂಗಡಿಗಳು, ಮಧ್ಯಮ ವರ್ಗದ ಅಂಗಡಿಗಳು, ನಗರದ ಚೌಕೋನಿನ ಹೊರಗೆ ಅಸ್ಪೃಶ್ಯರ ಮನೆಗಳು ಮತ್ತು ಅಲ್ಲಿಂದ ದೂರದಲ್ಲಿ ನಗರ ರಚನೆ ಮಾಡುವ ಸ್ಥಪತಿ ಮತ್ತು ಆಚಾರಿಗಳ ಮನೆಗಳು – ಈ ರೀತಿ ಆಲೇಖವನ್ನು ನೀಡಲಾಗಿದೆ.

ನಗರದಲ್ಲಿ ಎಲ್ಲೆಲ್ಲಿ ಏನಿದೆ ಎಂದು ಹೇಳುವಾಗ ಆ ಚೌಕೋನದಲ್ಲಿಯ ದೇವರ ದೇಗುಲದ ಉಲ್ಲೇಖ ಬರುತ್ತದೆ. ಅಂದರೆ ಎಂಥ ಜಾಗ ಎಂಬ ಬಗೆಗೆ ಉಲ್ಲೇಖ ಬರುತ್ತದೆ. ಅದು ಖಚಿತವಾಗಿ ಗೊತ್ತಾಗುತ್ತದೆ. ದೇವರ ಮತ್ತು ದೇಗುಲದ ಸ್ಥಾನ ನಿಶ್ಚಯದ ಬಗೆಗೆ ಈ ರೀತಿಯಲ್ಲಿ ಮಾಡಿದ ಉಪಯೋಗ ನನಗೆ ಹೊಸದಾಗಿತ್ತು. ಆದರೆ ಗಮನಕ್ಕೆ ಬಂದ ವಿಷಯವೇನೆಂದರೆ, ದೇವರನ್ನು ಸ್ಥಾಪತ್ಯಶಾಸ್ತ್ರವು ನಿರ್ಮಿಸಿದೆ, ಮೊದಲೇ ಅಸ್ತಿತ್ವದಲ್ಲಿದ್ದ ದೇವರನ್ನು ಸ್ಥಾನ ನಿಶ್ಚಯಕ್ಕಾಗಿ ಈ ಗ್ರಂಥಕಾರನು ತುಂಬ ಜಾಣತನದಿಂದ ಉಪಯೋಗ ಮಾಡಿಕೊಂಡಿದ್ದಾನೆ. ಈ ಗ್ರಂಥದಲ್ಲಿ ಯಾರ ಮನೆ ಎಲ್ಲಿರಬೇಕೆಂದು ಹೇಳಲಾಗಿದೆಯಲ್ಲದೆ, ಒಂದೊಂದು ಗಲ್ಲಿಯ ಮನೆಗಳ ಎತ್ತರ ಒಂದೇ ರೀತಿಯಲ್ಲಿರಬೇಕೆಂದು ಹೇಳಿ, ಯಾವ ಗಲ್ಲಿಯವರ ಮನೆಗಳು ಎಷ್ಟು ಎತ್ತರ ಎಂದರೆ, ಎಷ್ಟು ಅಂತಸ್ತಿನದಿರಬೇಕೆನ್ನುವದನ್ನು ಹೇಳಲಾಗಿದೆ. ಊರ ನಟ್ಟನಡುವೆಯಿರುವ ದೇಗುಲ ಎಲ್ಲಕ್ಕಿಂತ ಎತ್ತರವಾಗಿರಬೇಕೆಂದು ಹೇಳಲಾಗಿದೆ.

ರಾಜವಾಡೆಯು ದೇಗುಲದ ಶಿಖರಕ್ಕಿಂತ ಕಡಿಮೆ ಎತ್ತರವಾಗಿರಬೇಕು, ರಾಜವಾಡೆಗಿಂತ ಕಡಿಮೆ ಎತ್ತರದಲ್ಲಿ ಬ್ರಾಹ್ಮಣರ ಮನೆಗಳಿರಬೇಕೆಂಬ ನಿಯಮ ಹಾಕಲಾಗಿದೆ. ಬ್ರಾಹ್ಮಣರು ತಮ್ಮನ್ನು ಎಷ್ಟೇ ಶ್ರೇಷ್ಠರು ಎಂದು ಭಾವಿಸಿದರೂ, ವಿಷ್ಣುವಿನ ಪ್ರತಿನಿಧಿಯಾದ ರಾಜನ ಗೌರವ ಸದಾಕಾಲ ಶ್ರೇಷ್ಠವೇ ಆಗಿತ್ತು. ಮತ್ತು ಪ್ರತಿನಿಧಿಗಿಂತ ಪ್ರತ್ಯಕ್ಷ ದೇವರ ಸ್ಥಾನಮಾನ ಎಲ್ಲರಿಗಿಂತ ಶ್ರೇಷ್ಠ. ಪ್ರಯಾಣಿಕನಿಗೆ ದೂರದಿಂದ ದೇಗುಲದ ಶಿಖರ ಕಂಡಕೂಡಲೇ ಊರು ಬಂತು ಎಂದು ತಿಳಿಯಬೇಕು. ದೇಗುಲದ ಶಿಖರ ಊರ ಅಸ್ತಿತ್ವದ, ವೈಭವದ ಮತ್ತು ಅಭಿಮಾನದ ಗುರುತು ಮಹಾರಾಷ್ಟ್ರದಲ್ಲಿ ಬೆಟ್ಟದ ಮೇಲಿನ ದೇಗುಲ ಬಿಟ್ಟರೆ, ಊರಿನ ಸಪಾಟು ನೆಲದ ಮೇಲೆ ಕಟ್ಟಿದ ದೇಗುಲ ಇಷ್ಟು ಭವ್ಯವಿಲ್ಲ. ಆದರೆ ದಕ್ಷಿಣದಲ್ಲಿ ಮಾತ್ರ ಇಂದಿಗೂ ಹೀಗೆ ಎತ್ತರ ಮತ್ತು ಅತೀ ಭವ್ಯವಾಗಿರುವ ದೇವಾಲಯಗಳು ಕಾಣುತ್ತವೆ. ಮಧುರೆಯ ಮೀನಾಕ್ಷಿ ದೇವಾಲಯದ ಗೋಪುರವು ಎಷ್ಟು ಎತ್ತರವಿದೆ ಎಂದರೆ ಅದು ಐದು–ಹತ್ತು ಮೈಲುಗಳ ಅಂತರದಿಂದಲೂ ಕಾಣುತ್ತದೆ. ಕ್ರೈಸ್ತರ ದೇವಾಲಯಗಳನ್ನೂ ಇದೇ ರೀತಿಯಲ್ಲಿ ಕಟ್ಟಲಾಗಿದೆ. ಮೇಲಿನ ಗ್ರಂಥದಲ್ಲಿ ನೀಡಿದಂತೆ ದೇವ ಮತ್ತು ದೇಗುಲಗಳ ಸ್ಥಳನಿಶ್ಚಿತಿಗಾಗಿ ಇದು ಉಪಯುಕ್ತವಾಗಿದೆ. ಪುಣೆಯಲ್ಲೂ ಹಿಂದೆ ದೇಗುಲಗಳ ಉಪಯೋಗ ಹಾಗಾಗುತ್ತಿತ್ತು. ಭಾಂಗ್ಯಾ ಮಾರುತಿ, ಪಾಸೋಡ್ಯಾ ವಿಠೋಬಾ ಅಂತೂ ಇದ್ದೇ ಇತ್ತು. ಆದರೆ ಪೇಶ್ವೆಯರ ವಸತಿಯಲ್ಲೂ 'ಛಿನಾಲ್ ಮಾರುತಿ ಸಹ ಇತ್ತು.' "ಕೇವಲ ಈ ಕಾರಣಕ್ಕಾಗಿ ಮಾತ್ರ ದೇಗುಲ ಇತ್ತೇ? ದೇಗುಲ ಇತ್ತೆಂದರೆ ನಮ್ಮ ಮನೆಯ ಗುರುತು ಮತ್ತು ವಿಳಾಸವನ್ನು ಸರಿಯಾಗಿ ಕೊಡಬಹುದೆಂದು ನಮ್ಮ ಭಾವನೆಯೆ?"

"ಹಾಗಲ್ಲ. ದೇಗುಲ ಒಂದು ಶ್ರದ್ಧಾಸ್ಥಾನ, ಆಸೆ–ಆಕಾಂಕ್ಷೆಗಳ ಪ್ರತೀಕ. ಯಾವ ಊರಲ್ಲಿ ಅದು ಇರುವದಿಲ್ಲವೋ ಅದೊಂದು ಶ್ರದ್ಧೆಯಿರದ, ಯಾವುದೇ ಬಗೆಯ ಸಾಮುದಾಯಿಕ ಆಕಾಂಕ್ಷೆಯಿಲ್ಲದ ತಾಣವಾಗಿರುತ್ತದೆ. ಹೀಗಾಗಿ ಅಂಥಲ್ಲಿ ವಾಸಿಸಬಾರದು ಎಂಬ ಭಾಷ್ಯವನ್ನು ಈ ನಾಣ್ಣುಡಿಯ ಬಗೆಗೆ ಮಾಡಬೇಕಾಯಿತು."

"ದೇಗುಲವೆಂದರೆ ನಿನ್ನ ಮನದೊಳಗೆ ಇರುವದಾದರೂ ಏನು? ಯಾವುದು ಇಲ್ಲವೋ, ಆ ದೇವರಿಗಾಗಿ ಕಟ್ಟಿದ ಕಟ್ಟಡವೆಂದರೆ ದೇಗುಲವೇ? ಅದು ಯಾವುದರ ಪ್ರತೀಕವಾಗಿತ್ತು?"

"ಒಂದು ರೀತಿಯಲ್ಲಿ ನೀನು ಹೇಳಿದ್ದು ಸತ್ಯ. ದೇಗುಲದಲ್ಲಿ ಆ ರೂಪಕ್ಕೆ ರೂಪ ನೀಡಲಾಗುತ್ತದೆ. ಅನಾದಿಯ ಪ್ರಾಣ ಪ್ರತಿಷ್ಠೆ ಮಾಡಲಾಗುತ್ತದೆ. ಒಮ್ಮೊಮ್ಮೆ ಅನಂತರ ವಿಸರ್ಜನೆಯನ್ನೂ ಮಾಡುತ್ತಾರೆ. ತಾನು ಯಾವುದು ಅಲ್ಲವೋ, ಆದರೆ ತಮಗೆ ಯಾರ ಅಸ್ತಿತ್ವದ ಅರಿವು ಇದೆಯೋ, ಅಂಥದ್ದು ಏನಾದರೂ ಸತ್ ಎನ್ನುವದಿರಬೇಕು. ನಮ್ಮ ಆರ್ತತೆಯಲ್ಲಿ ಆ ಸತ್‌ಗೆ ನಾವು ಬೇರೆ ಬೇರೆ ರೂಪ ನೀಡುತ್ತೇವೆ. ಅದೇ ದೇವರು ಯಾವ ಬೇಡಿಕೆಯನ್ನು ಮಾನವನ ಎದುರಿಗೆ ಮಾಡುವದು ಸಾಧ್ಯವಿಲ್ಲವೋ, ನಾವದನ್ನು ದೇವರೆದುರಿಗೆ ಮಾಡುತ್ತೇವೆ. ಶಾಶ್ವತ ಆಸರೆಯನ್ನು ಬೇಡುತ್ತೇವೆ; ನ್ಯಾಯ ಬೇಡುತ್ತೇವೆ, ಆಧಾರ ಬೇಡುತ್ತೇವೆ, ಶಾಂತಿ ಬೇಡುತ್ತೇವೆ... ಅಥವಾ ಬೇರೆ ಬೇರೆ ಪ್ರಾಸಂಗಿಕ ಬೇಡಿಕೆ ಸಲ್ಲಿಸುತ್ತೇವೆ. ಕೊನೆಗೆ ಏನೂ ಇಲ್ಲದಿದ್ದರೂ ಸಂಸಾರದ ಜಂಜಾಟದಲ್ಲಿ ಗಳಿಗೆಯ ನೆಮ್ಮದಿ ಸಿಗಲೆಂದು ದೇಗುಲಕ್ಕೆ ಹೋಗುತ್ತೇವೆ. ಕೆಲವರಿಗೆ ಈ ಆಧಾರ ಇಷ್ಟವಾಗುವದಿಲ್ಲ. ಕೆಲವರಿಗೆ ಇಂಥ ಆಧಾರ ಬೇಕೆನಿಸುತ್ತದೆ. ತಮಗಿಂತಲೂ ಶ್ರೇಷ್ಠವಾದುದು ಏನೋ ಇದೆ ಎಂದೆನಿಸುತ್ತದೆ. ಅದರ ಪ್ರತೀಕವೇ ದೇಗುಲ!"

"ದೇವಾಲಯದ ಎತ್ತರ ಮತ್ತು ಭವ್ಯತೆಯ ಬಗೆಗೆ ನೀನು ವರ್ಣಿಸುತ್ತಿದ್ದೆ. ಆದರೆ ರಾಜವಾಡೆ ತಾಜಮಹಲ ಭವ್ಯವಾಗಿಲ್ಲವೇ? ಅವು ಸಹ ಯಾವುದರದೋ ಭವ್ಯತೆಯ ಪ್ರತೀಕ ಅಲ್ಲವೇ?"

"ಕೇವಲ ಭವ್ಯವಷ್ಟೇ ಅಲ್ಲ, ಸುಂದರವಾಗಿಯೂ ಇವೆ. ಆದರೆ ಅವು ಉಪಾಸನೆಯ ಸ್ಥಾನವಾಗಲಾರವು. ಶೈಕ್ಷಣಿಕ ಸಂಸ್ಥೆಗಳು ಭವ್ಯ–ದಿವ್ಯದ ಪ್ರತೀಕವಾಗಬಹುದು ಎಂಬ ಹುಚ್ಚು ಕಲ್ಪನೆಯನ್ನು ಕೆಲವರು ಹೊತ್ತಿದ್ದರು. ಆದರೆ ಅವು ಹಾಗಾಗಲಿಲ್ಲ. ಉಳಿದವರ ದೇವಾಲಯಗಳನ್ನು ಒಡೆಯುವ ಧರ್ಮಗಳಿವೆ, ಸ್ವಂತ ದೇವಾಲಯಗಳನ್ನು ಭಿನ್ನ–ಭಿನ್ನವನ್ನಾಗಿ ಮಾಡಿ ಭೂತಕಾಲದ ತಮ್ಮ ಸಂಬಂಧವನ್ನು ಕಡಿದುಕೊಳ್ಳುವ ಜನರೂ ಇದ್ದಾರೆ. ಇಂಥ ಕಾಲಕ್ಕೆ ದೇಗುಲವಿಲ್ಲದೆ ಇರಬಾರದು ಎನ್ನುವವನು ಹುಚ್ಚನೆನಿಸುತ್ತಾನೆ. ಆದರೂ ಹಲವರ ಮನದೊಳಗೆ ಈ ಭಾವನೆಯಿದೆ. ಅಲ್ಲಿ ದೇಗುಲದ ಭವ್ಯತೆಗೆ, ಸೌಂದರ್ಯಕ್ಕೆ ಎರಡನೇ ಸ್ಥಾನವಿದೆ. ಒಳಗಿನ ಮೂರ್ತಿಗೆ ಅದರ ಸುತ್ತಲೂ ಸಂಗ್ರಹಗೊಂಡ ಶತಮಾನಗಳ ಆರ್ತತೆಯ, ಕಾರುಣ್ಯದ, ಶಾಂತಿಯ, ಪಾವಿತ್ರ್ಯದ ಭಾವನೆಗಳಿವೆ. ತಾಜಮಹಲ ಅಥವಾ ಜೈಪುರದ ರಾಜವಾಡೆಯನ್ನು ಕಂಡಾಗಿನ ಭಾವನೆ ಮತ್ತು ಪಂಡರಾಪುರದ ವಿಠ್ಠಲನ ಮೂರ್ತಿಯನ್ನು ಕಂಡಾಗಿನ ಭಾವನೆ ತೀರ ಭಿನ್ನ ಭಿನ್ನವಾದುವು. ಎಲ್ಲಿ ದೇಗುಲ ಇಲ್ಲವೋ ಅಲ್ಲಿ ಭಾವನೆಯೂ ಇಲ್ಲ, ಆದ್ದರಿಂದ ಅಂಥಲ್ಲಿ ಇರಬಾರದು ಎಂದು ತಮಿಳು ಜನ ಹೇಳುತ್ತಿರಬೇಕು." "ಡ್ರೈನೇಜ್, ಅಂಗಡಿಗಳು, ಸ್ವಚ್ಛ ವಸತಿಗಳೂ, ರಸ್ತೆಗಳು, ಆಸ್ಪತ್ರೆಗಳು – ಇವೆಲ್ಲ ಊರಿಗೆ ಅಗತ್ಯವಾದುವು. ಹಾಗೆಯೇ, ಉದ್ಯಾನ ಮತ್ತು ಮನರಂಜನೆಯ ಸಾಧನೆಗಳೂ ಬೇಕು. ಶಾಲೆ ಕಾಲೇಜು ವಾಚನಾಲಯವೂ ಬೇಕು. ಆದರೆ ದೇವಾಲಯದ ಉಪಯೋಗವೇನು? ಉಳಿದ ಸಂಗತಿಗಳಿಂದ ಮನುಷ್ಯನ ಆಯುಷ್ಯ ಸಹನೀಯವಾಗುತ್ತದೆ. ದೇವಾಲಯದಿಂದ ಏನಾಗುತ್ತದೆ?"

"ಜಗತ್ತಿನ ಎಲ್ಲ ಶ್ರೇಷ್ಠ ವಸ್ತುಗಳು ಸಿಕ್ಕಿದೆ ಎಂದಾಕ್ಷಣ, ಮತ್ತೆ ಬೇರೆ ಏನೂ ಬೇಕಾಗಿಲ್ಲ ಎಂದೇನೂ ಅಲ್ಲ. ಎಲ್ಲ ಸಿಕ್ಕರೂ ಮತ್ತೇನೋ ಬೇಕೆನಿಸುತ್ತದೆ. ದೇಹದ ಸ್ವಾಸ್ಥ್ಯದ ಆಚೆಗೂ ಏನೋ ಇದೆ ಎಂದು ನಮಗನಿಸುತ್ತದೆ. ಎಲ್ಲ ಮಾನವರು ಸುಖಿಗಳಾದರೂ, ಆಯುಷ್ಯದಲ್ಲಿ ಏನಾದರೂ ಪ್ರಶ್ನೆ ಇದ್ದೇ ಇರುತ್ತದೆ. ಬಡವರೇ ಇಲ್ಲದಿದ್ದರೆ, ಅವರ ಸ್ಥಿತಿಯನ್ನು ಸುಧಾರಿಸುವ ಜನರ ಗತಿಯೇನು? ಅಜ್ಞಾನಿಗಳೇ ಇಲ್ಲದಿದ್ದರೆ ಅವರನ್ನು ಸುಜ್ಞಾನಿಗಳನ್ನಾಗಿ ಮಾಡುವ ಪ್ರಯತ್ನದ ಗತಿಯೇನು? ಹಾಗೆ ಇದು ಉದ್ಧಟತನದ ಪ್ರಶ್ನೆಯಲ್ಲ. ಮನುಷ್ಯನಲ್ಲಿ ಧ್ಯೇಯ ಇರಬೇಕೆಂದೂ, ದೇವರು ಜಗತ್ತಿನಲ್ಲಿ ಅಪೂರ್ಣತೆಯನ್ನು ಇರಿಸಿದ್ದಾನೆಂದೂ ಅಲ್ಲ. ಜಗತ್ತಿನಲ್ಲಿ ಪೂರ್ಣತೆಯಿದ್ದರೂ, ಏನೋ ಕೊರತೆಯಿದೆ ಎಂದು ಅನಿಸುತ್ತಲೇ ಇರುತ್ತದೆ. ಅದನ್ನು ಪೂರ್ತಿ ಮಾಡುವ ಇಚ್ಛೆಯ ಪ್ರತೀಕವೇ ದೇಗುಲ."

ನನ್ನ ಮನದೊಳಗೆ ಹೊಸದಾಗಿ ಏನೋ ಯೋಚನೆ ಬಂತು. ನಾನಂದೆ, "ನಮ್ಮ ಸಂತರು ದೇಹಕ್ಕೆ 'ದೇಹಗಾಂವ' ಎಂದಿದ್ದಾರೆ. ಈ ಊರಲ್ಲೂ ಸಹ ದೇಗುಲ ಅಥವಾ ದೇವರು ಇರಲೇಬೇಕು ಎಂದವರು ಪ್ರತಿಪಾದಿಸುತ್ತಿದ್ದರು. ಹೊರಗಿನ ಊರೊಳಗೆ ದೇವರು ಇಲ್ಲದಿದ್ದರೂ ನಡೆದೀತು, ಆದರೆ

## ದುರಂತ

ಮೊದಮೊದಲು
ಅವನೊಬ್ಬ ವಿಚಾರವಂತ!
ಬರುಬರುತಾ
ಅವನೊಬ್ಬ ಚಿಂತಕನಾದ!
ಬೆಳೆದಂತೆ ಬೆಳೆದಂತೆ
ಅವನೊಬ್ಬ ನಕ್ಸಲೈಟ್
ಆದದ್ದು ಮಾತ್ರ
ಘೋರ ದುರಂತ

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೫೬೦ ೦೭೩

ಅಂತರಂಗದಲ್ಲಿ ಇರಲೇಬೇಕು ಎನ್ನುವದು ಅವರ ಭಾವನೆಯಾಗಿತ್ತು. ಬದುಕಿನಲ್ಲಿ ಸಿಗಬಹುದಾದ್ದೆಲ್ಲವೂ ಸಿಕ್ಕಾಗ, ಮನಸ್ಸು ಮಾತ್ರ ಯಾತಕ್ಕೂ ಚಡಪಡಿಸುತ್ತಲೇ ಇರುತ್ತದೆ. ಯಾವುದೋ ಅಶಾಂತಿ ಮನವನ್ನು ಕೊರೆಯುತ್ತಲೇ ಇರುತ್ತದೆ. ಯಾವುದೋ ಕಾರಣದಿಂದಾಗಿ ನಿರಾಧಾರ ಎನಿಸುತ್ತಿರುತ್ತದೆ."

ನನ್ನ ಮಾತನ್ನು ಅರ್ಧಕ್ಕೇ ತಡೆದು ಅವಳು ಕೇಳಿದಳು, "ನೀನು ಹೇಳುವದು ಸಾವಿನ ಅರಿವಿನಿಂದ ಬಂದದ್ದೇ ? ತೀರ ಸುಖದಲ್ಲಿ ಮುಳುಗಿದರೂ ಸುಖಕ್ಕೆ ಅಂತ್ಯವಿದೆ ಎನ್ನುವದು ಕಾಡುತ್ತಿರುತ್ತವೆ. ಎಂಥ ಪ್ರಾಣಮಿತ್ರನಿದ್ದರೂ ತಾನು ಒಂಟಿಯಾಗಿಯೇ ಇರಬೇಕಾಗುತ್ತದೆ, ಒಂಟಿಯಾಗಿಯೇ ಹೋಗಬೇಕಾಗುತ್ತದೆ ಎಂಬ ಭೀತಿ ಮನುಷ್ಯನನ್ನು ಆವರಿಸಿಕೊಂಡಿರುತ್ತದೆ. ಮನದ ಚಡಪಡಿಕೆ, ಅಶಾಂತಿ, ಅಸಹಾಯಕತೆ ಎಲ್ಲವೂ ಹುಟ್ಟುವುದು ಇದರಿಂದಲೇ ಇರಬೇಕು. ಹೃದಯದೊಳಗಿನ ದೇವರನ್ನು ಹುಡುಕಲು, ಅವನ ಬಗೆಗಿನ ತೃಷೆಯ ಒದ್ದಾಟವಾಗಿರಲಿಕ್ಕಿಲ್ಲ."

"ಹೌದು. ಎರಡೂ ಬಗೆಯ ಜನರಿದ್ದಾರೆ. ಕೆಲವರು ಅಂತರಂಗದಲ್ಲಿ ದೇವರನ್ನು ಹುಡುಕುತ್ತಿರುತ್ತಾರೆ. ಜೀವನದ ಅರ್ಥವನ್ನೂ ಹುಡುಕುತ್ತಿರುತ್ತಾರೆ. ಜೀವನ ಸಂಪೂರ್ಣ ಅರ್ಥಹೀನ. ಆದರದನ್ನು ಸಾಧ್ಯವಾದಷ್ಟು ಸುಸಹ್ಯವನ್ನಾಗಿ ಮಾಡಬೇಕು, ಗೌರವದಿಂದ ಬದುಕಬೇಕು ಮತ್ತು ಇತರರನ್ನು ಎಚ್ಚರಿಸ ಬೇಕೆಂಬ ಉದ್ದೇಶದಿಂದಲೂ ಕೆಲವರು ಬದುಕುತ್ತಿರುತ್ತಾರೆ. ಒಂದು ದೃಷ್ಟಿಯಲ್ಲಿ ಈ ಧ್ಯೇಯವಾದಿಗಳಿಗೆ ಯಾವುದಾದರೂ ದೇವರು ಸಿಕ್ಕಿರುತ್ತಾನೆ. ಕೆಲವರಿಗೆ ಈ ಧ್ಯೇಯವಾದವಿರುವದೇ ಇಲ್ಲ. ಅವರು ತಮ್ಮದೇ, ಕೇವಲ ತಮ್ಮದೇ ಜೀವನವನ್ನು ಸಾಗಿಸುತ್ತಿರುತ್ತಾರೆ. ಜಗತ್ತಿನಲ್ಲಿ ಏನೇನು ಲಭಿಸುತ್ತದೆಯೋ ಅದನ್ನೆಲ್ಲ ಪಡೆಯುತ್ತಿರುತ್ತಾರೆ. ಕೊನೆಗೊಂದು ದಿನ, ಒಂದು ಕ್ಷಣ ಒಂಟಿತನದ ಅಸಹಾಯಕತೆಯ ಮತ್ತು ನಿಷ್ಫಲತೆಯ ಅರಿವು ಅದೆಷ್ಟು ತೀವ್ರವಾಗಿ ಕಾಡುತ್ತದೆ ಎಂದರೆ, ಅವರಿಗೆ ಬದುಕುವದೇ ಅಸಾಧ್ಯವಾಗಿ ಜೀವ ಕಳೆದುಕೊಳ್ಳುತ್ತಾರೆ."

ಬಾಳ ಮತ್ತು ಪುಟ್ಟಿಯ ವಿಷಯ ನಿನಗೆ ಗೊತ್ತಿರಬಹುದು. ಎಂಥ ಉತ್ಸಾಹವುಳ್ಳ ಮಕ್ಕಳಾಗಿದ್ದರು ಅವರು ! ಅವರಿಗೆ ಯಾವುದಕ್ಕೂ ಕೊರತೆಯಿರಲಿಲ್ಲ. ಅವರಿಬ್ಬರದ್ದೂ ಅಸೂಯೆ ಮೂಡಿಸುವಂತಹ ಪರಿಸ್ಥಿತಿ ! ಇಬ್ಬರೂ ರಸಭರಿತವಾಗಿ ಬದುಕುತ್ತಿದ್ದರು. ಒಬ್ಬನು ವಿದೇಶಕ್ಕೆ ಹೋಗಿ, ಕುಟುಂಬದಿಂದ ದೂರ ಹೋಗಿ, ಒಂಟಿಯಾದ, ಕೊನೆಗೆ ಜೀವ ತೊರೆದ. ಅನಂತರ ತಂದೆಗೆ ಪತ್ರ ಬರೆದ...

ಮತ್ತೊಬ್ಬಳು ತುಂಬಿದ ಮನೆಯಲ್ಲೇ ಜೀವ ಕೊಟ್ಟಳು. ಕೊನೆಯ ಪತ್ರದಲ್ಲಿರುವ ಅಸಹಾಯಕತೆ ಮತ್ತು ಒಂಟಿತನ ಜೀವ ಹಿಂಡುವಂತಹುದಾಗಿತ್ತು. ಆದರೆ ಸಾಮಾನ್ಯರಿಗೆ ಅರ್ಥವಾಗುವಂತಹದಲ್ಲ. ಅಮ್ಮ, ಸೋದರ-ಸೋದರಿ, ಗಂಡ, ಮಕ್ಕಳು, ಸಂಪತ್ತು, ಶಿಕ್ಷಣ, ರೂಪ, ಗೆಳೆಯರ ಬಳಗ ಎಲ್ಲವೂ ಇತ್ತು. ಹಾಗಾದರೆ ಈ ಒಂಟಿತನ ಏಕೆ ? ಹಿಂದೆ ಉಳಿದವರನ್ನು ನಿರಂತರವಾಗಿ ಅಪರಾಧಿಗಳನ್ನಾಗಿ ಮಾಡಿ ಈ ಜೀವ ಹೊರಟುಹೋಯಿತು. ಏಕೆ ?

"ನಾನು ಈ ಪ್ರಶ್ನೆಗಳನ್ನು ಎಷ್ಟೋ ವರುಷಗಳಿಂದ ಕೇಳುತ್ತ ಬಂದಿದ್ದೇನೆ. ನನಗೆ ಈಗ ಅನಿಸುವದೇನೆಂದರೆ, ಅವರ ಊರಲ್ಲಿ ದೇವರೂ ಇರಲಿಲ್ಲ, ದೇಗುಲವೂ ಇರಲಿಲ್ಲ. ಒಂದು ಕ್ಷಣ ತುಂಬಿದ ಕುಟುಂಬದಲ್ಲಿ ಈ ನಿರಾಧಾರತನದ ಭಾವನೆ ತೀವ್ರಗೊಂಡಿರಬೇಕು."

ಒಂದು ಕ್ಷಣದ ಪುರಸೊತ್ತು ನೀಡದೆ ಪ್ರಶ್ನೆ ಬಂತು : "ಹಾಗಾದರೆ ಜ್ಞಾನದೇವ ಏಕೆ ತೀರಿಕೊಂಡರು ? ಅವರಂತೂ ದೇವರ ಹೊರತು ಬದುಕಿರಲೇ ಇಲ್ಲವಲ್ಲ ?" ಅಷ್ಟೇ ವೇಗದಿಂದ ನಾನು ಉತ್ತರಿಸಿದೆ : "ಅವರ ದೇವರು ಮತ್ತು ದೇಗುಲ ಅದೆಷ್ಟು ಬೆಳೆದು ದೊಡ್ಡವರಾದರೆಂದರೆ, ಆ ಚಿಕ್ಕ ದೇಹದೊಳಗೆ ಹಿಡಿಸುವದೇ ಅಸಾಧ್ಯವಾಯಿತು. ದೇಹದ ಬಂಧನ ಅವರಿಗೆ ಅಶಕ್ಯವೆನಿಸಿತು. ದೇಹದಲ್ಲಿ ಇದ್ದೇ ದೇವರಷ್ಟು ದೊಡ್ಡದಾಗುವದು ಸಾಧ್ಯವೇ ಇರಲಿಲ್ಲ. ಆದ್ದರಿಂದ ಅವರು ಹೋದರು."

ಇಬ್ಬರ ಸಂಭಾಷಣೆಯ ಸೂತ್ರ ತುಂಡಾಯಿತು. ನಾವಿಬ್ಬರೂ ನಮ್ಮ ನಮ್ಮದೇ ಯೋಚನೆಯಲ್ಲಿ ಸಿಲುಕಿಕೊಂಡೆವು. ನನ್ನ ಮನಸ್ಸು ಒಂದು ಒಗಟನ್ನು ಬಿಡಿಸುತ್ತಿತ್ತು.

ಸಂಭಾಷಣೆಯ ಆವೇಗದಲ್ಲಿ ಬಾಳ, ಪುಟ್ಟಿ ಮತ್ತು ಜ್ಞಾನದೇವ – ಇಂಥ ಸಂಪೂರ್ಣ ಭಿನ್ನವಾಗಿರುವ ಮನುಷ್ಯರು ಒಂದೇ ಕಡೆ ಪೋಣಿಸಲ್ಪಟ್ಟರು. ಎಲ್ಲರೂ ಇಪ್ಪತ್ತೈದರ ಒಳಗೆ ಪ್ರಾಣಬಿಟ್ಟಿದ್ದರು. ಇದಿಷ್ಟೇ ಅವರಲ್ಲಿ ಇರುವ ಸಾಮ್ಯವೇ ? ಆ ಸಾಮ್ಯದ ಬೆನ್ನಿಗೇ ಅರಿವಿನ ತೀವ್ರತೆ ಮತ್ತು ಅರಿವು ಮೂಡಿದಾಕ್ಷಣ ಆ ರೀತಿ ಕೃತಿ ಮಾಡುವ ಅವಸರ, ಇದೂ ಇತ್ತಲ್ಲವೇ ? ಮೂವರೂ ಓಡುತ್ತ ಹೋಗಿ ಸಾವನ್ನು ಅಪ್ಪಿಕೊಂಡಿದ್ದರು.

... ಮತ್ತು ನಾವು ಉಳಿದವರು ? ನಮ್ಮೂರಲ್ಲೂ ದೇವರಿದ್ದಾನೆಯೇ ಎಂಬ ಯೋಚನೆಯನ್ನು ಎಂದಾದರೂ ಮಾಡಿದ್ದೇವೆಯೇ ? ರಿಕ್ತವಾಗಿದ್ದೇವೆಯೋ, ತುಂಬಿದವರಾಗಿದ್ದೇವೆಯೋ, ಎಂಬ ಪ್ರಶ್ನೆ ನಮ್ಮನ್ನು ಎಂದಾದರೂ ಕಾಡಿದೆಯೇ ? ಹುಟ್ಟಿದಾಗಿನಿಂದಲೂ ಜೀವಂತವಾಗಿ ವ್ಯವಹರಿಸುತ್ತಿದ್ದೇವೆ – ಮೆಲ್ಲಗೆ ವಿಚಾರ ರಹಿತವಾದ ದಾರಿಯನ್ನು ತುಳಿಯುತ್ತಿದ್ದೇವೆ, ಸಾವು ಎದೆಗೆ ಬಂದು ಅಪ್ಪಳಿಸುವವರೆಗೆ "ಏನಾಗುತ್ತಿದೆ ನಿನಗೆ ?" ನನ್ನ ನಿಟ್ಟುಸಿರು ಕೇಳಿ ಅವಳು ಚಿಂತೆಯಿಂದ ಕೇಳಿದಳು. ನನ್ನ ಅನಂತ ರಿಕ್ತತನದಿಂದ ಉತ್ತರ ಹೊರಬಿತ್ತು : "ಏನೂ ಇಲ್ಲ. ಖಂಡಿತವಾಗಿಯೂ ಏನೂ ಇಲ್ಲ."

ಮರಾಠಿ ಮೂಲ : **ಇರಾವತಿ ಕರ್ವೆ**   ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**
೧೦೫ ಸಿ, ಸಪ್ತಗಿರಿ ಮಹರ್ಷಿ ರೆಸಿಡೆನ್ಸಿ, ೧೦ನೇ 'ಕೆ' ಕ್ರಾಸ್, ನಾಗವಾರಪಾಳ್ಯ, ಸಿ. ವಿ. ರಾಮನ್‌ನಗರ, ಬೆಂಗಳೂರು–೯೩

ಕಾವ್ಯಲೋಕ



# ಬೆಳಕು ಕತ್ತಲು ಮತ್ತು ನಾನು

ಬೆಳಕಾಡುತಿತ್ತು
ಕರವಿಡಿದು ನನ್ನ ಜೊತೆ
ಸುಮಾರು ದಿನದಿಂದಲು

ಒಂದು ದಿನ
ನೆಲಕಚ್ಚಿದ ಬಿರುಸಿಗೆ
ಗಾಯವಾಯಿತು ಬೆಳಕಿಗೆ

ಬರಲಿಲ್ಲ ನೋವೆಚ್ಚಿ
ನನ್ನೊಂದಿಗೆ ಆಡಲು ಬೆಳಕು
ಬೇಸರದ ನದಿಗೆ ಬೆನ್ನು ನೋವು

ಗಿಲಕಿ ನಾದ ತಪ್ಪಿದ ಶಬ್ದಕೆ
ಕರವಿಡಿದ ನನ್ನ ಮನಸು
ಭಗ್ನ ಕನಸಿನ ಬೆನ್ಹತ್ತಿತು.

ಆದರೆ,
ಕತ್ತಲು ತನ್ನ ಜೊತೆ
ಆಡಲು ಕರೆಯಿತು
ಗೋಗರಿಯಿತು ಮಂಡಿಯೂರಿ

ಆಡಲೋಗಲು
ನನ್ನ ಕಣ್ಗಳು ಕತ್ತಲ ತೊಟ್ಟಿಲು
ಆಟ ತೂಗಲು

ಎಡಬಿಡುತ್ತಿಲ್ಲ.
ಬೆಳಕಿನೊಂದಿಗೆ ಆಡಿದ
ಆಟದ ನೆನಪು, ಹೊನಪು

ಆಡುವ ಮನಸು, ವಯಸ್ಸು
ಆಟವಿಲ್ಲದೆ, ಇಚ್ಛಾಶಕ್ತಿಗೆ ಮೊರೆಯಿಟ್ಟು,
ಮೊಣಕಾಲ ಸಂದಿಗೆ ತಲೆಕೊಟ್ಟು ಕೂತಿದ್ದೇನೆ.
ಬೆಳಕಿಗೆ ಆದ ಗಾಯ ಗಕ್ಕನೆ ಮಾಗಲೆಂದು

**ಬಿದಲೋಟಿ ರಂಗನಾಥ್**
ವಕೀಲರು, ಮಧುಗಿರಿ

# ಕಲಬುರಗಿ ಕನ್ನಡ

**ಗಂಡ :** ಯೆನ್ ಬದುಕೊ ಯೇನ್ ಸುದ್ದ್ಯೋ ಯೆಟ ದುಡದುರನು ಸಾಕಾಂಗಿಲ್ಲ ಈ ಸಂಸಾರ್ಕ, ಇನ್ ಕುಸಗೋಳಿಗಿ ಯೆಲ್ಲಿಂದ ಬಟ್ಟಿ ಗಿಟ್ಟಿ ತರಬೇಕ್. ತಿಂಗಳದಾಗ ವಂದ ಹಬ್ಬ, ಬೀಗರ ನ್ಯಂಟರ್ದು ವಂದಿಲ್ಲಂದ್ರ ವಂದ ಕಿರಿಕಿರಿ. ಆ ಊರಿನವರ್ ಕ್ವಾಣಾ ಕಡದುರ್‌ನೂ ಬಟ್ಟಿ ಆಯಾರಿ ಮಾಡ್ಬೇಕ ಈ ಊರಿನವುರ್ ತ್ವಟ್ಲ, ಜವಳಾ ಮತ್ತ ಮದಿ ಅಂತ ಯಲ್ಲಾರಿಗ ಆಯಾರಿ ಮಾಡ್ಲಿಕ್ ರೊಕ್ಕಾ ಬೇಕೆಬೇಕ. ಗವ್ಡ, ಕುಲ್ಕರ್ಣ್ಯಾರಬಲ್ಲಿ ಮತ್ತು ಸಂಘದಾಗ ಸಾಲಾ ಮಾಡಿ ಮಾಡಿ ಸಾಕ್ ಸಾಕಾಗ್ಯಾದ. ಏ ಯೆನಮಾಡ್ಲ್ಯತ್ತಿದ್ದೆ ವಳ್ಗ ಹೊರಗ ಬಾ, ಬಾರೆ ಹೊರ್ಗ ಯೆಕಾಡಿ ಹೋಗ್ಯಾವಪ ಯಲ್ಲ ಇವು.

**ಯೆಣ್ತಿ :** ಏ, ಯಾಕ ಹಂಗ ಬಡ್ಕೊಲತ್ತಿದಿ. ಪಾರ್ಗೋಳಯೆಲ್ಲಾ ಊರಾಗ ಡೊಂಬರಾಟ ನಡ್ದಾಂತ ನೋಡ್ಲಕ ಹೊಗ್ಯಾವ. ವ್ಯಾಕ ಥೂ ಥುತ್ ಇದರ ಹೆಣಾಯೆತ್ತಲಿ ? ಗಬ್ಬ ನಾರ್ಲತಾದ ತಿಲ್ಲಕ ಮನ್ಯಾಗ ಕೂಳಿರಿಲ್ಲಕಯಿಲ್ಲ. ಈ ಭಾಡ್ಯಾಗ ಕುಡಿಲಾಕ ಉಚ್ಚಿ ವಂದಿದ್ದರ ಸಾಕ. ನಮ್ಮಪ್ಪ ಇಂತದ್ದುಕ ಯಾಕರೆ ಗಂಟ ಹಾಕ್ದುನಂತಿನಿ. ಶಿವಶಿವಾ... ಪರ್ಮಾ... ನಾ ಹ್ಯಂಗ ಮಾಡ್ಲಿ...

"ಏ ಮಲ್ಲಪ್ಪ ಸಾಲಿಗಿ ಗಿಲಿಗಿ ಹೋತಿ ಯೆನ ಇಲ್ಲೋ, ಏಳ ಭಾಳ ಟೈಮ್ ಆಗ್ಯಾದ ನಿಮ್ಮಪ್ಪ ಹೊಲಕ್ಕ ಹೋಲತಾನ ನೋಡ. ನೀ ಇವತ್ತ ಸಾಲಿಗಿ ಹೊಲಿಲಿಂದ್ರ ಮದ್ಯಾಣ ನಿಮ್ಮಪ್ಪುನ ಗೂಡಾ ಸಂತಿಗಿ ಹೋಗಿ ವಂದ್ ಕೋಳಿ ತೊಂಬಾ ನಾಳಿಗಿ ಕರಿ ಅದ ಕೋಳಿ ಕ್ವಯ್ದು ಮರಗಮ್ಮಗ ನ್ಯವ್ದ್ಯಾ ಯೆರ್ಸಾಮಿ. ಯೇ.... ಏಳೋ ಯೇಳ್ತಿ ಏನ ಬಡ್ಗಿ ತೋಲಿ."

– ಮೇಲಿನ ಪದಗಳೆಲ್ಲಾ ಕಲಬುರಗಿ ಕನ್ನಡದ ಮಾತಿನ ಗುಟ್ಟು. ಈ ಮಾತು ಕಲಬುರಗಿ ಕನ್ನಡ, ಕನ್ನಡ ಭಾಷೆಯ ಒಂದು ಉಪಭಾಷೆ / ಭಾಷಾ ಪ್ರಭೇದ.

ಕಲಬುರಗಿಯ ಮುಖ್ಯ ವೈಶಿಷ್ಟ್ಯವೆಂದರೆ ಶಿಷ್ಟ (ಬರಹ) ಕನ್ನಡದ 'ಒ' ಅಕ್ಷರ 'ವ' ಮತ್ತು 'ಎ' ಅಕ್ಷರ 'ಯ' ಆಗುತ್ತದೆ. ಉದಾಹರಣೆ : ಒಂದು=ವಂದು, ಎಲಿ=ಯಲಿ, 'ಕನ್ನಡದ ಪದಾಂತ್ಯ 'ಎ'ಕಾರಾಂತ್ಯ ಶಬ್ದಗಳು 'ಇ'ಕಾರಾಂತ್ಯವಾಗಿಯೂ ಹೆಚ್ಚು ಬಳಕೆಯಲ್ಲಿವೆ. ಉದಾಹರಣೆಗೆ : ನಾಮಪದಗಳು : ಕೆರೆ=ಕೆರಿ, ಬುಟ್ಟೆ=ಬುಟ್ಟಿ, ಹೊಟ್ಟೆ=ಹೊಟ್ಟಿ, (ಹ್ವಟ್ಟಿ), ಮನೆ=ಮನಿ, ಶಾಲೆ=ಸಾಲಿ, ಒಂಟೆ=ವಂಟಿ, ಆನೆ=ಆನಿ, ಕ್ರಿಯಾಪದಗಳು : ಒಡೆ=ವಡಿ ಇತ್ಯಾದಿ. ಶಬ್ದಗಳ ಪ್ರಥಮ ಅಕ್ಷರದ 'ಏ'ಕಾರ ಮತ್ತು 'ಓ'ಕಾರಗಳು ಕ್ರಮವಾಗಿ 'ಆ್ಯ', ಆ, ಮತ್ತು 'ವಾ'ಕಾರಗಳಾಗಿ ಬಳಕೆಯಲ್ಲಿವೆ. 'ಆ್ಯ'ಕ್ಕೆ ಉದಾಹರಣೆ : ಮೇಲೆ=ಮ್ಯಾಲ, ಬೇರೆ=ಬ್ಯಾರೆ, ಬೇಸರಿಕೆ=ಬ್ಯಾಸರ್ಕಿ. 'ಅ'ಕ್ಕೆ ಉದಾಹರಣೆ : ಮೋಡ=ಮಾಡಾ. 'ವಾ'ಕ್ಕೆ ಉದಾಹರಣೆ : ಕೋಣ=ಕ್ವಾಣಾ, ತೋಟ=ತ್ವಾಟಾ, ತೋಳ=ತ್ವಾಳಾ, ಜೋಳ=ಜ್ವಾಳಾ, ಹೋರಿ=ಹ್ವರಿ. 'ೖ'ಕ್ಕೆ ಉದಾಹರಣೆ : ತಲೆ=ತ್ಯಲಿ, ಕೆರೆ=ಕ್ಯರಿ. ಕೆಲವು ಪದಗಳು 'ಉ'ಕಾರಂತ್ಯ ತಿನು, ಬೀಡು, ಹಾಕು ಮತ್ತು ಕೆಲವೊಂದು ಪದಗಳು ವ್ಯಂಜನಾಂತ್ಯ ಕಚ್ಚ್, ಚುಚ್ಚ್, ಬಿಚ್ಚ್, ಸುಳ್ಳ್, ಮಳ್ಳ್. ಇತ್ಯಾದಿ ಬಳಕೆಯಾಗುತ್ತವೆ. ಪದದ ಮೊದಲಲ್ಲಿ ಬರುವ 'ಹ'ಕಾರವು ಗ್ರಾಮೀಣ ಜನರಲ್ಲಿ 'ಅ'ಕಾರ ಬಿಟ್ಟುಹೋಗುವ ಮತ್ತು 'ಹೆ'ಕಾರಕ್ಕೆ 'ಯ'ಕಾರ ಬರುವ ಸಂಭವಗಳು ಹೆಚ್ಚು. ಉದಾಹರಣೆ : ಹಾಲು=ಆಲ, ಹತ್ತಿರ = ಅತ್ರ, ಹೆಣ್ಣು = ಯೆಣ್ಣ ಎಂದು ವಿಶಿಷ್ಟತೆಯ ವ್ಯತ್ಯಾಸ ಕಂಡುಬರುತ್ತದೆ.

ಕಲಬುರಗಿ ಭಾಷಾ ಪ್ರಭೇದದಲ್ಲಿ ಬರಹ ಕನ್ನಡದ ಸರ್ವನಾಮ ಪದಗಳ ರೂಪಕ್ಕೆ ನಾನು=ನಾ, ನೀನು=ನೀ, ಅವನು=ಅ~ವ, (ಕ~ವ), ಇವನು=ಇ~ವ(ಕ~ವ), ನಾವು=ನಾ~ವ, ನೀವು=ನಿ~ವ, ಬಳಕೆಯಲ್ಲಿವೆ. ಪರವಾಣವಾಚಕದ ಬಳಕೆ : ಅಷ್ಟು=ಕಷ್ಟ, ಇಷ್ಟ=ಕಿಷ್ಟ, ಆಟ, ಇಟ (ಈಟ) ಇತ್ಯಾದಿ. ದರ್ಶಕ ನಾಮಪದಗಳು : ಅಲ್ಲಿ=ಕಲ್ಲಿ, ಇಲ್ಲಿ=ಕಿಲ್ಲಿ, ಅಕಡಿ=ಕಕಡಿ, ಇಕಡಿ=ಕಿಕಡಿ. ಶಬ್ದಾದಿಯ ; 'ವ' ಕಾರವು ಗ್ರಾಮ್ಯರೂಪ ತಾಳಿ 'ಇ' ಸ್ವರವಾಗಿ ಬಳಕೆಯಲ್ಲಿದೆ. ಉದಾಹರಣೆಗೆ : ವೀಳ್ಯದೆಲೆ=ಇಳ್ಯಾದೆಲಿ, ವಿಶ್ವನಾಥ=ಇಸನಾಥ, ವೀರಭದ್ರ=ಈರಭದ್ರ... ಇತ್ಯಾದಿ. ಮಧ್ಯಮ ಪುರುಷ ಏಕವಚನ 'ನೀನು' ವಿಧ್ಯರ್ಥಕ (ಆಜ್ಞಾರ್ಥಕ) ಕ್ರಿಯಾಪದವು 'ಅರ್' ಮತ್ತು 'ಉರ್' ಕರಾಂತ್ಯ ದ್ವಿತ್ವವಾಗುವುದು ಕಲಬುರಗಿ ಕನ್ನಡದ ವೈವಿಧ್ಯಪೂರ್ಣ ಭಾಷಾ ಬಳಕೆಗೆ ಸಾಕ್ಷಿಯಾಗಿದೆ. ಉದಾಹರಣೆಗೆ : ಕುಳಿತುಕೊ=ಕುಂದ್ರ, ಕುಂದುರ್, ನಿಂತುಕೊ=ನಿಂದ್ರ, ನಿದುರ್... ಇತ್ಯಾದಿ.

ಕನ್ನಡದ ದೇಶೀಯ ಅಚ್ಚಗನ್ನಡದಲ್ಲಿ ಮಹಾಪ್ರಾಣಗಳ ಬಳಕೆ ಇಲ್ಲ. ಅಂದರೆ ಸಂಸ್ಕೃತದಿಂದ ಎರವಲಾಗಿ ಪಡೆದಂಥವುಗಳೇ ಮಹಾಪ್ರಾಣಗಳು. ಉರ್ದುವಿನ ಮಹಾಪ್ರಾಣಾಕ್ಷರದ ಪದಗಳ ಪ್ರಭಾವದಿಂದಲೂ ಈ ಭಾಗದಲ್ಲಿ ಕೆಲವೊಂದು ಅಲ್ಪಪ್ರಾಣಕ್ಕೆ ಮಹಾಪ್ರಾಣ ಅಕ್ಷರದ ಬಳಕೆ ಇದೆ. ಉದಾಹರಣೆಗೆ : ಜಾಡಿಸು=ಝಾಡ್ಸ, ಜೋಪಡಿ=ಝೋಪಡಿ, ಕಬ್ಬು=ಖಬ್ಬು, ಕಾರಾ=ಖಾರಾ, ಗೋಧಿ=ಘೋದಿ, 'ತ'ಕಾರಕ್ಕೆ 'ಟ'ಕಾರದ ಬಳಕೆ. 'ನ'ಕಾರಕ್ಕೆ 'ಳ'ಕಾರದ ಬಳಕೆ. ತಂಡಿ=ಥಂಡಿ, ಡೋಲ=ಢೋಲ. ಮಹಾಪ್ರಾಣಾಕ್ಷರಗಳಿಗೆ ಅಲ್ಪಪ್ರಾಣಗಳ ಬಳಕೆಯು ಇದೆ. ಉದಾಹರಣೆಗೆ : ಕಥೆ=ಕತಿ. ಕನ್ನಡಕ್ಕೆ ಸಂಸ್ಕೃತದಿಂದ ಮಹಾಪ್ರಾಣಗಳು ಬಂದ ಹಾಗೆ 'ಶ' ಮತ್ತು 'ಷ' ಮೂಲಾಕ್ಷರಗಳು ಬಂದಿವೆ. ಸಂಸ್ಕೃತ ಕನ್ನಡದ ಮೇಲೆ ಗಾಢವಾದ ಪ್ರಭಾವ ಬೀರಿದೆ. ದಕ್ಷಿಣ ಕರ್ನಾಟಕದ ಕನ್ನಡದ ಮೇಲೆ ಈ ಸಂಸ್ಕೃತಬೂಯಿಷ್ಟತೆ, ಉರ್ದು ಮತ್ತು ಆಂಗ್ಲಭಾಷಾ ಪ್ರಭಾವ ಯಥೇಚ್ಛವಾಗಿದೆ. ಈ ಭಾಗದ ಗ್ರಾಮೀಣ ಜನರಲ್ಲಿ 'ಸ'ಕಾರವೇ ಹೆಚ್ಚಾಗಿ ಬಳಕೆಯಲ್ಲಿದೆ. ಉದಾಹರಣೆ : ಶಾಲೆ=ಸಾಲಿ, ಶುದ್ಧ=ಸುದ್ದ ಶರಬದತ್=ಸರಬತ್... ಇತ್ಯಾದಿ. ಕನ್ನಡ ಪದಗಳ ಸ್ಥಳದಲ್ಲಿ ಬೇರೆ ಭಾಷೆಯ ಪದಗಳ ಬಳಕೆ : ದವಖಾನಿ, ಮಾರ್ಕೆಟ, ಬಜಾರ, ಇಸ್ಕೂಲ್, ಜಲ್ದಿ, ಪಿರ್ಯಾದಿ, ಜಗಡಾ, ಗರಂ, ಜಿಂದಗಿ, ಗಿಲಾಸ ಇತ್ಯಾದಿ ನಾಮಪದಗಳು, ಕ್ರಿಯಾಪದಗಳು, ವಿಶೇಷಣಗಳು, ಪದಗಳು ಮತ್ತು ಪ್ರತ್ಯಯಗಳು ಕಲಬುರಗಿ ಮಾತಿನಲ್ಲಿ ಬಳಕೆಯಾದಾಗ ಬೆಂಗಳೂರು, ಮೈಸೂರು, ಉಡುಪಿ ಇತ್ಯಾದಿ ಸ್ಥಳದ ಜನರಿಗೆ ಮಾತಿನ ಅರ್ಥ (ಭಾವನೆ) ಸುಮಾರು ಎಂಬತ್ತರಷ್ಟು ಅರ್ಥವಾಗುವುದಿಲ್ಲ. ಇನ್ನು, ಮುಖ್ಯವಾಗಿ ಅಂಟು ಭಾಷೆಯ ಉಪಭಾಷೆಯಲ್ಲಿ ಧ್ವನಿ, ಪದ, ಪ್ರತ್ಯಯಗಳ ವ್ಯತ್ಯಾಸ ಈ ಭಾಷಾ ಪ್ರಭೇದ ಅಥವಾ ಪ್ರಾದೇಶಿಕ ಉಪಭಾಷೆ ಉಂಟಾಗಲು ಕಾರಣವಾಗುತ್ತದೆ. ಕಲಬುರಗಿ ಕನ್ನಡದಲ್ಲಿ ವಿಶಿಷ್ಟವಾಗಿ ಬಳಕೆಯಾಗುವ ಮತ್ತು ಕನ್ನಡ ಇತರ ಪ್ರದೇಶಕ್ಕಿಂತ ಭಿನ್ನತೆ ಮತ್ತು ವೈಶಿಷ್ಟ್ಯಗಳಿಂದ ಕೂಡಿದೆ. ಕೆಲವು ಉದಾಹರಣೆಗಳು :

ಕಲಬುರಗಿ ಕನ್ನಡದ ಮಾತಿನಲ್ಲಿ ಸವೆದ ಪದಗಳು ಹೆಚ್ಚಾಗಿ ಕಾಣಬಹುದು. ಉದಾಹರಣೆಗೆ : ಮದುವೆ=ಮದಿ, ಕಡಲೆ=ಕಡ್ಲಿ (ಕಡ್ಡಿ) ಕರಳು=ಕಳ್ಳ, ಬೆರಳು=ಬೆಳ್ಳ, ಮಾಡಿಕೊಳ್ಳುತ್ತಾ=ಮಾಡ್ಕೊತಾ, ಬಂದಮೇಲೆ=ಬರಾಣ, ಹೋಗೋಣ=ಹೋಗಾಮಿ... ಇತ್ಯಾದಿ. ಮಿಶ್ರಿತ ಪದಗಳು : ನಾಚ್ಗಿಶರ್ಮ, ನಾಭಿ. ಉರ್ದು ಶಬ್ದಗಳು : ಜಲ್ದಿ, ಫೈಸಲಾ, ಜೋರ್, ಜಬರದಸ್ತ, ಅವಾಜ, ದೊಸ್ತ, ಇತ್ಯಾದಿ. ಮರಾಠಿ ಶಬ್ದಗಳು : ಖಾನಾವಳಿ, ತ್ರಾಸ, ದೀಡ. ಇಂಗ್ಲಿಷ್ ಶಬ್ದಗಳು : ಪಾಸ್ಪ, ಕಟ್, ಮೊಬಾಯ್ಲು, ಬೂಟ, ಪ್ಯಾಂಟ, ಬಲ್ಪ, ಲೈಟಿ.ವಿ., ಪ್ಯಾನ, ಟೇಬಲ್ ಇತ್ಯಾದಿ. ತೆಲಗು ಶಬ್ದಗಳು : ಪೊಗುರ, ಚೆಂಬು. ಕಲಬುರಗಿಯ ಕನ್ನಡದಲ್ಲಿ ಬಳಕೆಯಲ್ಲಿರುವ ಕೆಲವು ವಿಶಿಷ್ಟ ಪದಗಳು ತಮ್ಮದೇ ಅರ್ಥ ವಿಶೇಷತೆ ಹೊಂದಿವೆ. ಉದಾಹರಣೆಗೆ : ಬಡಬಡ, ಬಡಾನೆ, ವಲ್ಲ=ಬೇಡ. ವಟ್ಟ=ಹೇಗೆ ಆಗಲಿ. ಉಣು=ಊಟಮಾಡು. ಹನ=ಇದ್ದಾನೆ. ಹಳ=ಇದ್ದಾಳೆ. ಹರ=ಇದ್ದಾರೆ.

ಹೀಗಾಗಿ ಕಲಬುರಗಿ ಕನ್ನಡದ ರಚನೆಯು ವೈವಿಧ್ಯಮಯವಾಗಿದೆ. ತನ್ನ ಸ್ವಂತಿಕೆಯ ಜೊತೆಗೆ ಇತರ ಭಾಷಾ ಪ್ರಭಾವವನ್ನು ಸ್ವೀಕರಿಸಿದರೂ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡಿದೆ. ಈ ಭಾಗದ ಪ್ರಸ್ತುತ ನಗರ ಪ್ರದೇಶಗಳಲ್ಲಿ ಇಂಗ್ಲಿಷ್ ಮಾಧ್ಯಮದ ಶಾಲೆಗಳು ಬೆಳೆಯುತ್ತಿರುವುದರಿಂದ ಮತ್ತು ಪಾಲಕ ಮತ್ತು ಪೋಷಕರ ಇಂಗ್ಲಿಷ್ ವ್ಯಾಮೋಹದಿಂದ ತಮ್ಮ ಮಕ್ಕಳಿಗೆ ಬಲವಂತದಿಂದ ಇಂಗ್ಲಿಷ್ ಭಾಷೆಗೆ ವರ್ಗಾಯಿಸು ತ್ತಿದ್ದಾರೆ. ಹಾಗೂ ಭಾಷಾ ಬಳಕೆಯಲ್ಲಿ ವಿನಯ ಮತ್ತು ಮರ್ಯಾದೆಯನ್ನು ಹೆಚ್ಚಿಸಿಕೊಳ್ಳಲು ಬರಹದ ಕನ್ನಡ ಮತ್ತು ಅಲ್ಲಲ್ಲಿ ಇಂಗ್ಲಿಷ್ ಪದಗಳನ್ನು ಹೆಚ್ಚಾಗಿ ಬಳಸುತ್ತ ಮಕ್ಕಳಿಗೂ ಅದೇ ರೀತಿ ಕಲಿಸುತ್ತಿದ್ದಾರೆ. ಸಮೂಹ ಮಾಧ್ಯಮಗಳು ಕೂಡ ಸಮಾಜದಲ್ಲಿ ಅದೇ ಪಾತ್ರವನ್ನು ವಹಿಸುತ್ತಿವೆ. ಆದರೂ ಇನ್ನೂ ಗ್ರಾಮೀಣ ಪ್ರದೇಶಗಳಲ್ಲಿ ಈ ಕಲಬುರಗಿ ಭಾಷೆ ಭಾಷಾ ಸಂಶೋಧಕರಿಗೆ ಕುತೂಹಲ ಮೂಡಿಸುವ ಪ್ರದೇಶವಾಗಿದೆ. ಒಟ್ಟಾರೆಯಾಗಿ, ಕಲಬುರಗಿ ಕನ್ನಡ ತನ್ನದೇ ಆದ ಒಳರಚನೆಗಳನ್ನು ಮತ್ತು ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿರುವುದು ಈ ಪ್ರದೇಶಕ್ಕೆ ಮತ್ತು ಇಲ್ಲಿನ ಕನ್ನಡ ಬಳಸುತ್ತ ಬದುಕು ಸಾಗಿಸುವ ನಮಗೆ ಹೆಮ್ಮೆಯ ವಿಷಯ.

**ಶಿವಲಿಂಗಪ್ಪ ಸಿ. ಬಸವಣ್ಣೋರ್**
ಸಂಶೋಧನ ವಿದ್ಯಾರ್ಥಿ, ಕನ್ನಡ ವಿಭಾಗ
ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ
ಕಡಗಂಚಿ, ಆಳಂದ ತಾಲೂಕು, ಕಲಬುರಗಿ ಜಿಲ್ಲೆ





# ಏನಿದು ಗ್ರೀಸಿನ ಬಿಕ್ಕಟ್ಟು ?

**ಗ್ರೀಸ್ ದೇಶದಲ್ಲಿ ಆರ್ಥಿಕ ಬಿಕ್ಕಟ್ಟು ಇಂದಿನ ಬಿಸಿ ಸುದ್ದಿ.**
**ಮೊದಲಿಗೆ, ಬಿಕ್ಕಟ್ಟನ್ನು ಚಿತ್ರಿಸುವ ಗ್ರೀಸಿನ ಕೆಲವು ಅಂಕಿಅಂಶಗಳು :**

| | ಜಿಡಿಪಿ (ರಾಷ್ಟ್ರದ ಒಟ್ಟು ಉತ್ಪಾದನೆ) | ತಲಾ ಆದಾಯ |
|---|---|---|
| ೧೯೯೯–೨೦೦೦<br>೨೦೧೪ | –೨೪೨ ಬಿಲಿಯನ್ ಯೂರೋ<br>–೧೭೯ (ಶೇ. ೨೬ರಷ್ಟು ಕುಸಿತ) | ...೨೨೫೦೦ ಯೂರೋ<br>...೧೭೦೦೦ ಯೂರೋ<br>(ಶೇ. ೨೬–೧) ಇಳಿಕೆ |
| **ಸರಕಾರದ ಸಾಲದ ಹೊರೆ :** | ೨೦೧೪ ೩೧೭<br>ಬಿಲಿಯ ಯೂರೋ<br>(೧೭೭.೭% ಜಿಡಿಪಿ) | ೨೦೧೧ ೩೫೬   ೨೦೧೨ ೩೦೫ |

೨೦೧೧ ಮತ್ತು ೨೦೧೨ರಲ್ಲಿ ಯೂರೋ ಯೂನಿಯನ್. ಐಎಂಐಫ್‌ನಿಂದ ನೆರವು ದೊರೆತು, ಮಿತವ್ಯಯ ನೀತಿಯನ್ನು ಅನುಸರಿಸಿದ್ದರಿಂದ ಸಾಲದ ಹೊರೆ ಈ ಮಟ್ಟಕ್ಕೆ ಇಳಿದಿತ್ತು. ಆದರೆ ಮಿತವ್ಯಯ – ಯುದ್ಧ ಕ್ಷೇತ್ರದಲ್ಲಿ, ಪೆನ್ಷನ್, ಸಂಬಳ ಕಡಿತ, ತೆರಿಗೆ ಹೆಚ್ಚಿಸಿ – ಈ ಮಾರ್ಗ ಆರ್ಥಿಕ ಕುಸಿತ, ನಿರುದ್ಯೋಗ, ನಿರ್ವಸತಿ, ಅಂಗಡಿಗಳ ಮಳಿಗೆಗಳು ಅಪಾರ ಸಂಖ್ಯೆಯಲ್ಲಿ ಮುಚ್ಚುವುದು ಉಂಟಾಯ್ತು. ಹೊಸ ಸಾಲಗಳನ್ನು ವಿಪರೀತ ಬಡ್ಡಿ ನೀಡಿ ಮಾರುಕಟ್ಟೆಯಿಂದ ಪಡೆಯಲಾಯ್ತು.

೨೦೦೮ರಲ್ಲಿ ಬಜೆಟ್ಟಿನ ಕೊರತೆ ಶೇ. ೧೫ರಷ್ಟು ಇದ್ದದ್ದು ಯೂರೋ ಒಕ್ಕೂಟ ೨೦೧೧ರಲ್ಲಿ ನಡೆಸಿದ ತನಿಖೆಯಿಂದ ತಿಳಿಯಿತು. ನಂತರ ವಿಶೇಷ ನೆರವು ನೀಡಲು ಬಜೆಟ್ ಕೊರತೆಯನ್ನು ಶೇ. ೪ಕ್ಕಿಂತ ಕಡಿಮೆ ಮಾಡಲು ಷರತ್ತು ವಿಧಿಸಿದರು. ಪರಿಣಾಮ ೨೦೧೪ರಲ್ಲಿ ಶೇ. ೩.೪ಕ್ಕೆ ಇಳಿಯಿತು. ಆದರೆ ಇದಕ್ಕೆ ಸಾರ್ವತ್ರಿಕವಾಗಿ ಸರ್ಕಾರದ ವೆಚ್ಚ ಕಡಿತ, ತೆರಿಗೆಯ ವಿಪರೀತ ಹೆಚ್ಚಳ, ವಿಪರೀತ ಬಡ್ಡಿ, ಮುಕ್ತ ಮಾರುಕಟ್ಟೆಯಿಂದ ಸಾಲ ಹೀಗೆಲ್ಲಾ ಮಾಡಬೇಕಾಯ್ತು. ರಾಷ್ಟ್ರಾದಾಯ ಅಪಾರವಾಗಿ ಕುಸಿದು ದಿವಾಳಿಯಾಯ್ತು. ಐಎಂಎಫ್‌ಗೆ ಬಜೆಟ್ ಕೊರತೆ ಶೇ. ೩.೪ ಎಂಬ ಸಂತೋಷ ಆಯ್ತೋ ಇಲ್ಲವೋ ತಿಳಿಯದು. ಆದರೆ ಅದಕ್ಕೆ ಸಾಲದ ಕಂತೂ ಹಿಂಪಡೆಯಲು ಆಗಿಲ್ಲ.

ಇನ್ನು ಕೆಲವು ಅಂಕಿಗಳು ಈ ಚಿತ್ರವನ್ನು ಸಂಪೂರ್ಣ ಮಾಡುತ್ತವೆ. ಬಡ್ಡಿದರ ೨೦೧೪ರಲ್ಲಿ ಶೇ. ೬ ಇದ್ದದ್ದು ಈಗ ಶೇ. ೧೦. ಸರ್ಕಾರ ತನ್ನ ಆದಾಯದ ೨೩% ಭಾಗವನ್ನು ತನ್ನ ಸಾಲಗಳಿಗೆ ಬಡ್ಡಿ ನೀಡಲು ಬಳಸುತ್ತಿದೆ. ಅಸಲು ಹಿಂದಿರುಗಿಸಲು ಆಗಿಲ್ಲ. ಕೆಲ ದಿನಗಳ ಹಿಂದೆ ಗ್ರೀಸ್ ಸರ್ಕಾರ ಐಎಂಎಫ್‌ಗೆ ನೀಡಬೇಕಿದ್ದ ಕಂತು ಕೇವಲ ೧.೭ ಬಿಲಿಯನ್ ಡಾಲರ್ ಅನ್ನು ನೀಡಲಾಗದೆ, ಸರ್ಕಾರ ಜಗತ್ತಿನ ಮಾರುಕಟ್ಟೆಯ ವಿಶ್ವಾಸವನ್ನು ಕಳೆದುಕೊಂಡಿದೆ, ಅಂದರೆ ಮುಕ್ತಮಾರುಕಟ್ಟೆಯೂ ಸೇರಿ ಯಾರೂ ಸಾಲ ಕೊಡಲು ಮುಂದಾಗುವುದಿಲ್ಲ. ಈ ಸರ್ಕಾರಕ್ಕೆ ಸಾಲ ಕೊಟ್ಟವರು ಬೆಲೆಬಾಳದ ಪತ್ರಗಳನ್ನು ಪಡೆದಿದ್ದು, ವಸೂಲಿ ಮಾಡಲು ದಿಕ್ಕು ತೋಚದಾಗಿದ್ದಾರೆ. (ಅಮೆರಿಕದಲ್ಲಿ ಬಡ್ಡಿದರ ಶೇ. ೮, ಜರ್ಮನಿಯಲ್ಲಿ ಶೇ. ೧) ಗ್ರೀಸಿನಲ್ಲಿ ಶೇ. ೧೦ ಆಗಿದೆ. ಗ್ರೀಸಿನ ನಿರುದ್ಯೋಗ – ೨೦೦೫–೦೯ರಲ್ಲಿ ಶೇ. ೧೦ ಇದ್ದದ್ದು, ೨೦೧೩–೧೪ರಲ್ಲಿ ಶೇ. ೨೭ ಆಗಿದೆ; ಅದರಲ್ಲೂ ಯುವಜನರಲ್ಲಿ ನಿರುದ್ಯೋಗ ಶೇ. ೫೫ರಷ್ಟಿದೆ. ಬಡತನದ ರೇಖೆಯ ಕೆಳಗೆ ಶೇ. ೪೪ ಇದ್ದಾರೆ.

ಮುಂದುವರಿದು, ಈ ಸಂಖ್ಯೆಗಳು ಏನು ಹೇಳುತ್ತವೆ ನೋಡೋಣ. ಗ್ರೀಸ್ ದೇಶ ಯೂರೋಪಿಯನ್ ಒಕ್ಕೂಟದ ಸದಸ್ಯ. ಅಂದರೆ ಮುಂದುವರಿದ ಬಂಡವಾಳ ವ್ಯವಸ್ಥೆಯ ಭಾಗ. ಅದರ ಬಹುಮುಖ್ಯ ಉದ್ಯಮಗಳೆಂದರೆ ಹಡಗು ಮೂಲಕ ವಾಣಿಜ್ಯ ಸರಕುಸಾಗಣೆ ಮತ್ತು ಜಗತ್ತಿನ ಎಲ್ಲೆಡೆಯಿಂದ ಮುತ್ತಿಕೊಳ್ಳುವ ಪ್ರವಾಸಿಗಳ ವ್ಯವಹಾರ ಸುಮಾರು ೨೦೦೪ರವರೆಗೆ ಆರ್ಥಿಕವಾಗಿ ಸದೃಢವೇ ಆಗಿದ್ದ ಸುಮಾರು ಒಂದು ಕೋಟಿ ಪ್ರಜಾಸಂಖ್ಯೆಯ ಈ ಪುಟ್ಟ ದೇಶ ಈಗ

**ಕೆ. ಎಸ್. ಪಾರ್ಥಸಾರಥಿ**

ಈಗ ಅಧಿಕಾರದಲ್ಲಿರುವ ಸಿರಿಜಾ ಒಕ್ಕೂಟವನ್ನು ರ್‍ಯಾಡಿಕಲ್ ಲೆಫ್ಟ್ ಅನ್ನುತ್ತಾರಾದರೂ ಅದು ಅಲ್ಲಿಯ ಕಮ್ಯುನಿಸ್ಟ್ ಪಕ್ಷವನ್ನು ಒಳಗೊಂಡಿಲ್ಲ. ಅಲ್ಲಿಯ ಎಲ್ಲ ಎಡಪಕ್ಷಗಳೂ ತಮ್ಮದೇ ಸಮಸ್ಯೆ ಎನ್ನುವಂತೆ, ಅವಕಾಶ ಎನ್ನುವಂತೆ ಇನ್ನೂ ದನಿಗೂಡಿಸಿದಂತಿಲ್ಲ ಯೂರೋ ಒಕ್ಕೂಟ ಮತ್ತು ಬ್ಯಾಂಕ್ ಹೊಸ ಸಾಲ ನೀಡಲು, ಬಾಕಿ ವಸೂಲಿ ತಡೆಯಲು ಮತ್ತಷ್ಟು ಮಿತವ್ಯಯ ಹೇರುವುದು ಅರ್ಥಹೀನವಾಗಿದೆ. ಆ ದಾರಿ ಹಿಡಿದೇ ಅಲ್ಲಿಯ ಈ ಅಸ್ತವ್ಯಸ್ತ ಸ್ಥಿತಿ ಉಂಟಾಗಿರುವುದು. ಸಿರಿಜಾಗೆ ಆ ಮಿತವ್ಯಯ ನೀತಿಯನ್ನು ಒಪ್ಪಬೇಕಾದ ಅನಿವಾರ್ಯ ಇಲ್ಲವೆಂದು ದೇಶದ ಮತದಾರರು ಈಗಷ್ಟೆ ಭಾರಿ ಬಹುಮತದಲ್ಲಿ ಹೇಳಿದ್ದಾರೆ. ಆದರೂ ಈ ಪರಸ್ಪರ ಚರ್ಚೆಯಲ್ಲಿ ಯೂರೋ ಗುಂಪಿಗೆ ಇನ್ನೂ ಹೊಸ ನೀತಿ ಹೊಳೆದಿಲ್ಲ. ಹಲವು ಅರ್ಥಶಾಸ್ತ್ರಜ್ಞರು ಹಲವು ಸಲಹೆಗಳನ್ನು ನೀಡಿದ್ದಾರೆ.

ಸುದ್ದಿಯಾಗಿರುವುದಕ್ಕಾಗಿ ಅದು ತೆಗೆದ ಸಾಲವನ್ನ ಹಿಂದಿರುಗಿಸಲಿಲ್ಲ ಎನ್ನುವುದಕ್ಕಾಗಿ. ಖಜಾನೆ ಖಾಲಿ. ಬ್ಯಾಂಕುಗಳು ಠೇವಣಿದಾರರಿಗೆ ಹಣ ನೀಡಲಾಗದೆ ಎರಡು ವಾರಗಳಿಂದ ಕದ ಮುಚ್ಚಿವೆ. ಎಟಿಎಂ ಮೂಲಕ ಹಣ ಪಡೆಯಲು ಸಾಧ್ಯವಾಗುತ್ತಿಲ್ಲ. ಪಿಂಚಣಿದಾರರಿಗೆ ಹಣ ಸಿಗದೆ ಕಂಗಾಲಾಗಿದ್ದಾರೆ. ಮಾರುಕಟ್ಟೆಯಲ್ಲಿ ಸರಕುಗಳಿಲ್ಲ. ಲಕ್ಷ ಲಕ್ಷ ಅಂಗಡಿ ಮುಂತಾದುವು ಬಾಗಿಲು ಮುಚ್ಚಿ, ರಾಜಧಾನಿ ಅಥೆನ್ಸ್ ನಗರ ಬಿಕೋ ಎನ್ನುತ್ತಿದೆ. ಪ್ರವಾಸಿಗಳ ಸಂಖ್ಯೆ ತೀರ ಕಡಿಮೆಯಾಗಿದೆ. ೧೯೮೦ರ ದಶಕದಲ್ಲಿ ಇಲ್ಲಿಯ ಸೇನೆಯೊಡನೆ ಅಮೆರಿಕ, ಜರ್ಮನಿ ಮತ್ತು ಫ್ರಾನ್ಸ್ ದೇಶಗಳು ಅಪಾರವಾದ ಶಸ್ತ್ರಾಸ್ತ್ರ ಸರಬರಾಜು ವ್ಯವಹಾರ ಮಾಡಿದ್ದವು. ಸ್ವಾಸ್ಥ್ಯ, ಸಮೃದ್ಧಿಯಿಂದ ಕೂಡಿದ್ದ ರಾಜ್ಯ ೨೦೦೪ರಲ್ಲಿ ಒಲಿಂಪಿಕ್ಸ್ ಕ್ರೀಡೆ ಸಂಘಟಿಸಿ, ಅಪಾರ ವೆಚ್ಚ ಮಾಡಿತ್ತು. ಅದಕ್ಕೆಲ್ಲ ಸಾಲ ತೆಗೆದಿತ್ತು. ಕ್ರೀಡೆಗೆ ಸಂಬಂಧಪಟ್ಟ ಮೂಲಸೌಕರ್ಯಗಳನ್ನು ವಿಪರೀತ ನಿರ್ಮಿಸಿ, ಒಲಿಂಪಿಕ್ಸ್ ನಿಭಾಯಿಸಲು ನಂತರವೂ ಅವುಗಳು ಉಪಯೋಗಕ್ಕೆ ಬಂದು ವಾಣಿಜ್ಯ ವ್ಯವಹಾರ ಆಗುತ್ತೆ ಅಂದುಕೊಂಡಿದ್ದರು. ಹೀಗೆ ಮೇಲ್ನೋಟಕ್ಕೆ ಹಾಲುಜೇನಿನ ಹೊಳೆಯಂತಿದ್ದ ಗ್ರೀಸಿನಲ್ಲಿ ಮೊಟ್ಟಮೊದಲು ೨೦೧೦ರಲ್ಲಿ ಯೂರೋ ಯೂನಿಯನ್ ಮಧ್ಯ ಪ್ರವೇಶಿಸಿ, ಅದರ ಅಂಕಿಅಂಶಗಳ ತನಿಖೆ ನಡೆಸಿದಾಗ, ಆರ್ಥಿಕತೆಯ ಆಂತರ್ಯದಲ್ಲಿ ವಿಪರೀತ ಕೊರತೆ ತುಂಬಿರುವುದು ವ್ಯಕ್ತವಾಯಿತು. ೨೦೦೯ರಲ್ಲಿ ಬಜೆಟ್ ಕೊರತೆ ಶೇ. ೬-೮ ಎಂದು ಹೇಳಲಾಗಿದ್ದು, ಅದು ವಾಸ್ತವದಲ್ಲಿ ಶೇ. ೧೨.೭ ಎಂದು ತಿಳಿಯಿತು. ಏಪ್ರಿಲ್ ೨೦೧೦ರಲ್ಲಿ ಅದು ಶೇ. ೧೩.೬ ಎಂದು ವ್ಯಕ್ತವಾಯ್ತು ಮತ್ತು ಪರೀಕ್ಷಿಸಿದಾಗ ಅದು ಶೇ. ೧೫.೭ ಎಂದು ತಿಳಿದಾಗ, ಯೂರೋ ಒಕ್ಕೂಟದ ಯಾವುದೇ ರಾಜ್ಯಕ್ಕಿಂತಲೂ ಅತ್ಯಧಿಕ ಕೊರತೆಯಾಗಿ ತಿಳಿಯಿತು. ಇದರೊಡನೆ ಗ್ರೀಸ್ ಸರ್ಕಾರ ಮತ್ತು ವ್ಯವಸ್ಥೆ, ಸತ್ಯಸಂಗತಿ ಮುಚ್ಚಿಟ್ಟದ್ದಕ್ಕಾಗಿ, ಯೂರೋ ಒಕ್ಕೂಟದ ನಂಬಿಕೆ ಕಳೆದುಕೊಂಡಿತು.

೨೦೦೯ರಲ್ಲಿ ಸರ್ಕಾರದ ಸಾಲದ ಹೊರೆ ೨೬೯.೩ ಬಿಲಿಯ ಯೂರೋ ಎಂದು ತೋರಿಸಿದ್ದು, ವಾಸ್ತವದಲ್ಲಿ ೨೯೯.೭ ಬಿಲಿಯನ್ ಎಂದು ತಿಳಿಯಿತು. ಅಂದರೆ ಅದು ಜಿಡಿಪಿಯ (ರಾಷ್ಟ್ರದ ಒಟ್ಟು ಉತ್ಪಾದನೆಯ) ಶೇ. ೧೩೦ರಷ್ಟು ಅಂತ ಬೆಳಕಿಗೆ ಬಂದಾಗ ಆ ದೇಶ ದಿವಾಳಿಯ ಅಂಚಿನಲ್ಲಿರುವುದು ಸ್ಪಷ್ಟವಾಯಿತು. (ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ) ಐಎಂಎಫ್ ಬಜೆಟ್ ಕೊರತೆ ಶೇ. ೩ರ ಆಸುಪಾಸಿನಲ್ಲಿರಬೇಕು, ಅದಕ್ಕಾಗಿ ಮಿತವ್ಯಯದ ಕಟ್ಟುಪಾಡುಗಳನ್ನು ಹಾಕಿಕೊಳ್ಳಬೇಕು ಎಂದು ವಿಧಿಸುತ್ತದೆ, ಸಾಲ ಕೊಡಬೇಕಾದರೆ)

ಇಷ್ಟೆಲ್ಲ ಕೊರತೆ ಇದ್ದಾಗ, ಎಚ್ಚರಿಕೆ ವಹಿಸದೆ ಸರ್ಕಾರ ಅತಿಹೆಚ್ಚು ಅವಾಸ್ತವಿಕ ಬಡ್ಡಿ ನೀಡಿ ಮತ್ತೆ ಮತ್ತೆ ಮಾರುಕಟ್ಟೆಯಿಂದ ಸಾಲ ತೆಗೆಯಿತು. ಇದನ್ನು ಗಮನಿಸಿ ಅಂತರರಾಷ್ಟ್ರೀಯವಾಗಿ ಹಣಕಾಸು ಕ್ಷೇತ್ರದ ವಿಶ್ವಾಸಾರ್ಹತೆಯನ್ನು ಆಗಾಗ್ಗೆ ಅಳೆಯುವ 'ಮೂಡಿ' ಸಂಸ್ಥೆ ಗ್ರೀಸಿನ ವಿಶ್ವಾಸಾರ್ಹತೆಯನ್ನು ಕಡಿಮೆ ಎಂದಿತು. ಇದರ ತಕ್ಷಣದ ಪರಿಣಾಮವಾಗಿ, ಸರ್ಕಾರಕ್ಕೆ ಖಾಸಗಿ, ಮಾರುಕಟ್ಟೆಯಿಂದ ಹಣ ತೆಗೆಯುವುದೂ ಬತ್ತಿಹೋಯಿತು. ಆಗ ಐಎಂಎಫ್, ಯೂರೋ ಯೂನಿಯನ್ನಿನ ಇಸಿಬಿ ಬ್ಯಾಂಕು ಇವುಗಳ ಮೊರೆಹೋಗಬೇಕಾಯ್ತು. ಅವರು ಹಣಕಾಸಿನ ತೀವ್ರ ಶಿಸ್ತಿನ ಕ್ರಮಗಳನ್ನು ವಿಧಿಸಿ ಸಾಲ ನೀಡಿದರು. ಆ ಕ್ರಮಗಳನ್ನು ಕಾರ್ಯಗತಗೊಳಿಸಿದಾಗ ಬಜೆಟ್ ಕೊರತೆಯ ಮಿತಿಯನ್ನು ಅಂಕಿಸಂಖ್ಯೆಯಲ್ಲಿ ನಿಯಂತ್ರಿಸಿದರೂ ವಾಸ್ತವದಲ್ಲಿ ಆರ್ಥಿಕತೆ ಕುಸಿದು ಬತ್ತಿಹೋಯಿತು. ೨೦೧೧ರಲ್ಲಿ ಜಿಡಿಪಿ ಬೆಳವಣಿಗೆ ಕುಸಿದು, ಕೈಗಾರಿಕಾ ಉತ್ಪನ್ನ ಶೇ. ೨೮.೪ಕ್ಕೆ ಕುಸಿಯಿತು. ಆ ವರ್ಷವೇ ಅಲ್ಲಿಯ ೧೧೧೦೦೦ ಕಂಪನಿಗಳು ದಿವಾಳಿಯಾದುವು. ನಿರುದ್ಯೋಗ ಮಟ್ಟ ೨೦೦೮ರಲ್ಲಿದ್ದ ಶೇ. ೭.೫ ಮಟ್ಟದಿಂದ ೨೦೧೨ರಲ್ಲಿ ಶೇ. ೨೩.೧ ಆಯಿತು. ಅದರಲ್ಲೂ ಯುವಕರಲ್ಲಿ ನಿರುದ್ಯೋಗ ಶೇ. ೫೫ಕ್ಕೆ ಏರಿತು. ಅದರ ರಾಜಕೀಯ ಪರಿಣಾಮ ಸ್ಪಷ್ಟ. ಕಳೆದ ಐದು ವರ್ಷಗಳೂ ನಿರಂತರ ಆರ್ಥಿಕತೆಯ ಹಿಂಜರಿಕೆ ಮುಂದುವರಿದಿದೆ.

ಗ್ರೀಸಿನ ಸಮಸ್ಯೆಗೆ ಪರಿಹಾರವಿದೆಯೇ ? ಬಂಡವಾಳಶಾಹಿ ವ್ಯವಸ್ಥೆ ವಿಧಿಸಿದ ಎಲ್ಲ ಮಾರ್ಗಗಳೂ ವಿಫಲವಾಗಿರುವುದು ಸ್ಪಷ್ಟ. ಅಷ್ಟೇ ಅಲ್ಲ ಅದು ಅನುಸರಿಸಿದ ಮಾರ್ಗವೇ ಈ ಬಿಕ್ಕಟ್ಟನ್ನು ಉಂಟುಮಾಡಿರುವುದೂ ಸ್ಪಷ್ಟ. ಆ ಒಂದು ಸಣ್ಣ ರಾಷ್ಟ್ರಕ್ಕೆ ಅಮೆರಿಕ, ಜರ್ಮನಿ, ಫ್ರಾನ್ಸ್ ಅಷ್ಟೊಂದು ಶಸ್ತ್ರಾಸ್ತ್ರಗಳನ್ನು ಮಾರಬೇಕಿತ್ತೇ ? ಅವರ ಒಕ್ಕೂಟದ ನ್ಯಾಟೋ ಮಿಲಿಟರಿ ಸ್ವಾರ್ಥಕ್ಕೆ ಈ ಸಣ್ಣ ರಾಷ್ಟ್ರದ ಬೆನ್ನಿಗೆ ಈ ಭಾರ ಹೊರೆಸಬೇಕಿತ್ತೆ ? ಕ್ರೀಡೆಗಿಂತ, ವಾಣಿಜ್ಯ ವ್ಯವಹಾರವಾಗುತ್ತಿರುವ ಒಲಿಂಪಿಕ್ಸ್ ಅನ್ನು ಸಣ್ಣ ಸಣ್ಣ ರಾಷ್ಟ್ರಗಳೂ ಸಂಘಟಿಸುವುದು ಅಗತ್ಯವೇ ? ಅಭಿವೃದ್ಧಿಶೀಲ ರಾಷ್ಟ್ರವೆನಿಸಿ, ಯೂರೋ ಯೂನಿಯನ್ನಿನ ಒಳಗೆ ಸೇರಿದ ರಾಷ್ಟ್ರ ಎಂದ ಮಾತ್ರಕ್ಕೆ, ಅದರ ಸಾಲ ತೀರಿಸಬಲ್ಲ ಸಾಮರ್ಥ್ಯವನ್ನು ಲೆಕ್ಕಿಸದೆ ಅಂತರರಾಷ್ಟ್ರೀಯ ಬ್ಯಾಂಕು ಹಣಕಾಸು ಸಂಸ್ಥೆಗಳು, ಬೃಹತ್ ಉದ್ಯಮಗಳು, ಖಾಸಗಿ ಹಣಕಾಸು ಸಂಸ್ಥೆಗಳು ಆ ಸಣ್ಣ ರಾಷ್ಟ್ರಕ್ಕೆ ಅಷ್ಟೊಂದು ಸಾಲ ನೀಡಬಹುದಿತ್ತೆ ? ಬಡವನಿಗೆ ಅವನ ಆಸ್ತಿಪಾಸ್ತಿಯನ್ನು ಗಮನಿಸದೆ ವಿಪರೀತ ಸಾಲ ನೀಡಬಹುದೇ ? ನಮ್ಮಲ್ಲಿ ರೈತನಿಗೆ ಬ್ಯಾಂಕುಗಳೂ ಅಲ್ಲದೆ ಖಾಸಗಿ ಲೇವಾದೇವಿಯವ ಬಡ್ಡಿ-ಚಕ್ರಬಡ್ಡಿ ಮೀಟರ್ ಬಡ್ಡಿಯಲ್ಲಿ ಸಾಲ ನೀಡಿ, ಅವರು ಹಿಂದಿರುಗಿಸಲಿಲ್ಲವೆನ್ನುವ ಆಪಾದನೆ ಸರಿಯೇ ? ಆಂತರಿಕವಾಗಿ ತಮ್ಮದೇ ಜನತೆಗೆ ಬಹುವಾಗಿ ಉಪಯೋಗಕ್ಕೆ ಬಾರದ, ರಫ್ತುಮಾತ್ರದ ವಾಣಿಜ್ಯದ ಬೆಳವಣಿಗೆ ಅಭಿವೃದ್ಧಿ ಎನಿಸಿಕೊಂಡೀತೇ ? ಯೂರೋಪಿಯನ್ ಒಕ್ಕೂಟವೆನ್ನುವುದರ ಸ್ವಭಾವ ರಾಜಕೀಯವೇ, ರಕ್ಷಣಾ ವ್ಯವಸ್ಥೆಯೇ, ಆರ್ಥಿಕ ಒಕ್ಕೂಟವೇ ? ರಾಜ್ಯ ರಾಜ್ಯಗಳ ನಡುವೆ ಗಡಿಯಿಲ್ಲದೆ, ಎಲ್ಲರೂ ಎಲ್ಲ ಕಡೆಗೂ ಮುಕ್ತವಾಗಿ ಚಲಿಸುತ್ತಾ, ವ್ಯವಹಾರ ಮಾಡುತ್ತಾ ಒಂದೇ ಐಕ್ಯವಾದ ರಾಷ್ಟ್ರದಂತೆ ಇರುವಾಗ, ಬೇರೆ ಬೇರೆ ಮಿಲಿಟರಿ ವ್ಯವಸ್ಥೆ, ಬೇರೆ ಬೇರೆ ಬ್ಯಾಂಕುಗಳು ಬಜೆಟ್ಟು ಇವೆಲ್ಲ ಎಷ್ಟು ಸಮಂಜಸ ? ಯೂರೋ ಒಕ್ಕೂಟ ಉಳಿಯಬಲ್ಲುದೇ ? ಉಳಿಯಬೇಕೆ ? ಇಷ್ಟು ವರ್ಷ ಸರ್ವಾಧಿಕಾರ ಅಥವಾ ಪ್ರಜಾಪ್ರಭುತ್ವದ ಮಾರ್ಗದಲ್ಲಿ ಆಳಿದ ಬಂಡವಳಿಗ ಆಳುವ ವರ್ಗ ತಮ್ಮ ದೇಶವನ್ನು ದಿವಾಳಿ ಎಬ್ಬಿಸಿದ ಮೇಲೆ, ಅದರಿಂದ ಲಾಭ ಪಡೆದ ಕೆಲವರನ್ನು ಬಿಟ್ಟು ಮಿಕ್ಕವರಲ್ಲಿ ಬಹುಜನ ತುಸು ಎಡಪಂಥೀಯ ಒಲವಿನ ಸಿರ್ಜಿಯಾ ಪಕ್ಷಕ್ಕೆ ಮತ ನೀಡಿದೆ. ಆದರೆ ಅವರಿಗೇ ಆದರೂ ಬಂಡವಾಳ ವ್ಯವಸ್ಥೆಗೆ ಒಗ್ಗದ ಬದಲಾವಣೆ ತರುವ ಸ್ವಾತಂತ್ರ್ಯ ಎಲ್ಲಿಯದು ? ಸೋತ ಯೂರೋ ಐಎಂಎಫ್ ಬಂಡವಳಿಗರು ಎಡಪಂಥೀಯಕ್ಕೆ ಬೆಂಬಲ ನೀಡುವುದು ಖಂಡಿತ ಇಲ್ಲ. ಸಮಸ್ಯೆಗೆ ಈ ಚುನಾವಣೆಯಿಂದಲೂ ಪರಿಹಾರ ಸಿಕ್ಕಿಲ್ಲ.

ಈಗಾಗಲೇ ಗ್ರೀಸಿನಲ್ಲಿ ಆದರೆ ಆರ್ಥಿಕ ಹಿಂಜರಿತ, ಸ್ವಲ್ಪ ಕಡಿಮೆ ಮಟ್ಟದಲ್ಲಿ ಇಟಲಿ, ಸ್ಪೈಯಿನ್ ಮತ್ತು ಪೋರ್ತುಗಲ್ಲಿನಲ್ಲೂ ಉಂಟಾಗಿದೆ. ಫ್ರಾನ್ಸ್‌ನ ಆರ್ಥಿಕ-ಸಾಮಾಜಿಕ ಸ್ಥಿತಿಯೂ ಅಭದ್ರವಾಗಿದೆ. ಈ ಒಕ್ಕೂಟದ ಕೇಂದ್ರ ಜರ್ಮನಿ ಮಾತ್ರ ಬಲಿಷ್ಠವಾಗಿದ್ದು, ಅದು ಒಕ್ಕೂಟದ ಧ್ಯೇಯಕ್ಕಾಗಿ ತನ್ನದೇ ಸಂಪತ್ತನ್ನು ಎಷ್ಟು ಹಂಚಿಕೊಂಡೀತು ? ಇನ್ನೂ ಸ್ವಾರಸ್ಯದ ಸಂಗತಿ ಎಂದರೆ ಇದೇ ಜರ್ಮನಿಯನ್ನು ಎರಡನೆಯ ಮಹಾಯುದ್ಧ ತರುವಾಯ ಪುನರ್‌ನಿರ್ಮಾಣ ಮಾಡಲು ಗ್ರೀಸ್ ದೇಶವೂ ಸೇರಿ, ಸಾಲ ಮನ್ನಾ ಅಲ್ಲದೆ, ಸಾಲ ನೀಡಿ ಸಹಕರಿಸಿದ್ದಾರೆ. ಈಗ ಜರ್ಮನಿ ಈ ಸಂಕಷ್ಟದಲ್ಲಿರುವ ರಾಷ್ಟ್ರಗಳಿಗೆ ಮುಕ್ತವಾಗಿ ನೆರವು ನೀಡಬೇಡವೇ ? ಕೊನೆಯಿಲ್ಲದ ಚರ್ಚೆ ನಡೆಯುತ್ತಿದೆ, ಪರಿಹಾರ ಇನ್ನೂ ಕಂಡಿಲ್ಲ. ಬಂಡವಾಳ ವ್ಯವಸ್ಥೆಯ ತಿಳಿವಳಿಕೆಯ ಪರಿಮಿತಿಯಲ್ಲಿ ಕಳೆದ ನೂರು ವರ್ಷ ಗಳಿಂದ ಗಮನಿಸಿರುವುದು, ಈ ವ್ಯವಸ್ಥೆ ಒಂದು ಬಿಕ್ಕಟ್ಟಿನಿಂದ, ಇನ್ನೊಂದು ಹೆಚ್ಚಿನ ಬಿಕ್ಕಟ್ಟಿಗೆ ಮುಂದುವರಿಯುತ್ತಿದ್ದು, ಅದು ಬಿಕ್ಕಟ್ಟಿನ ಸರಣಿ ಯಾಗಿದೆಯೇ ವಿನಾ ಪರಿಹಾರವಾಗಿಲ್ಲ. ೧೯೨೦ರ ದಶಕದ ಅಮೆರಿಕದ ಮಹಾನ್ ಆರ್ಥಿಕ ಕುಸಿತದ ಛಾಯೆ ಎಲ್ಲೆಲ್ಲೂ ಮುಂದುವರಿದಿದೆ. ನಮ್ಮ ಚಿದಂಬರಂ, ಮನಮೋಹನರು ೨೦೦೦ದಿಂದ ನಡೆಸಿದ ಈ ಮಾರ್ಗ ಈಗ ಮುಂದುವರಿದಿದೆ. ಗ್ರೀಸ್ ಜನ ಈ



## ನಮನ

ಬರಹಗಾರರೂ, ನಿವೃತ್ತ ಇಂಗ್ಲಿಷ್ ಪ್ರಾಧ್ಯಾಪಕರೂ ಆಗಿದ್ದ ಪ್ರೊ॥ ಹಾಲಾಡಿ ಮಾರುತಿ ರಾವ್ (೮೫ ವರ್ಷ) ದಿನಾಂಕ ೦೮-೦೭-೨೦೧೫ರಂದು ನಿಧನರಾಗಿದ್ದಾರೆ. ಶ್ರೀಯುತರು 'ಹೊಸತು' ಪತ್ರಿಕೆಯ ಆರಂಭದ ದಿನಗಳಲ್ಲಿ ಸಮಾಲೋಚಕ ಮಂಡಲಿಯ ಸದಸ್ಯರಾಗಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅವರಿಗೆ 'ಹೊಸತು' ಮತ್ತು 'ನವಕರ್ನಾಟಕ' ಬಳಗದ ಗೌರವಪೂರ್ಣ ನಮನಗಳು.

## ಸ್ವಾತಂತ್ರ್ಯೋತ್ಸವದ ಶುಭಾಶಯಗಳು

ದೇಶ ೬೯ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸುತ್ತಿದೆ. ಇಷ್ಟು ವರ್ಷಗಳ ಈ ಸ್ವತಂತ್ರ ದೇಶ ಸಂಪೂರ್ಣ ಸ್ವಾವಲಂಬನೆಯ ಕಡೆಗೆ ಸಾಗಬೇಕಿತ್ತು, ಸ್ವಾತಂತ್ರ್ಯ ಹೋರಾಟದ ಕನಸುಗಳನ್ನು ನನಸಾಗಿಸಿ ಅಂದಿನ ತ್ಯಾಗ ಬಲಿದಾನಗಳಿಗೆ ಅರ್ಥ ತುಂಬಬೇಕಿತ್ತು. ಆದರೆ ಸ್ವತಂತ್ರ ಭಾರತ ಮತ್ತೆ ನವವಸಾಹತು ರಾಷ್ಟ್ರವಾಗಿ ಪರಿವರ್ತನೆಯಾಗುತ್ತಿದೆ. ಇಂಥ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟದ ಆ ದಿನಗಳು ನಮಗೆ ಸ್ಫೂರ್ತಿಕೊಟ್ಟು ಇಂದಿನ ಅಡೆತಡೆಗಳನ್ನು ಎದುರಿಸಿ ಮುಂದುವರಿಯುವಂತೆ ಮಾಡಲಿ. ಅಂದಿನ ಕನಸುಗಳನ್ನು ನನಸಾಗಿಸಿಕೊಳ್ಳಲು ನಾವೆಲ್ಲ ಸನ್ನದ್ಧರಾಗೋಣ ಎಂದು ಆಶಿಸುತ್ತಾ 'ಹೊಸತು' ಮಾಸಿಕದ ಓದುಗರ ಬಳಗಕ್ಕೆ, ನಾಡಿನ ಜನತೆಗೆ ಸ್ವಾತಂತ್ರ್ಯೋತ್ಸವದ ಶುಭಾಶಯಗಳು. –ಸಂ.

ಮಾರ್ಗ ಸರಿಯಿಲ್ಲ ಎನ್ನುತ್ತಿದೆ. ಗ್ರೀಸ್ ದೇಶ ಯೂರೋ ಒಕ್ಕೂಟದಿಂದ ಹೊರಬಂದು, ತನ್ನ ಸಾಲಗಳನ್ನು ಸದ್ಯಕ್ಕೆ ತೀರಿಸುವುದಿಲ್ಲ ಎಂದು ಹೇಳಬೇಕಾಗುತ್ತದೆ. ಆಗ ಆಂತರಿಕವಾಗಿ ಒಗ್ಗಟ್ಟಿನಿಂದ ತನ್ನ ಅರ್ಥವ್ಯವಸ್ಥೆಯನ್ನು ಶುಚಿಗೊಳಿಸಿ, ಅಭಿವೃದ್ಧಿಯತ್ತ ಸಾಗಬಹುದು. ಯೂರೋ ನಾಣ್ಯ ಬಿಟ್ಟು ತನ್ನದೇ ಡ್ರಾಚಾ ನಾಣ್ಯ ಚಲಾವಣೆಗೆ ತರಬಹುದು. ಅಮೆರಿಕ, ಚೀನಾ, ರಷ್ಯ ನೆರವು ನೀಡಬಹುದು. ಆದರೆ ಗ್ರೀಸ್ ಯೂರೋ ಒಕ್ಕೂಟದಿಂದ ಹೊರಬಂದರೆ ಯೂರೋ ಒಕ್ಕೂಟದ ಕಟ್ಟಡ ದುರ್ಬಲಗೊಳ್ಳುತ್ತದೆ. ಇಟಲಿ, ಸ್ಪೆಯಿನ್, ಪೋರ್ತುಗಲ್ಲುಗಳೂ ಹಾಗೇ ಮಾಡಬೇಕಾಗ ಬಹುದು ಹಾಗೆಯೇ ನ್ಯಾಟೋ ಮತ್ತು ಅಮೆರಿಕ ಪೂರ್ವ ಯೂರೋಪ್‌ನತ್ತ ಉಕ್ರೇನ್‌ವರೆಗೆ ಧಾವಿಸಿರುವ ನಡೆಗೆ ತೀವ್ರ ಹಿನ್ನಡೆಯಾಗುತ್ತದೆ. ಸಣ್ಣ ಸಣ್ಣ ರಾಷ್ಟ್ರಗಳಿಗೆ ಪಶ್ಚಿಮದವರು ನಿಯಂತ್ರಿಸಿರುವ ಹಣಕಾಸು ವ್ಯವಸ್ಥೆಯಲ್ಲಿ ವಿಶ್ವಾಸ ಆಗಲೇ ಕುಸಿದಿದೆ. ಅದರಿಂದ ಹೊರಗೆ ಬರುವ ಪ್ರಯತ್ನವೇ ಬ್ರಿಕ್ಸ್, ಷಾಂಗೈ ಸಹಕಾರ, ಸಾರ್ಕ್ ಮುಂತಾದುವು. ಈ ಬೆಳವಣಿಗೆ ಅಮೆರಿಕದ ಜಾಗತಿಕ ನಾಯಕತ್ವವನ್ನು ಪ್ರಶ್ನಿಸುತ್ತದೆ. ಈಗಾಗಲೇ ಪೆಂಟಗನ್ ಅಮೆರಿಕ ತನ್ನ ಪ್ರತಿಷ್ಠೆ ಕಾಯ್ದುಕೊಳ್ಳಲು ರಷ್ಯಾದ ವಿರುದ್ಧ ಯುದ್ಧಕ್ಕೆ ಹೋಗಬೇಕು ಅನ್ನುತ್ತಿದೆ. ಗ್ರೀಸ್‌ನ ಸಮಸ್ಯೆ ವಿಶ್ವ ಬಂಡವಾಳ ಜಗತ್ತಿನ ರಚನೆ ಶಿಥಿಲಗೊಳ್ಳುತ್ತಿರುವುದರ ತಕ್ಷಣದ ಸೂಚನೆ.

ಈಗ ಅಧಿಕಾರದಲ್ಲಿರುವ ಸಿರಿಜಾ ಒಕ್ಕೂಟವನ್ನು ರ್‍ಯಾಡಿಕಲ್ ಲೆಫ್ಟ್ ಅನ್ನುತ್ತಾರಾದರೂ ಅದು ಅಲ್ಲಿಯ ಕಮ್ಯುನಿಸ್ಟ್ ಪಕ್ಷವನ್ನು ಒಳಗೊಂಡಿಲ್ಲ. ಅಲ್ಲಿಯ ಎಲ್ಲ ಎಡಪಕ್ಷಗಳೂ ತಮ್ಮದೇ ಸಮಸ್ಯೆ ಎನ್ನುವಂತೆ, ಅವಕಾಶ ಎನ್ನುವಂತೆ ಇನ್ನೂ ದನಿಗೂಡಿಸಿದಂತಿಲ್ಲ. ಯೂರೋ ಒಕ್ಕೂಟ ಮತ್ತು ಬ್ಯಾಂಕ್ ಹೊಸ ಸಾಲ ನೀಡಲು, ಬಾಕಿ ವಸೂಲಿ ತಡೆಯಲು ಮತ್ತಷ್ಟು ಮಿತವ್ಯಯ ಹೇರುವುದು ಅರ್ಥಹೀನವಾಗಿದೆ. ಆ ದಾರಿ ಹಿಡಿದೇ ಅಲ್ಲಿಯ ಈ ಅಸ್ತವ್ಯಸ್ತ ಸ್ಥಿತಿ ಉಂಟಾಗಿರುವುದು. ಸಿರಿಜಾಗೆ ಆ ಮಿತವ್ಯಯ ನೀತಿಯನ್ನು ಒಪ್ಪಬೇಕಾದ ಅನಿವಾರ್ಯ ಇಲ್ಲವೆಂದು ದೇಶದ ಮತದಾರರು ಈಗಷ್ಟೆ ಭಾರಿ ಬಹುಮತದಲ್ಲಿ ಹೇಳಿದ್ದಾರೆ. ಆದರೂ ಈ ಪರಸ್ಪರ ಚರ್ಚೆಯಲ್ಲಿ ಯೂರೋ ಗುಂಪಿಗೆ ಇನ್ನೂ ಹೊಸ ನೀತಿ ಹೊಳೆದಿಲ್ಲ. ಹಲವು ಅರ್ಥಶಾಸ್ತ್ರಜ್ಞರು ಹಲವು ಸಲಹೆಗಳನ್ನು ನೀಡಿದ್ದಾರೆ. ಒಂದು ಒಕ್ಕೂಟ ಬಿಟ್ಟು ಹೊರಗೆ ಬಂದು ಆಂತರಿಕ ಅರ್ಥವ್ಯವಸ್ಥೆಯನ್ನು ಸುಧಾರಿಸಿಕೊಳ್ಳುವುದು; ಯೂರೋ ನಾಣ್ಯ ಬಿಟ್ಟು ತಮ್ಮದೇ ಡ್ರಾಚ ನಾಣ್ಯಕ್ಕೆ ಹಿಂದಿರುಗುವುದು. ಆರ್ಥಿಕ ಪುನಃಶ್ಚೇತನಕ್ಕೆ ಬೇಕಾದ ನೆರವಿನ ನೀತಿಗಳನ್ನು ಮಾಡುವುದು ಇತ್ಯಾದಿ. ಮತ್ತೊಂದು ಸಲಹೆ ಯೂರೋ ರಾಷ್ಟ್ರಗಳು ತುರ್ತುಸಭೆ ಮಾಡಿ ಸಾಲದ ಬಹುಭಾಗವನ್ನು ಮನ್ನಾ ಮಾಡಿ, ಬಾಕಿ ವಸೂಲು ಮಾಡದೆ, ಹೊಸ ಸಾಲ/ನೆರವು ನೀಡುವುದು. ವಿಪರೀತ ಮಿತವ್ಯಯ ಮತ್ತು ಬಜೆಟ್ ಕೊರತೆ ಮಾರ್ಗ ಬಿಟ್ಟು, ಒಂದಿಷ್ಟು ಡಿಫಿಸಿಟ್ – ಕೊರತೆ ಬಜೆಟ್ ಮಾಡಲು ಅವಕಾಶ ಕೊಡುವುದು ಕೀನ್ಸ್ ಅರ್ಥಶಾಸ್ತ್ರಜ್ಞನ ಮಾರ್ಗ ಇತ್ಯಾದಿ.

ಎಡಪಂಥೀಯ ಒಗ್ಗಟ್ಟಿದ್ದರೆ, ಅವರ ಕಾರ್ಮಿಕ ಸಂಘಗಳು ಏಕೆ ಸುಮ್ಮನೆ ಕುಳಿತಿವೆ ? ಯೂರೋಪಿನ ರಾಷ್ಟ್ರಗಳ ಕಾರ್ಮಿಕರು ಏಕೆ ಮೌನವಾಗಿದ್ದಾರೆ ? ಜಾಗತಿಕ ಕಾರ್ಮಿಕ ಚಳುವಳಿ ಏಕೆ ಪ್ರತಿಕ್ರಿಯಿಸುತ್ತಿಲ್ಲ ? ಜಗತ್ತಿನ ವಾಣಿಜ್ಯ ನೌಕಾ ವ್ಯವಹಾರ ಬಹಳ ಹಿರಿದು, ಇದರ ಶೇ. ೨೦ರಷ್ಟು ಗ್ರೀಸಿನದೇ. ಅವರ ಪ್ರವಾಸ ಉದ್ಯಮ ಅತ್ಯಂತ ಆಕರ್ಷಕ. ಸರ್ಕಾರದ ಒಡೆತನದ ಉದ್ದಿಮೆಗಳನ್ನು ಸುಲಭವಾಗಿ ಖಾಸಗಿಗೆ ಬಿಟ್ಟುಕೊಟ್ಟರೂ ಪ್ರಯೋಜನವಾಗಿಲ್ಲ. ಈ ಕೂಡಲೇ ನೌಕಾ ವಾಣಿಜ್ಯ, ಪ್ರವಾಸೀ ಉದ್ಯಮಗಳನ್ನು ರಾಷ್ಟ್ರೀಕೃತ ಮಾಡಲಾಗದೆ ? ಹಿಂದಿನ ಬೂರ್ಷ್ವಾ ಸರ್ಕಾರಗಳು ಅನವಶ್ಯವಾಗಿ ಅಪಾರ ಸಾಲ ತೆಗೆದು ಅರ್ಥವ್ಯವಸ್ಥೆಯನ್ನು ಹಾಳುಗೆಡವಿರುವಾಗ, ಆ ಸಾಲಗಳನ್ನು ಸರ್ಕಾರ ನೀಡಲಾಗುವುದಿಲ್ಲ ಎಂದು ಎಡಪಂಥೀಯ ನೀತಿಯ ಘೋಷಣೆ ಸಾಧ್ಯವಾಗಬೇಕಿತ್ತು. ಈ ಎಡಪಂಥೀಯ ಬೆಳವಣಿಗೆ ಆಗುವ ಸಾಧ್ಯತೆಗಳು ಇವೆ; ಆದರೆ ಇನ್ನೂ ಆಗಿಲ್ಲ. ಫ್ರಾನ್ಸಿನ ಸಮಾಜವಾದೀಯ ಅನ್ನುವ ಹಾಲಿ ಸರ್ಕಾರಕ್ಕೆ ನಾಚಿಕೆಯಾಗಬೇಕು. ಅಲ್ಲಿಯ ಕಾರ್ಮಿಕರು ಮತ್ತು ಜರ್ಮನಿಯ, ಇಟಲಿಯ ಕಾರ್ಮಿಕರು ಈ ಕುರಿತು ಈಗಾಗಲೇ ಬೆಂಬಲ ಸೂಚಿಸಿ ಬೀದಿಗೆ ಬರಬೇಕಿತ್ತು. ವಿಶ್ವದಾದ್ಯಂತ ಕಾರ್ಮಿಕ ಸಂಘಗಳು "ಗ್ರೀಸ್ ಕುತ್ತಿಗೆಯಿಂದ ನಿಮ್ಮ ಕೈ ತೆಗೆಯಿರಿ" ಎಂದು ಆರ್ಭಟಿಸಬೇಕಿತ್ತು. ಈ ಸಾಧ್ಯತೆಯನ್ನು ತಪ್ಪಿಸಲು ಬಹುಶಃ ಅಮೆರಿಕ ಮಧ್ಯೆ ಪ್ರವೇಶಿಸಬಹುದಾಗಿತ್ತು.

ಸಮಾಜವಾದೀಯವಾದ ಈ ಯಾವ ಮಾರ್ಗವನ್ನು ಬಿಟ್ಟು ಸಿರಿಜಾ ನಾಯಕನ ಸಿಪ್ರಾಸ್‌ನ ಮರ್ಯಾದೆ ಕಳೆದು ಈಗಷ್ಟೆ ಯೂರೋ ನಾಯಕತ್ವ ಈ ಹಿಂದಿನ ಎಲ್ಲ ಸಂದರ್ಭಗಳಿಗೂ ಮೀರಿದ ವಿಪರೀತ ಕಷ್ಟದ ಷರತ್ತುಗಳನ್ನು ವಿಧಿಸಿ, ಒಂದಿಷ್ಟು ಸಾಲ ನೀಡಲು ಮುಂದಾಗಿದೆ. ಇದಕ್ಕೆ (ಜುಲೈ ೧೬)ರಂದು ಗ್ರೀಕ್ ಪಾರ್ಲಿಮೆಂಟ್ ಒಪ್ಪಿಗೆ ನೀಡಿದೆ. ಇನ್ನುಮುಂದೆ ಯೂರೋ ಐಎಂಎಫ್ ನಾಯಕರು ಸುಮಾರು ೯೦ ಬಿಲಿಯ ಯೂರೋ ಸಾಲದ ವಿವರಗಳನ್ನು ಚರ್ಚಿಸಬೇಕು. ಏತನ್ಮಧ್ಯೆ ಐಎಂಎಫ್ ಯೂರೋ ನಾಯಕರ ಕ್ರೂರ ಕ್ರಮಗಳನ್ನು ವಿರೋಧಿಸಿ, ಗ್ರೀಸಿಗೆ ಒಂದಿಷ್ಟು ಸಾಲ ಮನ್ನಾ ಮುಂತಾದ ಪರಿಹಾರ ನೀಡಬೇಕು ಎಂದಿದೆ. ಅದರ ನೀತಿ ಅಮೆರಿಕದ ನೀತಿ ಎನ್ನಬಹುದು. ಒಟ್ಟಿನಲ್ಲಿ ಇವರು ಯಾರಿಗೂ ಗ್ರೀಸ್ ಯೂರೋ ಯೂನಿಯನ್ ಬಿಡುವುದು ಇಷ್ಟವಿಲ್ಲ.

ಕೊನೆಯದಾಗಿ ಬೂರ್ಷ್ವಾ ಪ್ರಜಾಪ್ರಭುತ್ವ ಕುರಿತು ಒಂದು ಕುಹಕ. ಸಿರಿಜಾ ನಾಯಕ ಈಗಷ್ಟೆ ಯೂರೋಪಿನ ಷರತ್ತು ಒಪ್ಪೋಣವೆ ಬೇಡವೆ ಎಂದು ಮತ ಸಂಗ್ರಹ ಮಾಡಿದ. ಜನ ಬೇಡ ಎಂದರು. ತದನಂತರ ನಾಯಕ ಸಿಪ್ರಾಸ್ ಅದಕ್ಕಿಂತಲೂ ಕಠಿಣ ಷರತ್ತುಗಳನ್ನು ಒಪ್ಪಿಕೊಂಡರೆ, ಆತ ಜನಮತಕ್ಕೆ ಹೇಗೆ ಮನ್ನಣೆ ನೀಡಿದಂತೆ ? ಆಳುವ ಬಂಡವಾಳಿಗ ವರ್ಗಕ್ಕೆ ಸಮಸ್ಯೆ ಪರಿಹರಿಸದಾದಾಗ ಎಡಪಕ್ಷಗಳಿಗೆ ಒಂದಿಷ್ಟು ಮತ ದೊರೆಯಬಹುದು. ಆದರೆ ಅದಕ್ಕೆ ನಿಜವಾದ ಅಧಿಕಾರ ದೊರೆಯುವುದಿಲ್ಲ ಅಲ್ಲವೆ ?

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು – ೫೬೨ ೧೫೭

## ಮರ್ಜನ

ಮರಳು ದಂಧೆ
ರಂಗೇರಿತು
ಸದನ.

ಮರುಳುಮಾಡಿ
ಸುಲಿದರು
ಶ್ರೀಸಾಮಾನ್ಯನ
ಮರ್ಜನ.
ಮರಳೋ ? ಮರುಳೋ ?

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೫೬೦ ೦೭೩

## ಅಮೆರಿಕ – ಮುಂದುವರಿಯುತ್ತಿರುವ ಜನಾಂಗ ದ್ವೇಷ

ಪೊಲೀಸರಿಂದ ರಕ್ಷಣೆ ದೊರೆಯುತ್ತದೆ ಎಂಬುದಕ್ಕಿಂತ ಹೆಚ್ಚಾಗಿ ಅವರನ್ನು ಕಂಡರೆ ಆಫ್ರಿಕನ್ ಅಮೆರಿಕನ್ನರು ಭಯಪಡುತ್ತಾರೆ. ತಮ್ಮ ಮಕ್ಕಳು ಯಾವಾಗ ಯಾವ ಪೊಲೀಸು ಅಧಿಕಾರಿಯ ಗುಂಡಿಗೆ ಬಲಿಯಾಗುತ್ತಾರೊ, ಹೊಡೆತ ತಿನ್ನುತ್ತಾರೋ, ಬಂಧನಕ್ಕೊಳಗಾಗುತ್ತಾರೊ ಎಂಬ ಭೀತಿಯಲ್ಲೇ ಅವರು ದಿನ ನೂಕಬೇಕಾಗಿ ಬಂದಿದೆ. ಹೀಗೊಂದು ಅಭಿಪ್ರಾಯ ವ್ಯಕ್ತಪಡಿಸಿರುವವರು ಅಮೆರಿಕದ ಸಮಾಜಶಾಸ್ತ್ರಜ್ಞರು. ಈಚೆಗೆ ಅಮೆರಿಕದಲ್ಲಿ ಆಫ್ರಿಕನ್ ಅಮೆರಿಕನ್ನರ ಮೇಲೆ ಹೆಚ್ಚಾಗುತ್ತಿರುವ ಪೊಲೀಸರ ದೌರ್ಜನ್ಯ ಕುರಿತು ಅಮೆರಿಕನ್ ಸಮಾಜಶಾಸ್ತ್ರಜ್ಞರ ಸಂಘದ ಹತ್ತು ಮಂದಿ ಸದಸ್ಯರು ಅಧ್ಯಯನ ನಡೆಸಿ ಈ ಅಭಿಪ್ರಾಯಕ್ಕೆ ಬಂದಿದ್ದಾರೆ. ಅದು ನಿಜವೂ ಹೌದು. ೨೦೧೫ರ ಮೊದಲ ಐದು ತಿಂಗಳಲ್ಲೇ ೫೦೦ ಮಂದಿ ಆಫ್ರಿಕನ್ ಅಮೆರಿಕನ್ನರು ಪೊಲೀಸರ ಹಿಂಸಾಚಾರಕ್ಕೆ ಬಲಿಯಾಗಿದ್ದಾರೆ ಎಂದು ಪತ್ರಿಕಾ ವರದಿಗಳು ಲೆಕ್ಕ ಹಾಕಿವೆ. ಸಾಧಾರಣವಾಗಿ ಪೊಲೀಸರು ಇಂಥ ಪ್ರಕರಣಗಳನ್ನು ಮಾಧ್ಯಮಗಳಿಂದ ದೂರ ಇರಿಸುತ್ತಾರೆ. ಈ ಲೆಕ್ಕಾಚಾರದ ಪ್ರಕಾರ ಪ್ರತಿದಿನ ಮೂವರು ಆಫ್ರಿಕನ್ ಅಮೆರಿಕನ್ನರು ಪೊಲೀಸರ ದೌರ್ಜನ್ಯಕ್ಕೆ ಬಲಿಯಾಗುತ್ತಿದ್ದಾರೆ ಎಂದಾಯಿತು.

ಅಮೆರಿಕದ ದಕ್ಷಿಣ ಕೆರೋಲಿನಾದ ಚಾರ್ಲೆಸ್ಟನ್ ಎಂಬಲ್ಲಿ ಇರುವ ಆಫ್ರಿಕನ್ ಅಮೆರಿಕನ್ನರ ಚರ್ಚಿನ ಮೇಲೆ ಬಿಳಿಯನೊಬ್ಬ ನಡೆಸಿದ ಗುಂಡಿನ ದಾಳಿಯಲ್ಲಿ ಜೂನ್ ೧೭ರಂದು ೯ ಮಂದಿ ಹತರಾದರು. ಇವರಲ್ಲಿ ೬ ಮಂದಿ ಸ್ತ್ರೀಯರು. ಈ ದಾಳಿ ಅಮೆರಿಕನ್ನರನ್ನು ಮುಖ್ಯವಾಗಿ ಆಫ್ರಿಕನ್ ಅಮೆರಿಕನ್ನರನ್ನು ಬೆಚ್ಚಿಬೀಳಿಸಿತು. ಇಂಥ ದಾಳಿಗಳು ಆಗಾಗ ನಡೆಯುತ್ತಲೇ ಇವೆ.

ಪೊಲೀಸರು ಏಕೆ ಆಫ್ರಿಕನ್ ಅಮೆರಿಕನ್ ಯುವಕರನ್ನು ಕೊಲ್ಲುತ್ತಾರೆ ? ಇದಕ್ಕೆ ಸಮಾಜಶಾಸ್ತ್ರಜ್ಞರು ನೀಡುವ ಒಂದು ಉತ್ತರ ಪೂರ್ವಗ್ರಹ. ಒಂದು ಬಗೆಯ ಜನಾಂಗೀಯ ದ್ವೇಷ. ಇದು ಬಹಳ ಹಿಂದಿನಿಂದ, ಪ್ರಾಯಶಃ 'ಕುಕ್ಲುಕ್ಸ್ ಕ್ಲಾನ್' ಹಿನ್ನೆಲೆಯಿಂದ ಬಂದದ್ದು. ಒಂದು ಕಾಲದಲ್ಲಿ ಬಿಳಿಯರ ಈ ಸಂಘಟನೆ ಕರಿಯರನ್ನು ಕಗ್ಗೊಲೆ ಮಾಡುವುದಕ್ಕೆ ಕುಖ್ಯಾತವಾಗಿತ್ತು. ಫ್ಲಾರಿಡಾ ರಾಜ್ಯದಲ್ಲಿ ನಡೆಸಿದ ಸಮೀಕ್ಷೆಯೊಂದರಲ್ಲಿ ಹಲವು ಪೊಲೀಸು ಅಧಿಕಾರಿಗಳು ಜನಾಂಗ ದ್ವೇಷದ ಹಿನ್ನೆಲೆಯುಳ್ಳವರಾಗಿದ್ದುದು ಕಂಡುಬಂದಿತು. 'ಅಮೆರಿಕದಲ್ಲಿ ಜನಾಂಗ ದ್ವೇಷ ಇನ್ನೂ ಇದೆ.' ಎಂದು ಆಫ್ರಿಕನ್ ಅಮೆರಿಕನ್ನರ ಅಭಿವೃದ್ಧಿಗಾಗಿ ಸ್ಥಾಪಿತವಾಗಿರುವ ಸಂಸ್ಥೆಯೊಂದು ಅಭಿಪ್ರಾಯಪಟ್ಟಿದೆ. ಆಫ್ರಿಕನ್ ಅಮೆರಿಕನ್ನರು ಎಂಬುದಾಗಿ ಗುರ್ತಿಸುವ ಕಪ್ಪು ಜನಾಂಗದವರು ಪೊಲೀಸರ ದೌರ್ಜನ್ಯದ ವಿರುದ್ಧ ದೇಶಾದ್ಯಂತ ಪ್ರತಿಭಟನೆಗಳನ್ನು ನಡೆಸಿದ್ದಾರೆ. 'ಕರಿಯರ ಜೀವ ಕಡೆಗಣಿಸದಿರಿ' ಎನ್ನುವುದು ಈ ಪ್ರತಿಭಟನೆಗಳ ಘೋಷವಾಕ್ಯವಾಗಿದೆ. ಹದಿಹರೆಯದ ಯುವಕ ಟ್ರೇಯ್‌ವಾನ್ ಪೊಲೀಸರ ಗುಂಡಿಗೆ ಬಲಿಯಾದಾಗ ನ್ಯೂಯಾರ್ಕ್, ವಾಷಿಂಗ್ಟನ್, ಟೆಕ್ಸಾಸ್, ಡೆಟ್ರಾಯಿಟ್ ಮೊದಲಾದ ಕಡೆ ಪ್ರತಿಭಟನೆಗಳು ನಡೆದು ವಿಶ್ವದ ಗಮನ ಸೆಳೆದವು. ಕರಿಯ ಜನಾಂಗದವರಲ್ಲಿ ತಾರತಮ್ಯ ಧೋರಣೆಯಿಂದಾಗಿ ನಿರುದ್ಯೋಗ ಅಧಿಕ ಪ್ರಮಾಣದಲ್ಲಿದೆ. ೨೦೧೫ರ ಮೇ ತಿಂಗಳಲ್ಲಿ ಸರಕಾರ ಬಿಡುಗಡೆ ಮಾಡಿರುವ ಅಂಕಿ–ಅಂಶಗಳ ಪ್ರಕಾರ ಕರಿಯರಲ್ಲಿ ನಿರುದ್ಯೋಗದ ಪ್ರಮಾಣ ಶೇ. ೧೦.೨ರಷ್ಟಿದೆ. ಅದೇ ಬಿಳಿಯರಲ್ಲಿ ಅದು ಶೇ. ೪.೭ರಷ್ಟಿದೆ. ಪದವೀಧರರಾಗಿದ್ದರೂ ಕರಿಯರಿಗೆ ಉದ್ಯೋಗ ದೊರೆಯುವುದು ಕಷ್ಟ. ಬಡತನ ಅವರನ್ನು ಕಾಡುತ್ತಿದೆ. ಇದರ ಮೇಲೆ ವರ್ಣಭೇದ ಮತ್ತು ಪೊಲೀಸರ ದಬ್ಬಾಳಿಕೆ ಬೇರೆ ಅಧಿಕವಾಗಿದೆ.

## ಇರಾನ್ ನ್ಯೂಕ್ಲಿಯರ್ ಒಪ್ಪಂದ – ದಿಗ್ಬಂಧನ ಅಂತ್ಯ

ಹತ್ತು ವರ್ಷಗಳಿಗೂ ಹೆಚ್ಚು ಕಾಲದಿಂದ ಪಶ್ಚಿಮ ರಾಷ್ಟ್ರಗಳು ಇರಾನಿನ ಮೇಲೆ ವಿಧಿಸಿದ್ದ ಆರ್ಥಿಕ ದಿಗ್ಬಂಧನ ಕೊನೆಗೂ ಅಂತ್ಯಗೊಂಡಿದೆ. ಇತ್ತೀಚೆಗೆ ವಿಯೆನ್ನಾದಲ್ಲಿ ನಡೆದ ಮಾತುಕತೆಗಳಲ್ಲಿ ಇರಾನ್ ಮತ್ತು ಪಶ್ಚಿಮದ ಆರು ರಾಷ್ಟ್ರಗಳು ನ್ಯೂಕ್ಲಿಯರ್ ಶಕ್ತಿ ವಿಚಾರದಲ್ಲಿ ಒಪ್ಪಂದವೊಂದಕ್ಕೆ ಸಹಿ ಹಾಕಿದುವು. ಈ ಒಪ್ಪಂದದ ಪ್ರಕಾರ ಇರಾನ್ ತನ್ನ ನ್ಯೂಕ್ಲಿಯರ್ ಯೋಜನೆಯನ್ನು ಮಿತಿಗೊಳಪಡಿಸಲು ಸಮ್ಮತಿಸಿದೆ. ಕೆಲ ತಿಂಗಳ ಹಿಂದೆ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ ಮತ್ತು ಇರಾನಿನ ಅಧ್ಯಕ್ಷ ಹಸ್ಸನ್ ರೌಹಾನಿ ಭೇಟಿಯಾಗಿದ್ದಾಗ ಇರಾನಿನ ನ್ಯೂಕ್ಲಿಯರ್ ಕಾರ್ಯಕ್ರಮದ



ಕುರಿತು ಚರ್ಚಿಸಿ ಒಂದು ಒಪ್ಪಂದಕ್ಕೆ ಬರಲು ತೀರ್ಮಾನಿಸಿದ್ದರು. ಅದಕ್ಕೆ ಪೂರಕವಾಗಿ ಜುಲೈ ೧೪ರಂದು ಇರಾನ್ ಮತ್ತು ಪಶ್ಚಿಮ ರಾಷ್ಟ್ರಗಳು ವಿಯೆನ್ನಾದಲ್ಲಿ ಒಂದು ಒಪ್ಪಂದಕ್ಕೆ ಸಹಿ ಹಾಕಿದುವು. ಇದರಿಂದ ಅಮೆರಿಕ, ಯೂರೋಪಿಯನ್ ಯೂನಿಯನ್ ಮತ್ತು ವಿಶ್ವಸಂಸ್ಥೆ ಇರಾನಿನ ಮೇಲೆ ವಿಧಿಸಿದ್ದ ಆರ್ಥಿಕ ದಿಗ್ಬಂಧನವನ್ನು ತೆರವುಗೊಳಿಸಿವೆ. ಆರ್ಥಿಕ ದಿಗ್ಬಂಧನದಿಂದಾಗಿ ಇರಾನ್ ಹಾಗೂ ಅಲ್ಲಿನ ಜನಸಾಮಾನ್ಯರು ತೀವ್ರವಾದ ಸಂಕಷ್ಟಕ್ಕೆ ಗುರಿಯಾಗಿದ್ದರು ಒಂದು ದಶಕದಿಂದ. ಅಧ್ಯಕ್ಷ ಒಬಾಮಾ ಅಧಿಕಾರಾವಧಿಯಲ್ಲಿ ತೆರವುಗೊಂಡ ಎರಡನೇ ಆರ್ಥಿಕ ದಿಗ್ಬಂಧನ ಇದು. ಇನ್ನೊಂದು ಇದಕ್ಕೆ ಮುಂಚೆ ದಶಕಗಳ ಕಾಲ ಪುಟ್ಟ ಕ್ಯೂಬಾದ ಮೇಲೆ ವಿಧಿಸಿದ್ದ ದಿಗ್ಬಂಧನವನ್ನು ಅಮೆರಿಕ ತೆರವುಗೊಳಿಸಿತ್ತು. ಇದರ ಜೊತೆಗೆ ಅಮೆರಿಕ ಅರ್ಧ ಶತಮಾನದ ನಂತರ ಕ್ಯೂಬಾದೊಂದಿಗೆ ರಾಯಭಾರಿ ಸಂಬಂಧಗಳನ್ನು ಸ್ಥಾಪಿಸಿತು. ಇರಾನ್ ನ್ಯೂಕ್ಲಿಯರ್ ಒಪ್ಪಂದದಿಂದಾಗಿ ಮಧ್ಯಪ್ರಾಚ್ಯದಲ್ಲಿ ಒಂದು ಬಿಕ್ಕಟ್ಟು ಅಂತ್ಯಗೊಂಡಂತಾಗಿದೆ. ಇಸ್ರೇಲ್ ಈ ಒಪ್ಪಂದ ಕುರಿತು ಆಕ್ಷೇಪ ವ್ಯಕ್ತಗೊಳಿಸಿದ್ದಾಗ್ಯೂ ಇದೊಂದು ಸ್ವಾಗತಾರ್ಹವಾದ ಬೆಳವಣಿಗೆ. ಈ ಪ್ರದೇಶದಲ್ಲಿ ಶಾಂತಿಸ್ಥಾಪನೆಗೆ ಒಂದು ಹೆಜ್ಜೆ ಮುಂದಿರಿಸಿದಂತೆ. ನ್ಯೂಕ್ಲಿಯರ್ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಒಪ್ಪಂದವಾಗಿದ್ದರೂ, ಅಮೆರಿಕ ಮತ್ತು ಇರಾನ್‌ಗಳ ಮಧ್ಯೆ ಬೇಕಿರುವ ಇತರ ಹಲವು ಸಮಸ್ಯೆಗಳಿವೆ. ಪಶ್ಚಿಮ ಏಶಿಯಾದಲ್ಲಿ ಶಾಂತಿ ನೆಲೆಸುವುದಕ್ಕೆ ಬೇಕಾಗಿರುವುದು ಮುಖ್ಯವಾಗಿ ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆ. ಈ ಪ್ರದೇಶದಲ್ಲಿ ಇದು ಎಲ್ಲ ಘರ್ಷಣೆಗಳಿಗೂ ಮೂಲವಾಗಿದೆ. ಎರಡು ಯುದ್ಧಗಳಿಗೆ ಎಡೆಮಾಡಿಕೊಟ್ಟ ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯ ಪ್ರಶ್ನೆ ಈಗಲೂ ಉದ್ವಿಗ್ನ. ಈಚೆಗೆ ತಲೆಯೆತ್ತಿ ಶಾಂತಿಗೆ ಭಂಗ ತಂದಿರುವುದು ಇಸ್ಲಾಮಿಕ್ ರಾಜ್ಯದ ಸ್ಥಾಪನೆಗಾಗಿ ಇಸ್ಲಾಮಿಕ್ ಉಗ್ರವಾದಿಗಳು ನಡೆಸುತ್ತಿರುವ ಸಶಸ್ತ್ರ ದಾಳಿಗಳು ಹಾಗೂ ಭಯೋತ್ಪಾದಕ ಕೃತ್ಯಗಳು.

ಇರಾನ್ ನ್ಯೂಕ್ಲಿಯರ್ ಅಸ್ತ್ರಗಳ ತಯಾರಿಕೆಗೆ ಸನ್ನಾಹ ನಡೆಸಿದೆ ಎಂಬುದೇ ಆಪಾದನೆ. ನ್ಯೂಕ್ಲಿಯರ್ ಶಕ್ತರಾಷ್ಟ್ರವಾದಲ್ಲಿ ಅದು ಈ ಪ್ರದೇಶದಲ್ಲಿ ಶಾಂತಿಗೆ ಭಂಗ ಉಂಟು ಮಾಡುತ್ತದೆ ಎಂಬುದೇ ಅಮೆರಿಕದ ಆರೋಪ. ೨೦೦೫ರಲ್ಲಿ ಇಂಟರ್‌ನ್ಯಾಷನಲ್ ಅಟಾಮಿಕ್ ಎನರ್ಜಿ ಅಸೋಸಿಯೇಶನ್ (ಐಎಇಎ) ಇದನ್ನು ಪುಷ್ಟೀಕರಿಸಿತು. ೨೦೦೬ರಲ್ಲಿ ಅಮೆರಿಕ ಇರಾನಿನ ಮೇಲೆ ಆರ್ಥಿಕ ದಿಗ್ಬಂಧನ ವಿಧಿಸುವಂತೆ ವಿಶ್ವಸಂಸ್ಥೆಯಲ್ಲಿ ಒತ್ತಾಯ ತಂದು ಸಫಲಗೊಂಡಿತು. ಆಗಿನಿಂದ ಇರಾನ್ ಮತ್ತು ಅಮೆರಿಕಗಳ ಮಧ್ಯೆ ಸಂಘರ್ಷ ಪ್ರಾರಂಭವಾಯಿತು. ಅದು ಈ ಎರಡೂ ದೇಶಗಳ ನಡುವೆ ಸಶಸ್ತ್ರ ಸಂಘರ್ಷ ನಡೆಯುವ ಮಟ್ಟಕ್ಕೆ ಹೋಗಿತ್ತು. ವಿಯೆನ್ನಾ ಒಪ್ಪಂದ ಇನ್ನೂ ಅಮೆರಿಕದ ಸೆನೆಟ್‌ನಲ್ಲಿ ಅಂಗೀಕಾರ ಪಡೆಯಬೇಕಾಗಿದೆ. ರಿಪಬ್ಲಿಕನ್ ಪಕ್ಷದ ಸದಸ್ಯರು ಮೇಲುಗೈ ಪಡೆದಿರುವ ಈ ಸದನ ಒಪ್ಪಂದವನ್ನು ತಿರಸ್ಕರಿಸುವ ಸಾಧ್ಯತೆಗಳಿವೆ. ಅದನ್ನು ಪರಿಗಣಿಸಿಯೇ ಅಮೆರಿಕದ ಅಧ್ಯಕ್ಷ ಒಬಾಮಾ ಅಂಥ ಪ್ರಸಂಗ ಬಂದಲ್ಲಿ ತಾವು ತಮ್ಮ ವೀಟೋ ಹಕ್ಕು ಚಲಾಯಿಸಿ ಊರ್ಜಿತಗೊಳಿಸ ಬೇಕಾದೀತು ಎಂದು ಎಚ್ಚರಿಕೆ ನೀಡಿದ್ದಾರೆ. ಒಪ್ಪಂದ ಯಶಸ್ವಿಯಾಗಿ ಕಾರ್ಯಗತಗೊಂಡು, ಈ ಪ್ರದೇಶದಲ್ಲಿ ಶಾಂತಿಗೆ ನೆರವಾಗಲಿ ಎಂದು ಹಾರೈಸೋಣ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ವಸತಿಹೀನರ ದುಸ್ತರ ಜೀವನ


ಹಿಂದಿ ಮೂಲ :
**ರವೀಂದ್ರ ತ್ರಿಪಾಠಿ**
ಕನ್ನಡಕ್ಕೆ :
**ಕೆ. ಪ್ರಕಾಶ್**


ಅಮೆರಿಕಾ ಮತ್ತು ಇತರೆ ಪಾಶ್ಚಿಮಾತ್ಯ ದೇಶಗಳಲ್ಲಿ ವಸತಿಹೀನರು ಅಥವಾ ನವವಸತಿಹೀನರ ಬಗ್ಗೆ ಅನೇಕ ಡಾಕ್ಯುಮೆಂಟರಿ ಚಿತ್ರಗಳು ತಯಾರಾಗುತ್ತಿವೆ. ಅವುಗಳಿಂದ ತಿಳಿದುಬರುವುದೇನೆಂದರೆ ಪಾಶ್ಚಿಮಾತ್ಯ ಮಾಧ್ಯಮ ಎಷ್ಟೊಂದು ಜಾಗರೂಕ ಹಾಗೂ ಎಚ್ಚರದ ಸ್ಥಿತಿಯಲ್ಲಿದೆಯೆಂಬುದು. ಖಾಸಗಿ ಚಾನೆಲ್‌ಗಳು ಅಥವಾ ಡಾಕ್ಯುಮೆಂಟರಿ ಚಿತ್ರ ನಿರ್ಮಾಪಕರು ಮಾತ್ರ ಇಂತಹ ಚಿತ್ರಗಳನ್ನು ನಿರ್ಮಿಸುತ್ತಿಲ್ಲ. ಬದಲಿಗೆ, ಬಿ.ಬಿ.ಸಿ. ಸಹ ಈ ಬಗ್ಗೆ ಸಕ್ರಿಯವಾಗಿದೆ. ಆದರೆ ಭಾರತೀಯ ಟಿ.ವಿ. ಚಾನೆಲ್‌ಗಳನ್ನು ಗಮನಿಸಿದಾಗ ಘೋರ ನಿರಾಸೆ ನಮ್ಮನ್ನು ಕಾಡುತ್ತದೆ.

**ಭಾ**ರತದ ನಗರಗಳಲ್ಲಿ ವಸತಿಹೀನರ ಸಂಖ್ಯೆ ಇತ್ತೀಚಿನ ವರ್ಷಗಳಲ್ಲಿ ಏರುತ್ತಲೇ ಸಾಗಿದ್ದು, ಅಂತಹವರ ಬಗೆಗಿನ ಕಾಳಜಿ ನಮ್ಮ ಸರ್ಕಾರಗಳು, ನೀತಿ ನಿರ್ಮಾಪಕರು, ಸಮಾಜಶಾಸ್ತ್ರಜ್ಞರ ಕಾರ್ಯ ಸೂಚಿಗಳಲ್ಲಿ ಗಂಭೀರವಾಗಿ ಅಭಿವ್ಯಕ್ತಿಯಾಗುತ್ತಿಲ್ಲ. ಆದರೆ ಪಾಶ್ಚಿಮಾತ್ಯ ದೇಶಗಳಲ್ಲಿ ವಸತಿಹೀನರ ಜೀವನದ ಕುರಿತು ಸಾಕ್ಷ್ಯಚಿತ್ರ ನಿರ್ಮಾಪಕರು, ಸಾಮಾಜಿಕ ಸಂಘಟನೆಗಳು, ಸಮಾಜಶಾಸ್ತ್ರಜ್ಞರೇ ಅಲ್ಲದೆ ಸರಕಾರಗಳೂ ಗಮನಹರಿಸುತ್ತಿವೆ. ಇದಕ್ಕೆ ಕಾರಣವೇನೆಂದರೆ ವಸತಿಹೀನರ ಸಮಸ್ಯೆ ಅಲ್ಲಿ ಒಂದು ಸಾಮಾಜಿಕ ಪರಿಘಟನೆಯಾಗಿದ್ದು, ಪಾಶ್ಚಾತ್ಯ ಸಮಾಜಶಾಸ್ತ್ರದಲ್ಲಂತೂ 'ಎಥ್ನೋಫಿಕ್ಷನ್' ಎಂಬ ಹೆಸರಿನ ಒಂದು ಪರಿಕಲ್ಪನೆಯೇ ಬೆಳೆದು ಬಂದಿದೆ. ಅದು ಈ ಸಾಮಾಜಿಕ ಪರಿಘಟನೆಯ ಚಿತ್ರಣವನ್ನು ಕಟ್ಟಿಕೊಡುತ್ತದೆ. ಎಥ್ನೋಫಿಕ್ಷನ್ ಕಾದಂಬರಿ ಸ್ವರೂಪದ್ದಾಗಿದ್ದು, ಅದರಲ್ಲಿ ಸಾಹಿತ್ಯಕ ಕಾದಂಬರಿಗಳ ರೀತಿಯ ಕಲ್ಪನಾಶೀಲತೆ ಇರುವುದಿಲ್ಲ. ಬದಲಿಗೆ, ಸಾಮಾಜಿಕ ವಾಸ್ತವತೆ ಅಧಿಕವಾಗಿರುತ್ತದೆ. ಫ್ರಾನ್ಸ್‌ನ ಸಮಾಜಶಾಸ್ತ್ರಜ್ಞ ಮಾರ್ಕ್ ಓಜೇಯ್ ಅವರ ಇತ್ತೀಚೆಗೆ ಪ್ರಕಟಗೊಂಡ ಎಥ್ನೋಫಿಕ್ಷನ್‌ನ ಹೆಸರು 'ನೋಫಿಕ್ಷನ್ ಅಬೋಡ್'. ಈ ಕಾದಂಬರಿಯಲ್ಲಿ ಹೆನ್ರಿ ಎಂಬ ವ್ಯಕ್ತಿಯೊಬ್ಬನ ಜೀವನ ಚಿತ್ರಣವಿದೆ. ಅದರಲ್ಲಿ ಆತ ದೀರ್ಘಾವಧಿಯ ನೌಕರಿಯಲ್ಲಿದ್ದೂ ತಾನಿರುವ ಮನೆಯ ಬಾಡಿಗೆ ಕೊಡುವ ಸ್ಥಿತಿಯಲ್ಲಿರುವುದಿಲ್ಲ. ಹೀಗಾಗಿ ತನ್ನ ರಾತ್ರಿಗಳನ್ನು ರಸ್ತೆಯಲ್ಲಿ ಕಳೆಯಲು ಪ್ರಾರಂಭಿಸುತ್ತಾನೆ. ಹೆನ್ರಿಯ ಹತ್ತಿರ ತನ್ನ ವಿಳಾಸವೆಂಬುದಿಲ್ಲ, ಸ್ವಂತ ಮನೆ ಇಲ್ಲ, ಬಾಡಿಗೆ ಮನೆಯೂ ಇಲ್ಲ. ಚಳಿಯಾಗಲಿ, ಬಿಸಿಲಾಗಲಿ ಆತ ತನ್ನ ಕಾರಿನಲ್ಲಿಯೇ ಮಲಗುತ್ತಾನೆ. ಹೌದು, ಆತನ ಬಳಿ ಕಾರು ಇದೆ. ಏಕೆಂದರೆ ಅದನ್ನು ಇಟ್ಟುಕೊಳ್ಳುವುದು ಸುಲಭ. ಆದರೆ ಮನೆಯ ಬಾಡಿಗೆ ಕೊಡುವುದು ತ್ರಾಸದಾಯಕ. ಹೆನ್ರಿಯ ಹೆಂಡತಿ ಆತನನ್ನು ಬಿಟ್ಟುಹೋದಾಗ ಡಾಮಿನಿಕ್ ಎಂಬ ಹೆಸರಿನ ಯುವತಿಯೊಬ್ಬಳೊಂದಿಗೆ ಗೆಳೆತನವಾಗುತ್ತದೆ. ಆಕೆಯೋ ವಯಸ್ಸಿನಲ್ಲಿ ಈತನಿಗಿಂತಲೂ ಕಿರಿಯಳು. ಆದರೆ ಆತ ಈ ಸಂಬಂಧವನ್ನು ಮುಂದುವರಿಸುವ ಅಥವಾ ದೃಢಗೊಳಿಸುವ ಸ್ಥಿತಿಯಲ್ಲಿಲ್ಲ. ಒಂದು ರಾತ್ರಿ ಹೆನ್ರಿ ತನ್ನ ಕಾರಿನಲ್ಲಿ ಮಲಗಿರುವಾಗ ಅನಿರೀಕ್ಷಿತವಾಗಿ ಮಳೆ ಸುರಿಯಲಾರಂಭಿಸುತ್ತದೆ. ಸ್ವಲ್ಪ ಹೊತ್ತಿನ ನಂತರ ಫ್ರಾನ್ಸಿಸ್ ಎಂಬ ಭಿಕ್ಷುಕನೊಬ್ಬ ಆ ಮಳೆರಾತ್ರಿಯಲ್ಲಿ ಕಾರಿನ ಬಾಗಿಲನ್ನು ಬಡಿಯುತ್ತಿರುವುದು ಕಾಣುತ್ತದೆ. ಸುರಿಮಳೆಯ ಆ ಸಂದರ್ಭದಲ್ಲಿ ತನ್ನನ್ನು ಕಾರಿನಲ್ಲಿ ಕೂರಿಸಿಕೊಳ್ಳಲಿ ಎಂದು ಫ್ರಾನ್ಸಿಸ್ ಬಯಸುತ್ತಾನೆ. ಆದರೆ ಹೆನ್ರಿ ಬಾಗಿಲು ತೆರೆಯುವುದಿಲ್ಲ. ನಂತರ ಹೆನ್ರಿಗೆ ತಾನು ಭಿಕ್ಷುಕನಿಗೆ ಆಶ್ರಯ ನೀಡಲಿಲ್ಲ ಎಂಬ ವೇದನೆಗಿಂತ ತಾನು ಕಾರಿನಲ್ಲಿ ಮಲಗಿರುವುದನ್ನು ಭಿಕ್ಷುಕನೊಬ್ಬ ನೋಡಿಬಿಟ್ಟನಲ್ಲ ಎಂಬ ನಾಚಿಕೆ ಕಾಡುತ್ತದೆ. ಭಿಕ್ಷುಕ ಮತ್ತು ಹೆನ್ರಿಯ ಸಾಮಾಜಿಕ ಸ್ತರದಲ್ಲಿ ಯಾವುದೇ ವ್ಯತ್ಯಾಸವಿಲ್ಲವಾಗುತ್ತದೆ. ಇಬ್ಬರೂ ಬೆಳ್ಳಂಬೆಳಿಗ್ಗೆ ನಿತ್ಯಕರ್ಮ ಮತ್ತು ಸ್ನಾನಕ್ಕೆ ಸಾರ್ವಜನಿಕ ಶೌಚಾಲಯದ ಕಡೆ ಮುಖ ಮಾಡುತ್ತಾರೆ.



ವಾಸ್ತವವಾಗಿ ಪಶ್ಚಿಮದಲ್ಲಿ ಹೊಸ ಆರ್ಥಿಕ ನೀತಿಗಳಿಂದಾಗಿ ಅನೇಕ ಸಾಮಾಜಿಕ ದುಷ್ಪರಿಣಾಮಗಳು ಕಂಡುಬರುತ್ತಿದ್ದು ಸಾಕ್ಷ್ಯಚಿತ್ರ (ಡಾಕ್ಯುಮೆಂಟರಿ) ನಿರ್ಮಾಪಕರು ಇಂತಹ ಚಿತ್ರಗಳನ್ನು ನಿರ್ಮಿಸುತ್ತಿದ್ದಾರೆ. ಇಂತಹ ಚಿತ್ರಗಳಲ್ಲಿ, ಒಂದು ಸಮಯದಲ್ಲಿ ಸಂತೃಪ್ತ ಜೀವನ ನಡೆಸಿದ ನಂತರ ಈಗ ಸಾಮಾಜಿಕ ಮತ್ತು ಆರ್ಥಿಕ ಸ್ತರದಲ್ಲಿ ವಿಪತ್ತಿಗೆ ಸಿಲುಕಿದವರ ಜೀವನದರ್ಶನ ಮಾಡಿಸಲಾಗುತ್ತದೆ.

ಪಾಶ್ಚಿಮಾತ್ಯ ದೇಶಗಳಲ್ಲಿ ವಸತಿಹೀನರ ಸಂಖ್ಯೆ ಬಹಳಷ್ಟು ಏರಿಕೆಯಾಗುತ್ತಿದ್ದು ಟೆಲಿವಿಷನ್ ಚಾನೆಲ್‌ಗಳಿಂದ ಹಿಡಿದು ಇತರೆ ಸಾಕ್ಷ್ಯಚಿತ್ರ ನಿರ್ಮಾಪಕರು ಇಂತಹ ವೇದನಾಭರಿತ ಅನುಭವಗಳನ್ನು ಅನಾವರಣ ಮಾಡುತ್ತಿದ್ದಾರೆ. ಈ ತರಹದ್ದೇ ಒಂದು ಡಾಕ್ಯುಮೆಂಟರಿ ಚಿತ್ರ 'ಆ್ಯನ್ ಅನ್‌ಸಕ್ಸಸ್‌ಫುಲ್ ಸ್ಟೋರಿ – ಫ್ರಮ್ ಎ ಮಲ್ಟಿಮಿಲಿಯನೇರ್ ಟು ಹೋಮ್‌ಲೆಸ್'. ಅರ್ಧಗಂಟೆ ಅವಧಿಯ ಈ ಡಾಕ್ಯುಮೆಂಟರಿ ಚಿತ್ರದಲ್ಲಿ ಇಂಗ್ಲೆಂಡ್‌ನಲ್ಲಿರುವ ಕೋಟ್ಯಾಧಿಪತಿಯ ವೃತ್ತಾಂತವೊಂದನ್ನು ಚಿತ್ರಿಸಲಾಗಿದೆ. ಆ ಕೋಟ್ಯಾಧಿಪತಿಯ ಮಾಲೀಕತ್ವದಲ್ಲಿ ಹತ್ತೊಂಬತ್ತು ಕಂಪೆನಿಗಳಿದ್ದು, ಹೊಸ ಆರ್ಥಿಕನೀತಿ, ಅದರಲ್ಲೂ ವಿಶೇಷವಾಗಿ ಕ್ರೆಡಿಟ್ ಕಾರ್ಡ್ ಬಂದ ನಂತರ ಆತ ರಾತ್ರೋರಾತ್ರಿ ಕಡುಬಡವನಾಗುತ್ತಾನೆ. ಆತನ ಆರ್ಥಿಕ ಪರಿಸ್ಥಿತಿ ಎಷ್ಟು ಕೆಡುತ್ತದೆಂದರೆ ಹೆಂಡತಿಯೂ ಆತನನ್ನು ಬಿಟ್ಟು ಬೇರೊಬ್ಬ ಯುವಕನ ಜೊತೆ ಓಡಿಹೋಗುತ್ತಾಳೆ. ವಿಪತ್ತಿಗೆ ಸಿಲುಕಿದ ಆತ ಮೊದಲು ಸ್ಪೇನ್‌ಗೆ ಹೋಗಿ ಆ ನಂತರ ಪೋರ್ಚುಗಲ್‌ನ ದಾರಿ ಹಿಡಿಯುತ್ತಾನೆ. ಆತನಿಗೂ ಇರಲು ಒಂದು ಮನೆ ಇಲ್ಲ. ಹಾಗಾಗಿ, ಕಾರಿನಲ್ಲಿ ಅಲ್ಲ, ಬದಲಿಗೆ ಒಂದು ಕ್ಯಾರವ್ಯಾನ್ (ಯಾತ್ರಿಗಳ ಗುಂಪು)ನಲ್ಲಿ ಇರುತ್ತಾನೆ. ತನ್ನ ಕ್ಯಾರವ್ಯಾನ್‌ನ ಹತ್ತಿರ ಒಂದು ಲಿಖಿತ ಸೂಚನೆಯನ್ನೂ ಬರೆದುಹಾಕಿರುತ್ತಾನೆ – 'ನಾನು ಅರವತ್ತೆರಡು ವರ್ಷದ ವ್ಯಕ್ತಿ. ನನಗೆ 'ಸಯಾಟಿಕ್' ಎಂಬ ಗಂಭೀರ ಕಾಯಿಲೆ ಇದೆ. ನಾನು ಚಿಕಿತ್ಸೆ ಪಡೆಯುವ ಪರಿಸ್ಥಿತಿಯಲ್ಲಿಲ್ಲ. ಏಕೆಂದರೆ ನನ್ನ ಹತ್ತಿರ ಹಣವಿಲ್ಲ. ಆದ್ದರಿಂದ ದಯಮಾಡಿ ಒಂದಿಷ್ಟು ಹಣವನ್ನು ಈ ಡಬ್ಬದಲ್ಲಿ ಹಾಕಿ'. ಈ ಸೂಚನಾ ಫಲಕದ ಪಕ್ಕದಲ್ಲಿ ಭಿಕ್ಷುಕರ ಡಬ್ಬದ ರೀತಿಯ ಡಬ್ಬವೊಂದನ್ನು ಇಡಲಾಗಿದೆ. ಕ್ಯಾರವ್ಯಾನ್‌ನ ಟೆಂಟ್‌ನ ಒಳಗೆ ಈತನ ಕಂಪ್ಯೂಟರ್ ಇದೆ, ಟಿ.ವಿ. ಇದೆ. ಹಾಗಾಗಿ ಈತ ಭಿಕ್ಷುಕನಲ್ಲವಾದರೂ ಈತನ ಸಾಮಾಜಿಕ ಸ್ಥಿತಿ ಭಿಕ್ಷುಕನದ್ದೇ ಆಗಿದೆ. ಈತ ಆಗಾಗ್ಗೆ ನಗುತ್ತಾನಾದರೂ ಈತನ ನಗುವಿನಲ್ಲಿ ರೋದನ ಕೇಳಿಬರುತ್ತದೆ. ಪೋರ್ಚುಗಲ್‌ನಲ್ಲಿ ಈ ರೀತಿಯ ವಸತಿಹೀನರಿಗೆ ಸಾಮಾಜಿಕ ಸುರಕ್ಷೆ ಸಿಗುತ್ತದೆ. ಇದರಿಂದಾಗಿ ಸ್ವಲ್ಪಮಟ್ಟಿಗೆ ಆತ ಚಿಕಿತ್ಸೆ ಪಡೆಯುತ್ತಿರುತ್ತಾನೆ. ಇಲ್ಲವಾಗಿದ್ದಲ್ಲಿ ಆತ ಡಾಕ್ಟರ್ ಹತ್ತಿರ ಹೋಗುವ ಸ್ಥಿತಿಯಲ್ಲಿಲ್ಲ. ಆದಾಗ್ಯೂ ಆತ ಈಗಲೂ ತಾನು ಮತ್ತೊಮ್ಮೆ ಕೋಟ್ಯಾಧಿಪತಿಯಾಗುವ ಕನಸು ಕಾಣುತ್ತಿದ್ದಾನೆ. ಆದರೆ ಆತನ ಕನಸು ನನಸಾಗುವ ಯಾವುದೇ ಭರವಸೆ ಇಲ್ಲ. ತನ್ನ ಕನಸಿನ ಬಗ್ಗೆ ಕ್ಯಾಮರಾದತ್ತ ಮುಖ ಮಾಡಿ ಮಾತನಾಡುವಾಗ ಇಂತಹ ವ್ಯಕ್ತಿ ಕನಸನ್ನು ವಾಸ್ತವಕ್ಕೆ ಪರಿವರ್ತಿಸುವುದು ದುಸ್ತರ ಎಂಬುದು ಕಂಡುಬರುತ್ತದೆ.



ವಸತಿಹೀನರು ಅಮೆರಿಕಾದಲ್ಲೂ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಿದ್ದಾರೆ. ಬ್ರಿಟನ್–ಇರಾನ್ ಮೂಲದ ಪತ್ರಕರ್ತ ರಮಿತಾ ನವಾಯಿ ಚಾನೆಲ್ ೪ಕ್ಕಾಗಿ 'ಅನ್‌ರಿಪೋರ್ಟೆಡ್ ವರ್ಲ್ಡ್' ಸರಣಿಯಡಿ 'ಯುಎಸ್‌ಎ ಡೌನ್ ಅಂಡ್ ಔಟ್' ಎಂಬ ಹೆಸರಿನ ಡಾಕ್ಯುಮೆಂಟರಿ ಫಿಲ್ಮ್ ತಯಾರಿಸಿದ್ದಾನೆ. ಅದರಲ್ಲಿ ಅಮೆರಿಕಾದ ವಸತಿಹೀನರ ನೋವಿನ ಚಿತ್ರಣವಿದೆ. ಕಳೆದ ವರ್ಷಗಳಲ್ಲಿ ಅಮೆರಿಕಾದಲ್ಲಿ ಕಂಡುಬಂದ ಆರ್ಥಿಕ ಹಿಂಜರಿತ ಲಕ್ಷಾಂತರ ಜನರನ್ನು ವಸತಿಹೀನರನ್ನಾಗಿ ಮಾಡಿತು. ಇವರೆಲ್ಲ ತಿಂದುಣ್ಣುವ ಮಧ್ಯಮ ವರ್ಗದವರಾಗಿದ್ದರು. ಅಮೆರಿಕಾದಲ್ಲಿ ಹೆಚ್ಚಿನ ಜನ ಸಾಲ ತಂದು ಮನೆ ಕಟ್ಟುತ್ತಾರೆ ಅಥವಾ ಖರೀದಿಸುತ್ತಾರೆ. ಆರ್ಥಿಕ ಹಿಂಜರಿತದ ನಂತರ ಲಕ್ಷಾಂತರ ಮಧ್ಯಮ ವರ್ಗದ ಕುಟುಂಬಗಳ ಸ್ಥಿತಿ ಎಷ್ಟೊಂದು ಕೆಟ್ಟಿದೆಯೆಂದರೆ ಅವರು ಕಂತು ಕಟ್ಟುವ ಸ್ಥಿತಿಯಲ್ಲಿಲ್ಲವಾಗಿ ತಂತಮ್ಮ ಮನೆ ಮಠಗಳನ್ನು ಬಿಟ್ಟು ಓಡಿಹೋಗಿದ್ದಾರೆ. ಅವರುಗಳೆಲ್ಲ ಬೇರ್‍ಯಾವ ಮನೆಗಳಿಗೂ ಹೋಗಿಲ್ಲ. ಬದಲಿಗೆ, ಟೆಂಟುಗಳಿಗೆ ಹೋಗಿ ಅಲ್ಲಿ ವಾಸಿಸುತ್ತಿದ್ದಾರೆ. ಶಿಕಾಗೊನಂತಹ ನಗರದಲ್ಲಿ ಬಹಳಷ್ಟು ಜನ ಚರ್ಚ್‌ಗಳಲ್ಲಿ ಆಶ್ರಯ ಪಡೆಯುವಂತಾಯಿತು. ಅಲ್ಲಿ ಉಚಿತ ಊಟದ ವ್ಯವಸ್ಥೆಯೂ ಇರುತ್ತದೆ. ಡಾಕ್ಯುಮೆಂಟರಿ ಫಿಲ್ಮ್‌ನಲ್ಲಿ ತೋರಿಸಿರುವಂತೆ ಅಮೆರಿಕಾದ ದೊಡ್ಡ ದೊಡ್ಡ ನಗರಗಳಲ್ಲಿ ಇತ್ತೀಚಿನ ದಿನಗಳಲ್ಲಿ ಲಕ್ಷಾಂತರ ಭಾರತೀಯರು ದೊಡ್ಡ ನಗರಗಳಲ್ಲಿ ಜೋಪಡಿ ಗುಡಿಸಲುಗಳಲ್ಲಿ ವಾಸಿಸುವಂತೆಯೇ ಅಲ್ಲಿನ ಸ್ಥಳೀಯರೂ ವಾಸಿಸಲಾರಂಭಿಸಿದ್ದಾರೆ. ಇಲ್ಲಿ ವ್ಯತ್ಯಾಸವಿಷ್ಟೆ, ನಮ್ಮಲ್ಲಿ ಗುಡಿಸಲು, ಜೋಪಡಿಗಳಲ್ಲಿ ಇರುವವರು ಹಲವಾರು ವರ್ಷಗಳಿಂದ ಅಥವಾ ಹಲವಾರು ಪೀಳಿಗೆಗಳಿಂದ ಅದೇ ಸ್ಥಿತಿಯಲ್ಲಿದ್ದಾರೆ. ಆದರೆ ಅಮೆರಿಕಾದಲ್ಲಿ ಇಂದು ಟೆಂಟ್ ನಿವಾಸಿಗಳಾಗಿರುವವರು ಕೇವಲ ೨–೩ ವರ್ಷಗಳ ಮುನ್ನ ಸುವ್ಯವಸ್ಥಿತ ಮಧ್ಯವರ್ಗೀಯ ಜೀವನ ನಡೆಸುತ್ತಿದ್ದರು. ಅವರ ಹತ್ತಿರ ವಾಹನಗಳಿದ್ದವು. ಅವರ ಮಕ್ಕಳು ಶಾಲೆಗೆ ಹೋಗುತ್ತಿದ್ದರು. ಆದರೆ ಈಗ ಏನೂ ಇಲ್ಲ. ಅವರೀಗ ದಯನೀಯ ಬದುಕು ಸಾಗಿಸುತ್ತಿದ್ದಾರೆ. ನೌಕರಿ ಕಳೆದುಕೊಂಡು ನಿರುದ್ಯೋಗಿಗಳಾಗಿದ್ದಾರೆ. ಪತ್ರಕರ್ತ ರಮಿತಾ ನವಾಯಿ ತಮ್ಮ ವರದಿಯಲ್ಲಿ ಈ ಸಮಸ್ಯೆ ಮಹಾಮಾರಿಯಾಗಿ ಹರಡುತ್ತಿದೆ ಎಂದಿದ್ದಾರೆ.

ಅಮೆರಿಕಾ ಮತ್ತು ಇತರೆ ಪಾಶ್ಚಿಮಾತ್ಯ ದೇಶಗಳಲ್ಲಿ ವಸತಿಹೀನರ ಬಗ್ಗೆ ಅನೇಕ ಡಾಕ್ಯುಮೆಂಟರಿ ಚಿತ್ರಗಳು ತಯಾರಾಗುತ್ತಿವೆ. ಅವುಗಳಿಂದ ತಿಳಿದುಬರುವುದೇನೆಂದರೆ ಪಾಶ್ಚಿಮಾತ್ಯ ಮಾಧ್ಯಮ ಎಷ್ಟೊಂದು ಜಾಗರೂಕ ಹಾಗೂ ಎಚ್ಚರದ ಸ್ಥಿತಿಯಲ್ಲಿದೆಯೆಂಬುದು. ಖಾಸಗಿ ಚಾನೆಲ್‌ಗಳು ಅಥವಾ ಡಾಕ್ಯುಮೆಂಟರಿ ಚಿತ್ರ ನಿರ್ಮಾಪಕರು ಮಾತ್ರ ಇಂತಹ ಚಿತ್ರಗಳನ್ನು ನಿರ್ಮಿಸುತ್ತಿಲ್ಲ. ಬದಲಿಗೆ, ಬಿ.ಬಿ.ಸಿ. ಸಹ ಈ ಬಗ್ಗೆ ಸಕ್ರಿಯವಾಗಿದೆ. ಆದರೆ ಭಾರತೀಯ ಟಿ.ವಿ. ಚಾನೆಲ್‌ಗಳನ್ನು ಗಮನಿಸಿದಾಗ ಘೋರ ನಿರಾಸೆ ನಮ್ಮನ್ನು ಕಾಡುತ್ತದೆ. ಭಾರತದ ನಗರಗಳಲ್ಲಿ ವಸತಿಹೀನರ ಸಂಖ್ಯೆ ಏರಿಕೆಯಾಗುತ್ತಿಲ್ಲ ಎನ್ನುವಂತಿಲ್ಲ. ಲಕ್ಷಾಂತರ ಜನ ನಗರಗಳಲ್ಲಿ ಪ್ರತಿದಿನ ಖಾಲಿಯಾಗುತ್ತಾರೆ. ಅವರು ಎಲ್ಲಿ ಹೋಗುತ್ತಾರೆ? ಎಲ್ಲಿ ತಮ್ಮ ಗೂಡು ಕಟ್ಟಿಕೊಳ್ಳುತ್ತಾರೆ? ನಂತರದಲ್ಲಿ ಅಲ್ಲಿಂದ ಯಾವ ರೀತಿ ಅವರಿಗೆ ಸ್ಥಾನಪಲ್ಲಟವಾಗುತ್ತದೆ ಎಂಬುದನ್ನೂ ಸಹ ನಮ್ಮ ಟಿ.ವಿ. ಚಾನೆಲ್‌ಗಳು ಗಮನಿಸಲಿ.

ಹಿಂದಿ ಮೂಲ : **ರವೀಂದ್ರ ತ್ರಿಪಾಠಿ**
ಕನ್ನಡಕ್ಕೆ: **ಕೆ. ಪ್ರಕಾಶ್**
ಹಿಂದಿ ಉಪನ್ಯಾಸಕ, ಕೇರಾಫ್ : ಆನಿಡ್ ಶಾಪ್, ಭೂತನ ಗುಡಿ
ಭದ್ರಾವತಿ – ೫೭೭ ೩೦೧

## ನಿಚುಲ

ಕಬ್ಬು ಬೆಳೆಗಾರ
ತತ್ತರಿಸಿದ
ಸಿಹಿಕಹಿಯಾಗಿ
ಕಹಿಯೇ ಮೂಲವಾಗಿ
ಶವವಾದ,
ಜಡವಾಗಿ ಕುಳಿತ
ನೇತಾರ
ನಿಚುಲ ಹೊದ್ದು
ತೆವಳಿದ

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೭೩

# ಶೌಚಾಲಯದ ವ್ಯವಸ್ಥೆಯಲ್ಲಿನ ಅಸಮಾನತೆ ಕುರಿತು ಒಂದು ಅವಲೋಕನ

**ಹೆಚ್. ಆರ್. ಚನ್ನಕ್ಕಿ**

ಭಾರತದಲ್ಲಿ ಶೌಚಾಲಯದ ವ್ಯವಸ್ಥೆಯನ್ನು ಹೊಂದುವದು ಬಹಳ ಕಾಲದಿಂದ ಒಂದು ದೊಡ್ಡ ಸಮಸ್ಯೆಯಾಗಿ ಕಾಡುತ್ತಿದೆ. ಕ್ರಿ. ಶ. ೧೯೩೫ರಲ್ಲಿ ಭಾರತದಲ್ಲಿನ ಬ್ರಿಟಿಷ್ ಮಿಲಿಟರಿ ತುಕಡಿಗಳು ಶೌಚಾಲಯಕ್ಕೆ ಸಂಬಂಧಪಟ್ಟ ತೀವ್ರತರವಾದ ರೋಗಗಳಿಂದ ನರಳುತ್ತಿದ್ದರು. ಪರಿಸರ ಸ್ವಚ್ಛತೆಯ ಕಮಿಟಿಗಳು ಉತ್ತಮವಾದ ಶೌಚಾಲಯಗಳನ್ನು ಶಿಫಾರಸ್ಸು ಮಾಡಿದವು. ಈ ಶಿಫಾರಸ್ಸುಗಳು ದೇಶದ ಪ್ರಥಮ ಪಂಚವಾರ್ಷಿಕ ಯೋಜನೆ (೧೯೫೧-೫೬)ಯಲ್ಲಿ ಹೆಚ್ಚಿನ ಅನುದಾನವನ್ನು ಕೊಡುವದರಲ್ಲಿ ಸಹಾಯಕವಾಗಿದ್ದವು. ಆದರೆ ಪ್ರಥಮ ಯೋಜನೆಯ ನಂತರದಲ್ಲಿ ಶೌಚಾಲಯದ ಯೋಜನೆಗೆ ಪ್ರಾಮುಖ್ಯತೆ ಕಡಿಮೆಯಾಗಿ ಪುನಃ ೧೯೭೫ರ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಮತ್ತೆ ಇದಕ್ಕೆ ಹೆಚ್ಚಿನ ಒತ್ತು ದೊರಕಿತ್ತು ಮತ್ತು ಈ ಸಮಯದಲ್ಲಿ ಶೌಚಾಲಯಗಳನ್ನು ಕಟ್ಟಿಸಲು ಪ್ರಾಮುಖ್ಯತೆ ಕೊಡಲಾಯಿತು. ಹೀಗೆ ೧೯೪೭ರಿಂದ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ದೇಶದಲ್ಲಿರುವ ಎಲ್ಲಾ ಕುಟುಂಬಗಳಿಗೆ ಶೌಚಾಲಯದ ವ್ಯವಸ್ಥೆಯನ್ನು ಒದಗಿಸಲು ಪ್ರಯತ್ನಿಸಲಾಯಿತು. ಆದರೆ ಇಲ್ಲಿಯವರೆಗೆ ಎಲ್ಲಾ ಕುಟುಂಬಗಳಿಗೆ ವ್ಯವಸ್ಥೆಯನ್ನು ದೊರಕಿಸಿಕೊಡುವದು ಸಾಧ್ಯವಾಗಿಲ್ಲ.

ಶೌಚಾಲಯಕ್ಕೆ ಸಂಬಂಧಪಟ್ಟಂತೆ ಪ್ರತಿ ೧೦ ವರ್ಷಕ್ಕೊಮ್ಮೆ ನಡೆಯುವ ಜನಗಣತಿಯಲ್ಲಿ ದೇಶದಲ್ಲಿರುವ ಎಲ್ಲಾ ಕುಟುಂಬಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗುತ್ತದೆ. ಅದೇ ರೀತಿ ಕರ್ನಾಟಕದಲ್ಲಿಯೂ ಸಹ ೨೦೧೧ರಲ್ಲಿ ನಡೆದ ಜನಗಣತಿಯಲ್ಲಿ ಮಾಹಿತಿಯನ್ನು ಪಡೆಯಲಾಗಿದೆ.

ಕರ್ನಾಟಕ ರಾಜ್ಯವನ್ನು ಆಡಳಿತದ ದೃಷ್ಟಿಯಿಂದ ಒಟ್ಟು ನಾಲ್ಕು ಕಂದಾಯ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ : ಕಲಬುರಗಿ, ಬೆಳಗಾವಿ, ಮೈಸೂರು ಮತ್ತು ಬೆಂಗಳೂರು. ಕೋಷ್ಟಕ ೧ರಲ್ಲಿ ರಾಜ್ಯದ ನಾಲ್ಕು ವಿಭಾಗಗಳಲ್ಲಿರುವ ಗ್ರಾಮೀಣ, ನಗರ ಮತ್ತು ಒಟ್ಟು ಕುಟುಂಬಗಳು ಹೊಂದಿರುವ ಶೌಚಾಲಯಗಳ ಮಾಹಿತಿಯನ್ನು ಕೊಡಲಾಗಿದೆ. ಕಲಬುರಗಿ ವಿಭಾಗದ ಗ್ರಾಮೀಣ ಪ್ರದೇಶದಲ್ಲಿರುವ ಕೇವಲ ಶೇಕಡ ೯ರಷ್ಟು ಗ್ರಾಮೀಣ ಮತ್ತು ಶೇಕಡ ೫೬ರಷ್ಟು ನಗರ ಪ್ರದೇಶದಲ್ಲಿನ ಕುಟುಂಬಗಳು ಮಾತ್ರ ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ. ಇದರಿಂದ ವಿಭಾಗವು ಒಟ್ಟು ಸರಾಸರಿಯಲ್ಲಿ ತೀರ ಕೆಳಮಟ್ಟದಲ್ಲಿದೆ. ಈ ವಿಭಾಗದಲ್ಲಿ ಗ್ರಾಮೀಣ ಮತ್ತು ನಗರದ ಕುಟುಂಬಗಳ ನಡುವೆ ಸಾಕಷ್ಟು ಅಸಮಾನತೆ ಇದೆ. ಇದಕ್ಕೆ ಪ್ರಮುಖವಾದ ಕಾರಣ ತೀವ್ರ ಬಡತನ, ವಿಭಾಗದಲ್ಲಿನ ಕಡಿಮೆ ಪ್ರಮಾಣದ ಸಾಕ್ಷರತೆ, ಸಂಸ್ಕೃತಿ, ಮೂಢನಂಬಿಕೆಗಳು ಮತ್ತು ಆಚರಣೆಗಳು ಚಾಲ್ತಿಯಲ್ಲಿವೆ. ಈ ವಿಭಾಗವು ಉಳಿದ ಮೂರು ವಿಭಾಗಗಳಿಗಿಂತಲೂ ಮತ್ತು ರಾಜ್ಯದ ಸರಾಸರಿಗಿಂತಲೂ ತೀರ ಕೆಳಮಟ್ಟದಲ್ಲಿದೆ. ಆದರೆ ಕಲಬುರಗಿ ಮತ್ತು ಬೆಳಗಾವಿ ವಿಭಾಗದ ಶೇಕಡ ೨೦ರಷ್ಟು ಗ್ರಾಮೀಣ ಪ್ರದೇಶದಲ್ಲಿನ ಕುಟುಂಬಗಳಿಗಿಂತ ಹೆಚ್ಚಿನ ಕುಟುಂಬಗಳು ಮೈಸೂರು ವಿಭಾಗದಲ್ಲಿ ಶೇಕಡ ೫೧ರಷ್ಟು , ಬೆಂಗಳೂರು ವಿಭಾಗಗಳಲ್ಲಿ ಶೇಕಡ ೩೭ರಷ್ಟು ಮತ್ತು ರಾಜ್ಯದ ಸರಾಸರಿ ಶೇಕಡ ೨೮ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ. ಅಂದರೆ ಉತ್ತರ ಕರ್ನಾಟಕದ ಎರಡು ವಿಭಾಗಗಳು ರಾಜ್ಯದ ಸರಾಸರಿ ಮತ್ತು ಬೆಂಗಳೂರು ಮತ್ತು ಮೈಸೂರು ವಿಭಾಗಗಳಿಗಿಂತ ತೀರ ಕಡಿಮೆ ಪ್ರಮಾಣದಲ್ಲಿವೆ. ಇದಕ್ಕೆ ಪುಷ್ಟಿ ನೀಡುವಂತೆ ನಾವು ಉತ್ತರ ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಸಾಯಂಕಾಲದ ಕತ್ತಲಿನ ಮುಸುಕಿನಲ್ಲಿ ಕೆಲವು ಗ್ರಾಮಗಳ ಪ್ರವೇಶಕ್ಕಿಂತ ಮೊದಲು ಜನರು ತಂಬಿಗೆ ಹಿಡಿದುಕೊಂಡು ರಸ್ತೆಯ ಎರಡು ಕಡೆ ಮಲ ವಿಸರ್ಜನೆಗೆ ಕುಳಿತು ಕೊಂಡಿರುವದನ್ನು ಸಾಮಾನ್ಯವಾಗಿ ಕಾಣಬಹುದು. ಈ ರೀತಿಯಾಗಿ ಕುಳಿತುಕೊಂಡವರಲ್ಲಿ ಪಾಪ ಮಹಿಳೆಯರ ಸ್ಥಿತಿಯಂತೂ ತುಂಬ ಕೆಟ್ಟದಾಗಿರುತ್ತದೆ. ಇನ್ನು ಹಗಲಿನಲ್ಲಿ ಗ್ರಾಮದ ಬಯಲು ಪ್ರದೇಶ, ಕೆರೆ, ನದಿ, ಹಳ್ಳ-ಕೊಳ್ಳದ ದಡದಲ್ಲಿ ವಿಸರ್ಜನೆ ಮಾಡಿ ಅಲ್ಲಿನ ಪರಿಸರ ಮತ್ತು ನೀರನ್ನು

**ಕೋಷ್ಟಕ ೧ : ವಿಭಾಗವಾರು ಗ್ರಾಮೀಣ, ನಗರ ಮತ್ತು ಒಟ್ಟು ಶೇಕಡ ಕುಟುಂಬಗಳು ಹೊಂದಿರುವ ಶೌಚಾಲಯ ವ್ಯವಸ್ಥೆ (೨೦೧೧ರ ಜನಗಣತಿ)**

| ವಿಭಾಗ | ಗ್ರಾಮೀಣ | ನಗರ | ಒಟ್ಟು |
|---|---|---|---|
| ಕಲಬುರಗಿ | ೯ | ೫೬ | ೨೨ |
| ಬೆಳಗಾವಿ | ೨೦ | ೬೪ | ೩೫ |
| ಮೈಸೂರು | ೫೧ | ೮೯ | ೬೧ |
| ಬೆಂಗಳೂರು | ೩೭ | ೮೫ | ೫೧ |
| ಕರ್ನಾಟಕ | ೨೮ | ೮೫ | ೫೧ |

**ಟಿಪ್ಪಣಿ :** ವಿಭಾಗದ ಸರಾಸರಿ ಪ್ರತಿಶತವನ್ನು ಲೇಖಕರು ೨೦೧೧ರ ಜನಗಣತಿಯನ್ನು ಜಿಲ್ಲಾವಾರು ಕೂಡಿಸಿ ವಿಭಾಗದಲ್ಲಿರುವ ಜಿಲ್ಲೆಗಳ ಸಂಖ್ಯೆಯಿಂದ ಭಾಗಿಸಲಾಗಿದೆ.





**ಸಾಂತ್ವನ**

ಸೂರ್ಯ ಮುಳುಗಿದನೆಂದು
ಅಳದಿರು ಚಂದಿರ
ಇಗೋ, ನಿನ್ನನ್ನಪ್ಪಿಕೊಳ್ಳಲು
ಅದೆಷ್ಟು
ಸುಂದರ ತಾರೆ – ನೀರೆಯರು ?!

**ಶೋಭಾ ಪ್ರಮೋದ್**
ರಾಯಘಡ

ಮಲಿನಮಾಡುವದು ತೀರ ಸಾಮಾನ್ಯವಾಗಿದೆ.

ನಗರ ಪ್ರದೇಶದ ಬಗ್ಗೆ ಹೇಳುವುದಾದರೆ ಮತ್ತೆ ಅದೇ ಸ್ಥಿತಿಯನ್ನು ಕಾಣಬಹುದು. ಇದರಲ್ಲಿ ಕಲಬುರಗಿ ವಿಭಾಗದಲ್ಲಿ ಶೇಕಡ ೫೬ರಷ್ಟು ಮತ್ತು ಬೆಳಗಾವಿ ವಿಭಾಗದಲ್ಲಿ ಶೇಕಡ ೬೮ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ. ಆದರೆ ಇವೆರಡು ವಿಭಾಗಗಳಿಗಿಂತ ಉಳಿದ ಮೈಸೂರು ವಿಭಾಗದಲ್ಲಿ ಶೇಕಡ ೮೯ರಷ್ಟು ಮತ್ತು ಬೆಂಗಳೂರು ವಿಭಾಗದಲ್ಲಿ ೮೫ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯಿಂದ ಕೂಡಿವೆ. ಇಲ್ಲಿ ಮೈಸೂರು ವಿಭಾಗವು ರಾಜ್ಯದ ಸರಾಸರಿಗಿಂತ ಮುಂದೆ ಇದ್ದರೆ, ಬೆಂಗಳೂರು ರಾಜ್ಯದ ಸರಾಸರಿಯಷ್ಟೆ ಕಾಯ್ದುಕೊಂಡಿದೆ. ಆದರೆ ಮತ್ತೆ ಅದೇ ಉತ್ತರದ ವಿಭಾಗಗಳಾದ ಕಲಬುರಗಿ ಮತ್ತು ಬೆಳಗಾವಿ ವಿಭಾಗವು ರಾಜ್ಯದ ಸರಾಸರಿಗಿಂತ ಬಹಳ ಅಂತರದಲ್ಲಿವೆ. ಇದನ್ನು ವಿಭಾಗವಾರು ಒಟ್ಟು ಕುಟುಂಬಗಳು ಹೊಂದಿರುವ ಶೌಚಾಲಯದ ವ್ಯವಸ್ಥೆಗೆ ಹೋಲಿಸಿದರೆ ಕಲಬುರಗಿ ವಿಭಾಗದಲ್ಲಿ ಗ್ರಾಮೀಣ ಪ್ರದೇಶಕ್ಕಿಂತ ನಗರ ಪ್ರದೇಶದಲ್ಲಿನ ಹೆಚ್ಚಿನ ಕುಟುಂಬಗಳು ಈ ವ್ಯವಸ್ಥೆಯನ್ನು ಹೊಂದಿವೆ. ಒಟ್ಟಾರೆಯಾಗಿ ಹೇಳುವುದಾದರೆ, ರಾಜ್ಯದಲ್ಲಿ ಶೇಕಡ ೫೧ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ. ಇನ್ನು ಸಾಮಾನ್ಯ ಕುಟುಂಬಗಳು ಅಥವಾ ರಾಜ್ಯದಲ್ಲಿರುವ ಒಟ್ಟಾರೆ ಕುಟುಂಬಗಳ ಪರಿಸ್ಥಿತಿಯೇ ಈ ರೀತಿಯಾದರೆ ಇನ್ನು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ತೀರಾ ಹಿಂದುಳಿದ ವರ್ಗಗಳ ಕುಟುಂಬಗಳ ಸ್ಥಿತಿ ಇದಕ್ಕಿಂತ ಬಹಳ ಕಳವಳಕಾರಿಯಾಗಿರಬಹುದು. ಈ ಮೇಲಿನ ಮಾಹಿತಿಯನ್ನು ಸಮಾಜದ ಹಿಂದುಳಿದ ಜಾತಿ ಮತ್ತು ವರ್ಗವಾರು ವಿಶ್ಲೇಷಣೆ ಮಾಡಿದರೆ ಬಹಳ ಕಳವಳಕಾರಿಯಾದ ಅಂಶಗಳು ಹೊರಬರುವುದರಲ್ಲಿ ಯಾವುದೇ ಸಂಶಯವಿಲ್ಲ.

**ಕೋಷ್ಟಕ ೨ : ಕರ್ನಾಟಕ ರಾಜ್ಯದಲ್ಲಿನ ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ಜಾತಿಯ ಕುಟುಂಬಗಳು ಹೊಂದಿರುವ ಶೌಚಾಲಯ, ಸಾರ್ವಜನಿಕ ಶೌಚಾಲಯವನ್ನು ಬಳಸುವ ಮತ್ತು ಬಯಲು ಪ್ರದೇಶದ ಮೇಲೆ ಅವಲಂಬಿತವಾಗಿರುವ ಕುಟುಂಬಗಳ ಮಾಹಿತಿ (೨೦೧೧ರ ಜನಗಣತಿ)**

| ಪಂಗಡ | ಪ್ರದೇಶ | ಶೌಲಯದ ವ್ಯವಸ್ಥೆ ಹೊಂದಿರುವ ಕುಟುಂಬಗಳು | ಸಾರ್ವಜನಿಕ ಶೌಚಾಲಯ ಬಳಸುವ ಕುಟುಂಬಗಳು | ಬಯಲನ್ನು ಅವಲಂಬಿಸಿರುವ ಕುಟುಂಬಗಳು |
|---|---|---|---|---|
| ಪರಿಶಿಷ್ಟ ಪಂಗಡ | ಗ್ರಾಮೀಣ | ೧೬ | ೪ | ೮೧ |
| | ನಗರ | ೭೦ | ೭ | ೨೩ |
| | ಒಟ್ಟು | ೨೯ | ೪ | ೬೭ |
| ಪರಿಶಿಷ್ಟ ಜಾತಿ | ಗ್ರಾಮೀಣ | ೧೬ | ೪ | ೮೦ |
| | ನಗರ | ೬೮ | ೧೦ | ೨೩ |
| | ಒಟ್ಟು | ೩೨ | ೫ | ೬೩ |

ಅನೇಕ ರಾಷ್ಟ್ರೀಯ ಮತ್ತು ರಾಜ್ಯಗಳ ಗ್ರಾಮೀಣ ಅಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ಪರಿಶಿಷ್ಟ ಜಾತಿ (ಪಜಾ) ಮತ್ತು ಪರಿಶಿಷ್ಟ ಪಂಗಡದ (ಪಪ) ಕುಟುಂಬಗಳಿಗೆ ವಿವಿಧ ರೀತಿಯ ಸರಕಾರಿ ಸೌಲಭ್ಯಗಳನ್ನು ಒದಗಿಸಿಕೊಡುವ ಬಗ್ಗೆ ಹೇಳಲಾಗುತ್ತದೆ. ಅದೇ ಮಾದರಿಯಲ್ಲಿ ಅವರ ಕುಟುಂಬಗಳಿಗೆ ಸರಕಾರದ ವತಿಯಿಂದ ಶೌಚಾಲಯಗಳನ್ನು ಕಟ್ಟಿಸಿಕೊಡುವುದೂ ಸಹ ಒಂದು ಕಾರ್ಯಕ್ರಮವಾಗಿರುತ್ತದೆ. ತದನಂತರದಲ್ಲಿ ಇದನ್ನು ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ರಿಯಾಯತಿ ದರದಲ್ಲಿ ವಿಸ್ತರಿಸಲಾಯಿತು. ಕೋಷ್ಟಕ ೨ರಲ್ಲಿ ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕುಟುಂಬಗಳು ಹೊಂದಿರುವ ಶೌಚಾಲಯದ ಮಾಹಿತಿಯನ್ನು ಗ್ರಾಮೀಣ ಮತ್ತು ನಗರ ಪ್ರದೇಶಗಳ ಮಾಹಿತಿಯನ್ನು ವಿವರಿಸುತ್ತದೆ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಶೇಕಡ ೧೬ರಷ್ಟು ಪಪ ಮತ್ತು ಪಜಾ ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿರುತ್ತವೆ. ಉಳಿದ ಶೇಕಡ ೮೧ರಷ್ಟು ಪಪ ಮತ್ತು ಶೇಕಡ ೮೦ರಷ್ಟು ಪಜಾ ಗ್ರಾಮೀಣ ಪ್ರದೇಶದ ಕುಟುಂಬಗಳು ಬಯಲು ಜಾಗವನ್ನು ಅವಲಂಬಿಸಿವೆ. ಆದರೆ ಇದು ನಗರ ಪ್ರದೇಶದಲ್ಲಿ ಪಪ ೭೦ರಷ್ಟು ಕುಟುಂಬಗಳು ಮತ್ತು ಶೇಕಡ ೬೮ರಷ್ಟು ಪಜಾ ಕುಟುಂಬಗಳು ಶೌಚಾಲಯದ ಸೌಲಭ್ಯವನ್ನು ಹೊಂದಿವೆ. ಅನುಕ್ರಮವಾಗಿ ಶೇಕಡ ೨೯ರಷ್ಟು ಮತ್ತು ೩೨ರಷ್ಟು ರಾಜ್ಯದಲ್ಲಿನ ಪಪ ಮತ್ತು ಪಜಾ ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ. ಇದರಲ್ಲಿ ಒಂದು ಅಂಶ ಸ್ಪಷ್ಟವಾಗುತ್ತದೆ. ಅದೇನೆಂದರೆ ಗ್ರಾಮೀಣ ಪ್ರದೇಶದಲ್ಲಿನ ಪಪ ಮತ್ತು ಪಜಾ ಕುಟುಂಬಗಳು ನಗರ ಪ್ರದೇಶಕ್ಕಿಂತ ತೀರ ಕಡಿಮೆ ಕುಟುಂಬಗಳು ಸೌಲಭ್ಯವನ್ನು ಹೊಂದಿವೆ. ನಗರದಲ್ಲಿ ವಾಸಿಸುವ ಶೇಕಡ ೨೩ರಷ್ಟು ಪಪ ಮತ್ತು ಪಜಾ ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿರದೆ ಬಯಲನ್ನೇ ಹೆಚ್ಚಾಗಿ ಅವಲಂಬಿಸಿವೆ. ತಲಾ ಶೇಕಡ ೬೭ರಷ್ಟು ಪಪ ಮತ್ತು ಶೇಕಡ ೬೩ರಷ್ಟು ಪಜಾ ಕುಟುಂಬಗಳು ಬಯಲಿನಲ್ಲಿ ಮಲಮೂತ್ರ ವಿಸರ್ಜನೆ ಮಾಡುತ್ತಾರೆ. ಇನ್ನು ಶೇಕಡ ೧೦ಕ್ಕಿಂತ ಕಡಿಮೆಯ ಪಪ ಮತ್ತು ಪಜಾ ಕುಟುಂಬಗಳು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿರುವ ಸಾರ್ವಜನಿಕ ಶೌಚಾಲಯವನ್ನು ಉಪಯೋಗಿಸುತ್ತಾರೆ.

ನಮ್ಮ ದೇಶವು ಸ್ವಾತಂತ್ರ್ಯ ಪಡೆದು ೬೮ ವರ್ಷಗಳಾದರೂ ದೇಶದಲ್ಲಿರುವ ಕಟ್ಟ ಕಡೆಯ ಕುಟುಂಬಗಳಿಗೆ ಅಥವಾ ವ್ಯಕ್ತಿಗಳಿಗೆ ಕನಿಷ್ಠ ಮೂಲಭೂತ ಸೌಕರ್ಯಗಳಾದ ಮನೆ, ಆಹಾರ, ಬಟ್ಟೆ, ಆರೋಗ್ಯ, ನೀರು ಮತ್ತು ಶುಚಿತ್ವವನ್ನು ಒದಗಿಸಲು ಸಾಧ್ಯವಾಗಿಲ್ಲ. ಮೇಲೆ ವಿವರಿಸಿದ ಜನಗಣತಿಯ ಅಂಕಿ ಅಂಶಗಳಿಂದ ತಿಳಿದುಬರುವುದೇನೆಂದರೆ ಪಪ ಮತ್ತು ಪಜಾ ಕುಟುಂಬಗಳಿಗೆ ಶೌಚಾಲಯವನ್ನು ಹೊಂದುವದು ಅಥವಾ ಅದನ್ನು ಪಡೆಯುವಲ್ಲಿ ಕಷ್ಟವಾಗಿದೆ ಎಂದು ತಿಳಿದುಬರುತ್ತದೆ. ಅದರಲ್ಲಿ ಪ್ರಮುಖವಾಗಿ ಎಲ್ಲ ಜನರ ಆರೋಗ್ಯದೊಂದಿಗೆ ನೇರ ಸಂಬಂಧ ಹೊಂದಿರುವ ಶೌಚಾಲಯದ ಪ್ರಮಾಣ ಕರ್ನಾಟಕದಲ್ಲಿ ಕೇವಲ ಶೇಕಡ ೧೬ರಷ್ಟು ಪಪ ಮತ್ತು ಪಜಾ ಗ್ರಾಮೀಣ ಕುಟುಂಬಗಳು ಶೌಚಾಲಯವನ್ನು ಹೊಂದಲು ಶಕ್ತವಾಗಿವೆ. ಕೇವಲ ಶೌಚಾಲಯದ ಮಾಹಿತಿಯೇ ಈ ರೀತಿಯಾಗಿರಬೇಕಾದರೆ, ಇನ್ನು ಜೀವಿಸಲು ಬಹಳ ಅವಶ್ಯಕವಾದ ಒಂದು ತುತ್ತಿನ ಆಹಾರ, ಮಾನ ಕಾಪಾಡಿಕೊಳ್ಳಲು ಅಗತ್ಯವಿರುವ ಬಟ್ಟೆ, ದಿನನಿತ್ಯ ಕೆಲಸ ಮಾಡುವ ಸಲುವಾಗಿ ಆರೋಗ್ಯವಂತರಾಗಿರಲು ಔಷಧಿಗಳು, ಮಕ್ಕಳಿಗೆ ಉತ್ತಮ ಶಿಕ್ಷಣ ಕೊಡಿಸುವದು ಮತ್ತು ವಾಸಿಸಲು ಯೋಗ್ಯವಾಗಿರುವ ಮನೆ ಹೊಂದಲು ಮತ್ತು ದಿನನಿತ್ಯದ ಜೀವನದಲ್ಲಿ ಬೇಕಾಗಿರುವ ಅವಶ್ಯಕ ವಸ್ತುಗಳು ಲಭ್ಯವಿರುವಂತಾಗುವುದು ಎಂದಿಗೆ? ನಮ್ಮ ದೇಶದಲ್ಲಿ ಅತ್ಯಂತ ಜಟಿಲ ಸಮಸ್ಯೆಯಾಗಿರುವ ಈ ಜಾತಿ ಎಂಬ ಚಕ್ರವ್ಯೂಹದಿಂದ ಹೊರಬರಲು ಇನ್ನು ಎಷ್ಟು ವರ್ಷಗಳು ಬೇಕಾಗಬಹುದು, ಎಂಬುವುದು ಯಕ್ಷ ಪ್ರಶ್ನೆಯಾಗಿದೆ. ಒಂದು ವೇಳೆ ಶೌಚಾಲಯವನ್ನು ಹೊಂದಲು ನಮ್ಮ ಸಂಪ್ರದಾಯ ಅಡ್ಡಿಯಾಗುವುದಾದರೆ ಮೇಲುವರ್ಗದವರಿಗೆ ಏಕೆ ಅದು ಅಡ್ಡಿಯಾಗುವುದಿಲ್ಲ ?

**ಹೆಚ್. ಆರ್. ಚನ್ನಕ್ಕಿ**
ಕ್ಷೇತ್ರ ಪರಿವೀಕ್ಷಕರು, ಜನಸಂಖ್ಯೆ ಸಂಶೋಧನಾ ಕೇಂದ್ರ
ಧಾರವಾಡ – ೫೮೦ ೦೦೪

## ಅರ್ಯಮನ್

# ದೇವರು ಕೆಲವು ಟಿಪ್ಪಣಿಗಳು

ತರ್ಕದಿಂದ ದೇವರನ್ನು ಸಮರ್ಥಿಸಲು ಬರುವುದಿಲ್ಲ. ಅದಕ್ಕೇ ಇರಬೇಕು, ಒಂದು ಉಪನಿಷತ್ತಿನಲ್ಲಿ ಬ್ರಹ್ಮವಸ್ತುವಿನ ಬಗ್ಗೆ ಹೇಳುವಾಗ ''ನೈಷಾ ತರ್ಕೇಣ ಮತಿರಾಪನೇಯಾ'' (ತರ್ಕದಿಂದ ತಿಳಿಯುವುದಲ್ಲ) ಎಂದದ್ದು. ಅದನ್ನು ಸರ್ವಥಾ ನಿರಾಕರಿಸಿದ ಉದಯನಾಚಾರ್ಯನು ತನ್ನ ''ನ್ಯಾಯ ಕುಸುಮಾಂಜಲಿ'' ಎಂಬ ಗ್ರಂಥದಲ್ಲಿ ತರ್ಕದಿಂದಲೇ ದೇವರ ಅಸ್ತಿತ್ವವನ್ನು ಸ್ಥಾಪಿಸುತ್ತಾನೆ. ಬಹಳ ಸ್ಥೂಲವಾಗಿ ಅವನ ವಾದವನ್ನು ಸಂಗ್ರಹಿಸುವುದಾದರೆ, ''ಮಡಿಕೆಯು ಕುಂಬಾರನಿಲ್ಲದೆ ಅಸ್ತಿತ್ವ ಪಡೆಯಲಾರದು; ಅಂತೆಯೇ, ಪ್ರಪಂಚ ಅಸ್ತಿತ್ವಕ್ಕೆ ಬರಲು ಒಬ್ಬ ದೇವರು ಅಗತ್ಯ.'' ಉದಯನನ ತರ್ಕವು ಇಷ್ಟು ಸರಳವಲ್ಲ. ಬಹಳ ಆಳವಾದ ತರ್ಕ ಅವನ ವೈಶಿಷ್ಟ್ಯ. ನಾಲ್ಕು ಅಧ್ಯಾಯಗಳಲ್ಲಿ ತನ್ನ ವಾದವನ್ನವನು ಮಂಡಿಸಿದ್ದಾನೆ.

ನಮ್ಮ ದೇಶದಲ್ಲಿ ನೂರಾರು ವಿಭಾಗಗಳ ಜನರಿದ್ದಾರೆ. ಪ್ರಪಂಚವನ್ನೆಲ್ಲಾ ಲೆಕ್ಕಕ್ಕೆ ತೆಗೆದುಕೊಂಡರೆ ಅದು ಇನ್ನೂ ನೂರ್ಮಡಿ ಆಗುತ್ತದೆ. ಈ ನೂರಾರು ವಿಭಾಗಗಳು ನೂರಾರು ದೇವರುಗಳನ್ನು ನೂರಾರು ಹೆಸರುಗಳಿಂದ ನೂರಾರು ವಿಧಾನಗಳಲ್ಲಿ ನೂರಾರು ಆಶಯಗಳ ಪೂರೈಕೆಗಾಗಿ ನೂರಾರು ಬಾರಿ ಪೂಜಿಸುತ್ತಿದ್ದಾರೆ, ತಣಿಸುತ್ತಿದ್ದಾರೆ. ದೇಶದ ಮತ್ತು ಜನರ ವಿದ್ಯಮಾನಗಳನ್ನು ಮತ್ತು ಪ್ರಚಂಡ ಬಾಧೆಗಳನ್ನು ಗಮನಿಸಿದರೆ ಕೋಟಿಗಟ್ಟಲೆ ಹಣದಿಂದ ಮಾಡಿರುವ ಪೂಜೆಗಳೆಲ್ಲಾ ವ್ಯರ್ಥವೆಂದು ಕಂಡುಬರುತ್ತದೆ. ಇಲ್ಲದ ದೇವರಿಗೆ ಪೂಜೆ ಮಾಡಿದರೆ ದೊರಕುವ ಸೌಭಾಗ್ಯವಿಷ್ಟೇ ಎನ್ನಬೇಕು, ಇಲ್ಲವೆ ಅವನಿದ್ದರೂ ದಂಡಕ್ಕಿದ್ದಾನೆ ಎನ್ನಬೇಕು. ದೇವರು ಯಾವಾಗಲೂ 'ಅವನು'; 'ಅವಳು' ಅಲ್ಲ. ಅವನ ರಮಣೀಯ ಜೀವನಕ್ಕೆ ದೇವರು ಹೆಣ್ಣು ದೇವರೊಬ್ಬಳನ್ನು ಜೊತೆಗಿರಿಸಿಕೊಂಡಿರುತ್ತಾನೆ, ಅಷ್ಟೆ, ಎನಿಸುತ್ತದೆ.

ದೇವರ ಬಗ್ಗೆ ಮಾತನಾಡುವಾಗ ನಮ್ಮ ಕೋರಿಕೆಗಳು, ಅವುಗಳ ಸಾಫಲ್ಯ ಅಥವಾ ವಿಫಲತೆ, ಇವೆಲ್ಲಾ ಗೌಣವೆಂದು ಹೇಳುವುದು ವಾಡಿಕೆ. ಹಾಗಿದ್ದರೆ ಅವನನ್ನು ಕೋರಿಕೊಳ್ಳಬೇಕೇಕೆ ? ಕೋರಿದ್ದನ್ನು ಕೊಡುವುದು ಅಥವಾ ಬಿಡುವುದು ಅವನ ಇಚ್ಛೆ ಮತ್ತು ಸಂತೋಷ ಎನ್ನುವುದಾದರೆ ಅವನಷ್ಟು ಕೇಡುಮತಿಯವನು ಇನ್ನೊಬ್ಬ ಇರಲಾರ. ಎಲ್ಲವೂ "ನನ್ನ ಕರ್ಮದ ಫಲ" ಎಂದು ವಾದಿಸುವಾಗ ದೇವರಿಗೆ ಖಂಡಿತ ಸ್ಥಾನವಿರುವುದಿಲ್ಲ. ಇವನ ಬಗ್ಗೆ ಶತಮಾನಗಳಿಂದಲೂ ಜನ ತಲೆ ಕೆಡಿಸಿಕೊಳ್ಳುತ್ತಲೇ ಬಂದಿದ್ದಾರೆ; ಬೇರೆಷ್ಟೋ ಮಂದಿ ಆ ಗೋಜಿಗೆ ಹೋಗದೆ ಯಾವುದೋ ಪುಸ್ತಕದಲ್ಲಿರುವುದನ್ನೋ ಅಥವಾ ಯಾವನೋ (ಮತ್ತೆ 'ಯಾವನೋ'; 'ಯಾವಳೋ' ಅಲ್ಲ !) "ಗುರು" ಹೇಳಿದ್ದನ್ನೋ ಗುನುಗುತ್ತಾ ಕುಳಿತಿದ್ದಾರೆ. ಯಾರೋ ಚೇಷ್ಟೆ ಮಾಡುವ ಹುಡುಗ ದೇವರ ಅಸ್ತಿತ್ವವನ್ನು ನಿರಾಕರಿಸಲು ಪ್ರಪಂಚವನ್ನು ತೋರಿಸಿದನಂತೆ. ಏನಿದೆ ಅಲ್ಲಿ ಅಂತಹ ಅದ್ಭುತ ? ಅವನೆಂದ, "ಇದೆ ನೋಡಿ; ಮುಳ್ಳಿದೆ, ಹಾವಿದೆ, ಚೇಳಿದೆ, ಹುಲಿಯಿದೆ, ಕುಂಟನಿದ್ದಾನೆ, ಕುರುಡನಿದ್ದಾನೆ, ಹೊಟ್ಟೆಗಿಲ್ಲದವನಿದ್ದಾನೆ, ಹಿಂಸೆಗೆ ಬಲಿಯಾದವನಿದ್ದಾನೆ; ಅವೆಲ್ಲಾ ನಿಮಗೆ ಕಾಣುವುದಿಲ್ಲವೆ ?" ಗಾಂಧೀಜಿ ಕೂಡ ಹೇಳುತ್ತಿದ್ದರು, "ಈ ಪರಮಾತ್ಮನ ಸೃಷ್ಟಿಯಲ್ಲಿ ಮುಳ್ಳು ಮತ್ತು ಚೇಳು ಏಕಿವೆಯೆಂಬುದು ನನಗೆ ತಿಳಿಯದು," ಎಂದು. ಚೇಳನ್ನೂ ಒಂದು ಮಗುವನ್ನೂ ದೂರದೂರ ಇಡಬೇಕೆಂಬಷ್ಟು ಪ್ರಜ್ಞೆ ಮತ್ತು ಕರುಣೆ ಇಲ್ಲದ, "ಇಲ್ಲದ" ದೇವರು ಚೇಳನ್ನು ಮಗುವಿನ ತೊಟ್ಟಿಲಿಗೆ ಬಿಟ್ಟ. ಅಸಮಾನತೆಯ ಆಗರವಾಗಿರುವ ವಿಶ್ವವು ಅವನ ನೈರ್ಘೃಣ್ಯವನ್ನು ತೋರಿಸುತ್ತದೆ ಮತ್ತು ಕೆಲವರು ಕುಂಟರಾಗಿರುವುದು ಅವನ ಸೃಷ್ಟಿಯಲ್ಲಿ ವೈಷಮ್ಯವನ್ನು ಹೊರಗೆಡಹುತ್ತದೆ. ಇದಕ್ಕೆ ಪ್ರತಿಯಾಗಿ ದೇವರನ್ನು ಬಲವಾಗಿ ಸಮರ್ಥಿಸಿದ ರಾಮಾನುಜ ಆಚಾರ್ಯರು ಬುದ್ಧಿವಂತಿಕೆಯಿಂದ ಅದನ್ನು ತಳ್ಳಿಹಾಕಿ "ಎಲ್ಲಾ ಪರಮಾತ್ಮನ ಲೀಲೆ" ಎಂದುಬಿಟ್ಟರು. ಅವನ ಲೀಲೆಗಾಗಿ ನಾವಿಲ್ಲಿ ಒದ್ದಾಡುತ್ತಿರಬೇಕು. ಗುಲಾಮಗಿರಿ ಇದ್ದ ಕಾಲದಲ್ಲಿ ರೋಮಿನ ಜನ ತಮ್ಮ ಲೀಲೆಗಾಗಿ ಮನುಷ್ಯನೊಬ್ಬನನ್ನು ಸಿಂಹದ ಜೊತೆ ಪಂಜರದಲ್ಲಿ ಕೂಡಿಹಾಕಿ, ಅದು ಅವನನ್ನು ಕಿತ್ತು ತಿನ್ನುವುದನ್ನು ನೋಡಿ ಮಹದಾನಂದದಿಂದ ಕುಣಿದಾಡುತ್ತಿದ್ದರಂತೆ. ಇವರ ಲೀಲೆಯು ದೇವರ ಲೀಲೆಗೆ ಹೋಲಿಸಿದರೆ ಎಷ್ಟೋ ನಾಗರಿಕ ಸದ್ಭಾವನೆಯಿಂದ ತುಂಬಿದೆ ಎನ್ನಬೇಕು ! ಅದೆಲ್ಲಾ ಹೋಗಲಿ, ಇಲ್ಲದ ದೇವರನ್ನು ಸುಮ್ಮನೆ ದಬಾಯಿಸುತ್ತಿದ್ದರೆ ಏನು ಪ್ರಯೋಜನ ? ಮುಖ್ಯ ವಿಷಯವೇನೆಂದರೆ, ರೋಮಿನ ಗುಲಾಮರು ತಮ್ಮ ಒಡೆಯರಿಗೆ ಚೆನ್ನಾಗಿ ಒದ್ದು ಪಾಠ ಕಲಿಸಿದರು; ದೇವರ ಆಣತಿಯಂತೆ ಅಲ್ಲ, ಆದರೆ ತಮ್ಮ ಸ್ವಯಮಿಚ್ಛೆ ಮತ್ತು ಸಂಘಟನೆಗಳಿಂದ. ಗುಲಾಮರ ಒಡೆಯರನ್ನು ಯಾವ ನರಿಸಿಂಹವಾಗಲಿ, ನರಸಿಂಹನಾಗಲಿ ಬಂದು ಕಾಪಾಡಲು ಸಾಧ್ಯವಾಗಲಿಲ್ಲ.

ದೇವರ ಸರ್ವಶಕ್ತಿ, ಸರ್ವಜ್ಞತ್ವ ಮತ್ತು ಸರ್ವಾಂತರ್ಯಾಮಿತ್ವವನ್ನು ಪರೀಕ್ಷಿಸಿದರೆ ಅವನ ಭೋಳೆತನ ಬಿಚ್ಚಿಕೊಳ್ಳುತ್ತದೆ. "ದೇವರು ಎಲ್ಲವನ್ನೂ ಸೃಷ್ಟಿಮಾಡಿದ್ದಾನೆ." – ಇದು ಮಗುವಿಗೆ "ಮಾಮಿ ಜೋತ ಮಾಡು, ಮರಿ" ಎಂದು ಹೇಳುವ ಕಾಲದಿಂದಲೂ ಅದರ ತಲೆಯಲ್ಲಿ ತುಂಬಲಾಗಿರುವ ಅದ್ಭುತ ಜ್ಞಾನ. "ಎಲ್ಲವನ್ನೂ ಎಂದರೆ, ನಿಜಕ್ಕೂ ಎಲ್ಲವನ್ನೂ ಅವನೇ ಮಾಡಿದ್ದಾನೆಯೆ ?" ಎಂದು ಒಮ್ಮೆ ಬರ್ನಾರ್ಡ್ ಶಾ



ಕೇಳಿದನಂತೆ. "ಇದೇನು ತಲೆಹರಟೆ ನಿನ್ನದು; ಹೌದು, ಎಲ್ಲವನ್ನೂ, ಅಂದರೆ ನಿಜಕ್ಕೂ ಎಲ್ಲವನ್ನೂ, ಅವನೇ ಸೃಷ್ಟಿಸಿದ್ದಾನೆ" ಎಂದು ಉತ್ತರ ಕೊಡಲಾಯಿತು. "ಹೌದೆ ? ಅಂದರೆ, ಸೃಷ್ಟಿ ಮಾಡುವಾಗ ಅವನೆಲ್ಲೋ ನಿಂತಿದ್ದನಲ್ಲಾ, ಆ ಜಾಗವನ್ನೂ ಅವನೇ ಮಾಡಿದನೆ ? ಹಾಗಿದ್ದರೆ ಅದನ್ನು ಮಾಡುವಾಗ ಅವನೆಲ್ಲಿ ನಿಂತಿದ್ದ ?" ಎಂದು ಶಾ ಕೇಳಿದ್ದಕ್ಕೆ ದೇವರ ಭಕ್ತರೆಲ್ಲಾ ಹೌಹಾರಿ ಹೋದರಂತೆ ! ದೇವರು ಸೃಷ್ಟಿಸುವವರೆಗೆ ಏನೂ ಇರಬಾರದು ಅಥವಾ ಏನೂ ಇರುವುದಿಲ್ಲ ಎಂದಾದರೆ ಅದಕ್ಕೆ ಮುನ್ನ ಅವನೆಲ್ಲಿದ್ದನೆನ್ನುವ ಪ್ರಶ್ನೆ ಕೇವಲ ಕುಚೇಷ್ಟೆಯ ಪ್ರಶ್ನೆಯಲ್ಲ. ಇದು ಪ್ರಪಂಚವು ಆದಿಶೇಷನ ಹೆಡೆಯ ಮೇಲೆ ನಿಂತಿರುವ ಐತಿಹ್ಯಕ್ಕೆ ಸಮಾನವಾದ್ದು. ಕೆಲವರಿಗೆ ಅಟ್ಲಾಸ್ ಇರುತ್ತಾನೆ, ಆದಿಶೇಷನ ಬದಲು, ಪ್ರಪಂಚ ಹೊರುವುದಕ್ಕೆ. ಯಾರೇ ಹೊತ್ತಿರಲಿ, ಆ ಹೊತ್ತಿರುವವರು ಎಲ್ಲಿ ಅಥವಾ ಯಾರ ಮೇಲೆ ನಿಂತಿದ್ದಾರೆ ? ಆ ಅದು ಅಥವಾ ಅವನು ಇನ್ನಾವುದರ ಅಥವಾ ಇನ್ನಾರ ಮೇಲೆ ನಿಂತಿದ್ದಾನೆ ? ಒಳ್ಳೆ, ಫಜೀತಿಯಾಯಿತಲ್ಲ, ಇದು ಕೊನೆಯಿಲ್ಲದ ಪ್ರಶ್ನೆ. ಮಕ್ಕಳು ಹೇಳುವುದಿಲ್ಲವೇ, "ನಿನ್ನ ಬಳಿ ಇರುವ ಗೋಲಿಗಳಿಗಿಂತ ಒಂದು ಹೆಚ್ಚಾಗಿದೆ ನನ್ನಲ್ಲಿ", ಎಂದು, ಹಾಗೆ. ಆದಿಶೇಷನಿಗೆ ಮುಜುಗರದ ಪ್ರಶ್ನೆ ಹಾಕಿದವನು ಭಾಸ್ಕರ, ಆರ್ಯಭಟನ (ಅವನು ಆರ್ಯಭಟ್ಟನಲ್ಲ) ಗ್ರಂಥದ ವ್ಯಾಖ್ಯಾನಕಾರ.

ಅಂದರೆ, ತರ್ಕದಿಂದ ದೇವರನ್ನು ಸಮರ್ಥಿಸಲು ಬರುವುದಿಲ್ಲ. ಅದಕ್ಕೇ ಇರಬೇಕು, ಒಂದು ಉಪನಿಷತ್ತಿನಲ್ಲಿ ಬ್ರಹ್ಮವಸ್ತುವಿನ ಬಗ್ಗೆ ಹೇಳುವಾಗ "ನೈಷಾ ತರ್ಕೇಣ ಮತಿರಾಪನೇಯಾ" (ತರ್ಕದಿಂದ ತಿಳಿಯುವುದಲ್ಲ) ಎಂದದ್ದು. ಅದನ್ನು ಸರ್ವಥಾ ನಿರಾಕರಿಸಿದ ಉದಯನಾಚಾರ್ಯನು ತನ್ನ "ನ್ಯಾಯ ಕುಸುಮಾಂಜಲಿ" ಎಂಬ ಗ್ರಂಥದಲ್ಲಿ ತರ್ಕದಿಂದಲೇ ದೇವರ ಅಸ್ತಿತ್ವವನ್ನು ಸ್ಥಾಪಿಸುತ್ತಾನೆ. ಬಹಳ ಸ್ಥೂಲವಾಗಿ ಅವನ ವಾದವನ್ನು ಸಂಗ್ರಹಿಸುವುದಾದರೆ, "ಮಡಿಕೆಯು ಕುಂಬಾರನಿಲ್ಲದೆ ಅಸ್ತಿತ್ವ ಪಡೆಯಲಾರದು; ಅಂತೆಯೇ, ಪ್ರಪಂಚ ಅಸ್ತಿತ್ವಕ್ಕೆ ಬರಲು ಒಬ್ಬ ದೇವರು ಅಗತ್ಯ." ಉದಯನನ ತರ್ಕವು ಇಷ್ಟು ಸರಳವಲ್ಲ. ಬಹಳ ಆಳವಾದ ತರ್ಕ ಅವನ ವೈಶಿಷ್ಟ್ಯ. ನಾಲ್ಕು ಅಧ್ಯಾಯಗಳಲ್ಲಿ ತನ್ನ ವಾದವನ್ನವನು ಮಂಡಿಸಿದ್ದಾನೆ. ಬೌದ್ಧಿಕವಾಗಿ ಉನ್ನತ ಮಟ್ಟದ ಗ್ರಂಥ ಇದು. ಬೌದ್ಧರ ವಾದವನ್ನು ವಿಶೇಷವಾಗಿ ಖಂಡಿಸಿರುವ ಉದಯನನಿಗೆ ಪ್ರಪಂಚದ ಸೃಷ್ಟಿಯ ಬಗ್ಗೆ ಬುದ್ಧನ ನಿರಾಸಕ್ತಿಯು ಸರಿಯೆನಿಸುವುದಿಲ್ಲ. ನಂತರದ ಶತಮಾನವೊಂದರಲ್ಲಿ ಉದಯನನದೆಂದು ಹೇಳಲಾದ ಒಂದು ಪದ್ಯವು ಪ್ರಚಾರಕ್ಕೆ ಬಂದಿತು. ಅದರ ಪ್ರಕಾರ, ದೇವರನ್ನು ತಾರ್ಕಿಕವಾಗಿ ಸ್ಥಾಪನೆ ಮಾಡಿದ ಉದಯನ ನಿಜ ಜೀವನದಲ್ಲಿ ಬಡವ; ಅವನಿಗೆ ದೇವರು ಒಲಿಯಲಿಲ್ಲ, ಕೃತಜ್ಞನಾಗಲಿಲ್ಲ. ಆದ್ದರಿಂದ ಅವನು ದೇವರಿಗೆ ಹೇಳಿದ, "ಎಲೈ ದೇವರೆ, ನಿನಗೆ ಐಶ್ವರ್ಯದ ಮದ ಹುಚ್ಚು ಹಿಡಿಸಿದೆ; ಆದ್ದರಿಂದಲೇ ನಾನೆಂದರೆ ನಿನಗೆ ಉಪೇಕ್ಷೆ. ಆಗಲಿ



ಅನ್ನ ಭಾಗ್ಯದ ಅಕ್ಕಿಯಲ್ಲಿ ಕಲ್ಲು ಹುಡುಕಿದ ಹಾಗೆ ಮೊಸರಿನಲ್ಲಿ ಕಲ್ಲು ಹುಡುಕಬೇಡ ಕಣಯ್ಯ....!

ಬಿಡು, ಜಿದ್ದು ಸಾಧಿಸಲು ನನಗೂ ಕಾಲ ಬರುತ್ತದೆ. ಆ ಬೌದ್ಧರಿದ್ದಾರಲ್ಲ, ಅವರು ಬಂದು (ವಾದದಲ್ಲಿ) ನಿನ್ನನ್ನು ಚೆನ್ನಾಗಿ ಸಿಗಿದುಹಾಕುತ್ತಾರೆ. ಆಗ ನಿನ್ನನ್ನು ಉಳಿಸಲು ನನ್ನನ್ನು ಬಿಟ್ಟು ಯಾರಿರುತ್ತಾರೆ ? ನಿನ್ನ ಅಸ್ತಿತ್ವವು ನನ್ನ ಅಧೀನದಲ್ಲಿದೆ, ತಿಳಿಯಿತೆ", ಎಂದು. (ಐಶ್ವರ್ಯ ಮದಮತ್ತೋಽಸಿ ಮಾಮವಜ್ಞಾಯ ವರ್ತಸೇ। ಉಪಸ್ಥಿತೇಷು ಬೌದ್ಧೇಷು ಮದಧೀನಾ ತವ ಸ್ಥಿತಿಃ ॥)

ಒಟ್ಟಿನಲ್ಲಿ, ನಾವು ಕಲ್ಪಿಸಿಕೊಂಡಿರುವ ದೇವರು ಹೇಗೆ ತಾನೆ ಸ್ವತಂತ್ರನಾಗಿ ಮೆರೆಯಬಲ್ಲ ? ನಾವು ತೀರ್ಮಾನಿಸಿದಾಗ ಕಲ್ಪನೆಯ ಗಡಿಗೆಯನ್ನು ಕುಕ್ಕಿ ಆ ದೇವರನ್ನು ಭೂಗತನನ್ನಾಗಿಸಬಹುದು. ಇನ್ನೊಂದು ಸಂಗತಿ ನೋಡೋಣ : ಎಲ್ಲ ದೇವರುಗಳೂ ಅಮೃತವಾಕ್ಯಗಳನ್ನಾಡಿದ್ದಾರೆ. ಭಗವದ್ಗೀತೆ, ಬೈಬಲ್, ಕುರಾನ್, ಅವೆಸ್ತ, ತಾಲ್ಮುಡ್, ಹೀಗೆ ಎಲ್ಲವೂ ದೈವವಾಣಿಗಳೇ, ಎಲ್ಲವೂ ಶ್ರೇಷ್ಠವೇ. ಆದರೆ ಈ ದೇವರುಗಳ ವ್ಯಾಪ್ತಿ ಎಷ್ಟು ಸಂಕುಚಿತವೆಂದರೆ ಪಶ್ಚಿಮ ಏಷ್ಯದಲ್ಲಿ ಹುಟ್ಟಿಕೊಂಡ ದೇವರುಗಳಿಗೆ (ಯಹೂದಿ, ಕ್ರೈಸ್ತ ಮತ್ತು ಇಸ್ಲಾಂ) ವಿಪರೀತ ಸಿಟ್ಟು, ದ್ವೇಷ, ಎಲ್ಲ ಇದೆ. "ನನ್ನನ್ನುಳಿದು ಬೇರೆಯವರನ್ನು ಆರಾಧಿಸ ಬೇಡ" ಎಂದು ಹಳೆಯ ಒಡಂಬಡಿಕೆ ಸ್ಪಷ್ಟವಾಗಿ ಹೇಳಿದೆ; ಇತರ ಗ್ರಂಥಗಳನ್ನು ನೋಡಿದರೆ ಇದೇ ಭಾವನೆ ಅಲ್ಲೂ ಕಾಣುತ್ತದೆ. ಹಾಗಿದ್ದರೆ ಇವರೆಂಥ ದೇವರುಗಳು ? ಗ್ರೀಕರ ದೇವರುಗಳಂತೂ ಜಗಳಗಂಟಿಗಳು. ಇನ್ನೊಬ್ಬ ದೇವರ ಮೇಲೆ ಸೇಡು ತೀರಿಸಿಕೊಳ್ಳಲು ಈ ಗ್ರೀಕ್ ದೇವತೆಗಳು ಅವರ ವೈರಿ ದೇವರುಗಳ ಭಕ್ತರಿಗೆ ಕಿರುಕುಳ ನೀಡಿ ಸಾಯಿಸುತ್ತಾರೆ. ನಮ್ಮ ಉದಾತ್ತ ಸಂಸ್ಕೃತಿಯಲ್ಲೂ ದೇವರುಗಳ ನೈತಿಕತೆ ಇದಕ್ಕಿಂತಲೂ ತೀರಾ ಭಿನ್ನವಾದುದೇನಲ್ಲ. ಮೋಹಿನಿ ರೂಪದಲ್ಲಿರುವ ವಿಷ್ಣುವನ್ನು ಕಂಡು ನಮ್ಮ ಶಿವ ಪರವಶನಾಗಿ ನಮಗೆ ಅಸಹನೀಯವಾದ ಅಯ್ಯಪ್ಪನನ್ನು ಕರುಣಿಸಿದ್ದಾನೆಂದರೆ ಏನು ಹೇಳೋಣ ! ಸಾರಾಂಶವಿಷ್ಟೆ : ನಮ್ಮ ಸುತ್ತಣ ಸೀಮಿತ ಪ್ರಪಂಚ, ಜನ, ಸನ್ನಿವೇಶ, ಸಂಘರ್ಷ, ಇವನ್ನೆಲ್ಲಾ ಆಧಾರವಾಗಿಟ್ಟು ಕೊಂಡು ದೇವರುಗಳನ್ನು ಸೃಷ್ಟಿಸಿಕೊಂಡಿದ್ದೇವೆ. ವಾಸ್ತವವಾಗಿ ಅವರಿಗೆ ಅಸ್ತಿತ್ವದಲ್ಲಿರುವ ಹಕ್ಕೇ ಇಲ್ಲ.

ದೇವರ ಸಂಕುಚಿತ ವ್ಯಾಪ್ತಿ ನೋಡಿದರೆ ಅವನೆಷ್ಟು ಕುಬ್ಜ ಎಂಬುದು ಇನ್ನೂ ಸ್ಪಷ್ಟವಾಗುತ್ತದೆ. ನಮಗೆ ಗೊತ್ತಿರುವ ಮಹಾನ್ ದೇವರುಗಳಿಗೆ ಯಾರಿಗಾದರೂ ಆರ್ಕ್‌ಟಿಕ್ ಗೊತ್ತಿತ್ತೆ, ಚಿಲಿ ಗೊತ್ತಿತ್ತೆ ? ಅವರಿಗೆ ಗೊತ್ತಿದ್ದುದು ಜೆರುಸಲೆಂ, ಮೆಕ್ಕಾ ಮತ್ತು ಗಂಗಾ ಬಯಲು, ಅಷ್ಟೆ. ಈಗಿನ ನಮ್ಮ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗೆ ಈ ದೊಡ್ಡ ದೇವರುಗಳು ತಿಳಿದಿದ್ದ ಪ್ರಪಂಚಕ್ಕಿಂತಲೂ ಹೆಚ್ಚು ವ್ಯಾಪಕವಾದ ಪ್ರಪಂಚ ಗೊತ್ತಿದೆ. ಭಗವದ್ಗೀತೆಯಲ್ಲಿ ವಿಶ್ವರೂಪ ದರ್ಶನ ಮಾಡಿಸಿದ "ಜಾರ-ಚೋರ" ಕೃಷ್ಣ ಪರಮಾತ್ಮನಿಗೆ ಭಾರತದ ಕೆಲವು ಭಾಗಗಳನ್ನು ಬಿಟ್ಟು ಇನ್ನೇನೂ ಇರಲಿಲ್ಲವೆ ಅರ್ಜುನನಿಗೆ ತೋರಿಸುವುದಕ್ಕೆ ? ಅವನ ಹತ್ತು ಅವತಾರಗಳು ನಮ್ಮ ದೇಶದಲ್ಲೇ ಆದದ್ದೇಕೆ ? ಇನ್ನೆಲ್ಲೂ ಧರ್ಮಕ್ಕೆ ಗ್ಲಾನಿಯುಂಟುಮಾಡುವವರು ಇರಲೇ ಇಲ್ಲವೆ ? ಒಂದು ಬಾರಿ ಉದ್ಧಾರ ಮಾಡಿದ ಧರ್ಮವನ್ನು ಗಟ್ಟಿಯಾಗಿ ನೆಲೆಸುವಂತೆ ಮಾಡಲು ಭಗವಂತನಿಗೆ ಏಕೆ ಸಾಧ್ಯವಾಗಲಿಲ್ಲ ? ಈ ಕುಬ್ಜ ಜ್ಞಾನಕ್ಕೆ ಪರ್ಯಾಯವಾಗಿ, ಭಾರತವೂ ಸೇರಿದಂತೆ ಪ್ರಾಚೀನ ದೇಶಗಳಲ್ಲೆಲ್ಲಾ ಪ್ರಕೃತಿ ಜ್ಞಾನ ಮತ್ತು ವಿಶ್ವ ಜ್ಞಾನವನ್ನು ಪಡೆದ ಅಮೋಘ ಸಾಹಸವನ್ನು ಗಮನಿಸೋಣ. ಈಜಿಪ್ಟಿನ ನೀರಿನ ದೇವರು ಮಾರ್ಡುಕ್. ಅವನ ವ್ಯಾಪ್ತಿ ಈಜಿಪ್ಟಿಗೆ ಸೀಮಿತ. ಆದರೆ ಅದೇ ದೇಶದ ಅತ್ಯಂತ ಪ್ರಾಚೀನ ಖಗೋಳಶಾಸ್ತ್ರಜ್ಞರ ವ್ಯಾಪ್ತಿ ಎಷ್ಟು ಅಗಾಧವಾಗಿದೆ ಎನಿಸುವುದಿಲ್ಲವೆ ? ಧ್ರುವ ನಕ್ಷತ್ರವನ್ನು ಎಲ್ಲ ಪ್ರಾಚೀನ ನಾಗರಿಕತೆಗಳವರೂ ಏಕಪ್ರಕಾರವಾಗಿ ಗುರುತಿಸಿದ್ದಾರೆ, ಸಪ್ತರ್ಷಿ ಮಂಡಲವನ್ನಾಗಲಿ ಕೃತ್ತಿಕಾ ನಕ್ಷತ್ರವನ್ನಾಗಲಿ ಅತ್ಯಂತ ನಿಷ್ಕೃಷ್ಟವಾಗಿ ಅರ್ಥ ಮಾಡಿಕೊಂಡಿದ್ದಾರೆ. ಇದರ ಅರ್ಥವೇನು ? ಇರುವುದನ್ನು ಎಲ್ಲ ಪ್ರಾಚೀನರೂ ಏಕಪ್ರಕಾರವಾಗಿ ತಿಳಿದುಕೊಂಡರು ಮತ್ತು ಇಲ್ಲದ್ದನ್ನು ಮನಬಂದಂತೆ ತಮ್ಮ ತಮ್ಮ ಸೀಮಿತ ಸನ್ನಿವೇಶಗಳಿಗೆ ತಕ್ಕಂತೆ ಕಟ್ಟಿಕೊಂಡರು. ಕಬ್ಬಿಣ ಹೇಗೆ ಮಾಡಬಹು ದೆಂಬುದನ್ನು ಎಲ್ಲ ಪ್ರಾಚೀನ ನಾಗರಿಕತೆಗಳವರೂ ಒಂದೇ ರೀತಿಯಲ್ಲಿ ಕಲಿತುಕೊಂಡರು; ಆದರೆ ದೇವರುಗಳಿಗೆ ಅಂತಹ ಹೆಮ್ಮೆಯ ಸ್ಥಾನವಿಲ್ಲ.

ಮೂಲತಃ ಮನುಷ್ಯನ ಮನಸ್ಸು ಮಹಾ ಸಂಚಾರಿ. ಅದನ್ನು ಕಟ್ಟಿಹಾಕಲು ಆಗದು. ಅದು ಏನೇನನ್ನೋ ತಿಳಿದುಕೊಳ್ಳಲು ಹಾತೊರೆಯುತ್ತದೆ, ಎಲ್ಲೆಲ್ಲೋ ನುಗ್ಗುತ್ತದೆ. ವಿಶ್ವದ ವಿಸ್ಮಯಕ್ಕೆ ಎಲ್ಲೆಯುಂಟೆ ? ಇಷ್ಟು ಅಗಾಧ ವಿಶ್ವದಲ್ಲಿ ಎಂತಹ ಕ್ಲುಪ್ತವಾದ ನಿಯಮಗಳಿವೆ ! ನಿಯಮ ತಿಳಿದಿರಲಿ, ಇಲ್ಲದಿರಲಿ, ಪ್ರಕೃತಿಯಲ್ಲಿ ಒಂದು ಗತಿ ಇದೆ (ಅಂದರೆ, ನಿಯಮಬದ್ಧವಾದ ಚಲನೆ ಇದೆ); ಅದನ್ನಂತೂ ನೋಡಿಯೇ ನೋಡುತ್ತೇವೆ.

ಮಳೆ ಬರಲು ಒಂದು ಕಾಲ. ವಸಂತ ನಾಟ್ಯಕ್ಕೆ ಇನ್ನೊಂದು ಕಾಲ. ಕಂಬಳಿ ಹೊದೆಯಲು ಮತ್ತೊಂದು ಕಾಲ. ಅದು ಅನಿಯಮಿತವಾಗಿ ಬದಲಾಗುವುದಿಲ್ಲ. (ಆದ್ದರಿಂದಲೇ ಮಳೆ ತರಿಸಲು ದೇವರಿಗೆ ಅಭಿಷೇಕ ಮಾಡುವವರು ನಮ್ಮ ದೇಶದಲ್ಲಿ ಜುಲೈ–ಆಗಸ್ಟ್‌ನಲ್ಲೇ ಮಾಡಬೇಕು. ಅಭಿಷೇಕವು ಮಳೆಗೆ ಕಾರಣವೆಂದು ಸ್ಥಿರವಾದರೆ ಏಪ್ರಿಲ್ ತಿಂಗಳಲ್ಲಿ ರಾಜಸ್ತಾನದ ಮರುಭೂಮಿಗೆ ಹೋಗಿ ಅಭಿಷೇಕ ಮಾಡಲಿ, ಮಳೆ ತರಿಸಲಿ. ತಿಪ್ಪರುಲಾಗ ಹಾಕಿದರೂ ಅದನ್ನು ಮಾಡಲಾಗುವುದಿಲ್ಲ.) ನಮ್ಮ ವಿಶ್ವದ ಅದ್ಭುತ ಅಂಥದು. ಅದನ್ನು ಕಂಡು ಮಾನವ ದಂಗಾಗಿಬಿಡುತ್ತಾನೆ, ನಮ್ರನಾಗುತ್ತಾನೆ. ನಿಯಮವೊಂದಿದೆಯೆಂದು ಗೊತ್ತು, ಆದರೆ ಅದು ಏಕಿದೆ ಮತ್ತು ಅದನ್ನು ನಿಯಂತ್ರಿಸಬಹುದೆ ಎಂಬ ಪ್ರಶ್ನೆಗಳು ಬಂದಾಗ, ನಿರ್ದಿಷ್ಟ ಉತ್ತರವಿಲ್ಲದಾಗ, ಕಲ್ಪನೆಗಳ ಮಹಾಪೂರವು ದೇವರುಗಳನ್ನು ಸೃಷ್ಟಿಸುತ್ತದೆ, ಮಂತ್ರಜಾಲವನ್ನು ಸೃಷ್ಟಿಸುತ್ತದೆ, ಪ್ರಕೃತಿಯನ್ನು ಅನುಕರಿಸುವ ಆಚರಣೆಗಳನ್ನು ಸೃಷ್ಟಿಸುತ್ತದೆ. ಅದು "ಹುಯ್ಯೋ ಹುಯ್ಯೋ ಮಳೆರಾಯ" ಎಂಬಂತಹ ಸರಳ, ನಿಷ್ಕಪಟ ಆಚರಣೆ ಆಗಬಹುದು, ಕೋಟಿಗಟ್ಟಲೆ ಸರ್ಕಾರಿ ಹಣ ಪಡೆದು ಬೆಂಕಿಗೆ ತುಪ್ಪ ಸುರಿಯುವ ರಾಮಚಂದ್ರಾಪುರ ಮಠದ ಗರ್ವದ ಯಜ್ಞವೂ ಆಗಬಹುದು. ದೇವರಿಗೆ ಬುದ್ಧಿ ಕಲಿಸುವ ಕತೆಗಳು ಜಾನಪದರಲ್ಲಿ ಎಷ್ಟೊಂದಿವೆಯಲ್ಲವೆ? ಇದನ್ನೆಲ್ಲಾ ಚಾರಿತ್ರಿಕ ಸನ್ನಿವೇಶಗಳ ಪರಿವೆಯಿಂದ ವಿಶ್ಲೇಷಿಸಿಕೊಳ್ಳುವ ಬದಲು ಮೂರ್ಖತನದಿಂದ ಯಾವುದೋ ದೇವರನ್ನು ಭಜಿಸಿ ಏನೋ ಗಿಟ್ಟಿಸಿಕೊಳ್ಳುವ ಹುನ್ನಾರವು ಬಾಲಿಶವಾದುದು, ಮೋಸದ ತಂತ್ರಗಾರಿಕೆಯದು. ಬೇರೆಯವರ ತಲೆಯ ಮೇಲೆ ಚಪ್ಪಡಿ ಎಳೆದು ಬಾಳುವವರಿಗೆ ತಿರುಪತಿಯ ರಕ್ಷಣೆ ಬೇಕು, ಆದ್ದರಿಂದ ಅವರ ಕೈಲಿ ತಲೆ ಜಜ್ಜಿಸಿಕೊಳ್ಳುವವರಿಗೂ ಅದೇ ತಿರುಪತಿಯ ಬೆನ್ನುಹತ್ತುವಂತೆ ಮಾಡುವುದು ಬುದ್ಧಿವಂತಿಕೆಯ ವ್ಯಾಪಾರ; ಇದು ಸ್ಟಾಕ್ ಮಾರ್ಕೆಟ್ ದಂಧೆಗೆ ಸಮನಾದುದು. ಇದು ವೆಂಕಟೇಶ್ವರನನ್ನು ತೆಗಳುವ ಪ್ರಸಂಗವಲ್ಲ. ಆ ತ್ರಿನಾಮಧಾರಿಗೆ, ಪಾಪ, ಮುಖವೇ ಇಲ್ಲ. ಅವನನ್ನು ಗುರಾಣಿಯಾಗಿ ಮಾಡಿಕೊಂಡಿರುವವರ ಬಗ್ಗೆ ಯಾವ ವಿಮರ್ಶೆಯೂ ಕಟುವಾಗುವುದಿಲ್ಲ. ಆ ವೆಂಕಟೇಶ್ವರನು ಮಹಾ ರಸಿಕ. ಕಮಲಾಕುಚದ ತೊಟ್ಟಿಗೆ ಬಳಿದ ಕುಂಕುಮವನ್ನು ತನ್ನ ನೀಲಿ ದೇಹಕ್ಕೆ ಅಂಟಿಸಿಕೊಂಡು ಕಂಗೊಳಿಸುವ ಕಾಮವೀರ ಅವನು. ಅಂದರೆ, ನಮ್ಮ ಕಾಮಕೇಳಿಗಳನ್ನು ಅವನಿಗೆ ಆರೋಪಿಸಿಬಿಡುತ್ತೇವೆ, ಅಷ್ಟೆ. ಹೋಗಲಿ, ವೆಂಕಟೇಶ್ವರ ಪಿಟ್ಸ್‌ಬರ್ಗ್‌ಗೆ ಹೋಗಿ ನೆಲೆಸಿದ್ದಾನಲ್ಲಾ, ಲಿಮಾ ನಗರಕ್ಕೋ ಅಕ್ರಾ ನಗರಕ್ಕೋ ಏಕೆ ಹೋಗಲಿಲ್ಲ? ಒಂದೇ ಮಾತಿನಲ್ಲಿ ಹೇಳಬೇಕಾದರೆ, ದೇವರು ನಮ್ಮ ಹಲವಾರು ವ್ಯವಹಾರಗಳಿಂದ ಹುಟ್ಟಿಕೊಂಡಿರುವ ಸರಕು. ಬೇರೆ ಉತ್ಪಾದಿತ ಸರಕುಗಳ ಹಿಂದೆ ತಾಂತ್ರಿಕ ಕೌಶಲ್ಯವಿದೆ, ದುಡಿಮೆಗಾರನ ಕೈಗಳಿವೆ, ಪ್ರಕೃತಿದತ್ತವಾದ ಕಚ್ಚಾ ಸಾಮಗ್ರಿಗಳಿವೆ. ಉತ್ಪನ್ನವಾದ ವಸ್ತುವಿಗೆ ಹೊಸ ಮೌಲ್ಯದ ಸೇರ್ಪಡೆಯಾಗಿದೆ, ಮಾನವನ ಧೀಮಂತಿಕೆಯ ಕುರುಹಾಗಿ ಆ ವಸ್ತು ರಂಜಿಸುತ್ತದೆ. ದೇವರು ಎಂಬ ಉತ್ಪಾದಿತ ಸರಕಿನಲ್ಲಿ ಕೌಶಲ್ಯದ ಬದಲು ವಿಸ್ಮಯವಿದೆ, ಆತಂಕವಿದೆ, ನಿಯಮಗಳ ಅಜ್ಞಾನವಿದೆ; ಅದರಲ್ಲಿ ಕಚ್ಚಾ ಸಾಮಗ್ರಿಗಳು ಯಾವುವೂ ಇಲ್ಲ, ಅದು ಕೇವಲ ನಮ್ಮ ಭ್ರಾಂತ ಮನಸ್ಸಿನ ಕಲ್ಪನೆ; ಕೆಲವು ವೇಳೆ ಘೋರ, ಕೆಲವೇಳೆ ಸುಂದರ.

ದೇವರು ಬೇರೆಯಲ್ಲ, ವಿಶ್ವ ಬೇರೆಯಲ್ಲ; ವಿಶ್ವ ಹಾಗೂ ಅದರ ಜ್ಞಾತ ಮತ್ತು ಅಜ್ಞಾತ ನಿಯಮಗಳನ್ನೆಲ್ಲಾ ಒಟ್ಟಾಗಿಸಿ 'ದೇವರು' ಎಂಬ ಹೆಸರನ್ನು ಇಟ್ಟುಕೊಳ್ಳಲಾಗಿದೆ, ಅಷ್ಟೆ, ಎಂದು ಕೆಲವರು ಸಮಜಾಯಿಷಿ ನೀಡುವುದುಂಟು. ದಿವಂಗತ ಡಾ॥ ಎಚ್. ನರಸಿಂಹಯ್ಯನವರು ಹಾಗೆ ಹೇಳುತ್ತಿದ್ದರು (ಮತ್ತು ಸಂಪೂರ್ಣ ಅವೈಚಾರಿಕವಾಗಿ ಪುನರ್ಜನ್ಮದ ಪರವಾಗಿ ವಾದಿಸುತ್ತಿದ್ದರು.) ವಿಶ್ವದ

## ಗೋಸುಂಬೆ ಕುಲ




ಆಕಳ ಎಮ್ಮಿ ಬದಲಾಗಿ
ಅವ್ವನ ಜತೆಗೆ ಅಜ್ಜ ಅಪ್ಪಗ
ಏಳ್ ಗೇಣಿನ ಬಿಳೀ.. ಕುದ್ರಿ ಕೊಟ್ಟ

ತವರ್ಮನಿಯಿಂದ ತಂದಿದ್ದರಿಂದ
ಅಪ್ಪನಕ್ಕಿಂತ ಅವ್ವಗ ಕುದ್ರೀನೇ ಹೆಚ್ಚಾತು
ಪ್ರೀತಿ ಜಾಸ್ತಿಯಾಗಿ ಮೋಹಕ್ಕೇರ್ತು

ಕುದ್ರಿ ಹೋಗಿ ಕತ್ತಿಯಾಗಿದ್ರ ಪಾಡಿತ್ತು
ಕ್ಯಾರೆ ಎನ್ನದೆ ಭಾರ ಹೊರ್ತಿತ್ತು
ಆದ್ರ ಅದು ಕೋಡಂಗಿ ಆತು

ಗುಡ್ಡದಿಂದ ಗುಡ್ಡ ಮರದಿಂದ ಮರ
ಹದ್ಮೀರಿ ಜಿಗದಾಡ್ಲಿಕ್ ಹತ್ತು
ಗುಡ್ಡ ಗಿಡ್ಡಾತು ಮರ ಮುರ್ದ ಬಿತ್ತು

ಕೋಡಂಗಿ ಧಾಡಿ ಮನಿಗೂ ಬಂತು
ಮಣ್ಣಿನ ಗ್ವಾಡಿ ತಗಡಿನ ಛತ್ತು
ಮನಿ ಕುಸ್ದ ಹೋತು

ಪಡವಣ ದಿಕ್ಕಿನ ಗಾಳಿ ಬೀಸ್ತು
ಇದ್ದ–ಬಿದ್ದ ಮನ್ಯಾಗಿನ
ಗಡ್ಗಿ–ಮಡ್ಕಿ ಸಾಮಾನೆಲ್ಲ ಸರ್ವನಾಶಾತು

ಗಡ್ಗಿ ಮಾಡ್ಸಬೇಕೆಂದ್ರ ಕುಂಬಾರಿಲ್ಲ
ಮನಿ ಕಟ್ಸಬೇಕಂದ್ರ ಕಟ್ಗಿ ಇಲ್ಲ
ಆರ್.ಸಿ.ಸಿ. ನಿಲ್ಲಿಸುವಷ್ಟು ಶಕ್ತಿ ಅವ್ವಗುಳಿದಿಲ್ಲ

ಅವ್ವಗ ತುಂಬ ಪೇಚಿಗಿಡ್ತು
ಗೌಡ ಬಂದು ಬೆದರಿಸಿ ಹೋದ
ಸ್ವಾಮಿ ಬಂದು ಮಂತ್ರ ಹಾಕ್ದ

ಮಂತ್ರ ಹಾಕಿದ ಹುಲ್ಲು ಅವ್ವ ತಿನ್ನಿಸ್ಲಿಕ್ ಹೋದ್ಲು
ಹುಲ್ಲಿನ ಜೊತೆಗೆ ಖೋಡಿ
ಅವ್ವನ ಕೈನೂ ತಿನ್ಲಿಕ್ ಸುರು ಹಚ್ಕೊಂಡ್ತು

ಹೀಂಗಾದ್ರ ಬಗಿ ಹರಿವಲ್ದೆಂದು
ಅವ್ವ ಎಡೆಯೂರ ಸಿದ್ದಗ ಮೊರೆಹೋದ್ಲು
ಅವ್ವನ ಭಕ್ತಿ ಮೆಚ್ಚಿ ಸಿದ್ಧ ಹೂ ಕೊಟ್ಟ

ಸಿದ್ಧನ ಮಹಿಮಾ ಕುದ್ರಿ ಭ್ರಮರಾತು
ಆದ್ರ ಅದು ಭ್ರಮರಾಗೆ ಉಳಿದಿಲ್ಲ
ಗೋಸುಂಬೆ ಕುಲ ಬಣ್ಣ ಬದ್ಲಾಸದೆ ಅದರ ಗುಣ

ಗುದ್ದಿ ಸಲ್ಕಿ ಮತ್ತೇನೇನೋ ಆತು
ಕಣ್ಕಿ ಗೊಬ್ರ ಸೆಗ್ಣಿ ತಿಂತು
ಸಿಮೆಂಟ್ ತಿಂತು ಕಾಂಕ್ರೀಟ್ ತಿಂತು ರೋಡ್ ತಿಂತು

ಸಮಾಧಾನ ಎಂಬ ಶಬ್ದೇ ಗೊತ್ತಿಲ್ಲ ಅದ್ಕ
ತಲಿಕೆಟ್ಟು ನೆಲ ಅಗಿಲಾಕ ಸುರುಮಾಡ್ತು
ನೆಲದಾಗ ಸಿಕ್ಕ ಉಕ್ಕ ಕಬ್ಣ ಎಲ್ಲಾನೂ ತಿಂತು

ಈಗೀಗ ನೆಲಕ್ಕ ನೆಲಾನೇ ತಿನ್ಲಿಕ್ ಹತ್ಯಾದ
ಅವ್ವಗ ತಲಿ ಚಿಟ್ ಹಿಡ್ದ ಹೋಗ್ಯಾದ
ಅಕೀಗಿ ರಸ್ತಾ ತೋಚ್ವಲ್ದ್ ಹೋಗ್ಯಾದ

ಸಡ್ಲ ಬಿಟ್ರ ಅದು ಮುಂದ ಬಕಾಸುರ್ನೂ ಆಗ್ತದ
ಹಿಂದ್ ಮುಂದ್ ನೋಡ್ದೆ ಅವ್ವಾಗೆ ತಿಂತಾದ
ಅದ್ಕ ಅವ್ವಗ ಚಿಂತಿ ದಿನದಿಂದ ದಿನಕ್ ಹೆಚ್ಚಾಗ್ಲಿಕ್ ಹತ್ಯಾದ

**ಡಾ॥ ಗುರುಲಿಂಗಪ್ಪ ಧಬಾಲೆ**
ಮುಖ್ಯಸ್ಥರು, ಕನ್ನಡ ವಿಭಾಗ
ಸಿ. ಬಿ. ಖೇಡಗಿ ಬಸವೇಶ್ವರ ಮಹಾವಿದ್ಯಾಲಯ
ಅಕ್ಕಲಕೋಟ ಜಿಲ್ಲೆ, ಸೊಲ್ಲಾಪುರ (ಮಹಾರಾಷ್ಟ್ರ)

ನಿಯಮಗಳ ಬದಲು ನೈತಿಕತೆಯೇ ದೇವರು ಎಂಬ ಅಭಿಪ್ರಾಯ ಮೂಡುವಂತೆ ಪ್ರೊ॥ ಎ. ಎನ್. ಮೂರ್ತಿರಾಯರು ಬರೆದಿದ್ದಾರೆ. ದೇವರನ್ನು ನಿರಾಕರಿಸಿದರೆ ತಮ್ಮನ್ನು ನಾಸ್ತಿಕನೆಂದೋ ಪಾಷಂಡಿಯೆಂದೋ ಕರೆದು, ಜೀವನಮೌಲ್ಯಗಳ ಬಗ್ಗೆ ಶ್ರದ್ಧೆ ಇಲ್ಲದವನೆಂದು ಹಣೆಪಟ್ಟಿ ಕಟ್ಟಲಾಗಬಹುದೆಂಬ ಭಯದಿಂದ ಇಂತಹ ವಾದಗಳು ಹುಟ್ಟಿಕೊಳ್ಳುತ್ತವೆ. ಇಲ್ಲಿ ಎರಡು ವಿಷಯಗಳಿವೆ : (ಅ) ನಿಯಮ ಮತ್ತು ನೈತಿಕತೆಗಳಿಗೆ ಸ್ಪಷ್ಟವಾದ ನಿರ್ದಿಷ್ಟ ಹೆಸರುಗಳಿರುವುದರಿಂದ ಅವನ್ನು ಹೆಸರಿಸಲು 'ದೇವರು' ಎಂಬ ಇನ್ನೊಂದು ಪದದ ಬಳಕೆಯು ಅನಗತ್ಯ; ಹಾಗೆ ಬಳಸಿದಾಗ, ಯಾವ ನಿಯಮ ಅಥವಾ ಎಂತಹ ನೈತಿಕತೆ ಎಂಬುದನ್ನು ಸೂಚಿಸಲು ಮತ್ತೆ ಮರಿ – ದೇವರುಗಳು ಬೇಕಾಗುತ್ತಾರೆ! (ಆ) ನಾಸ್ತಿಕನೆಂಬ ನಾಮಧೇಯಕ್ಕೆ ಅಂಜಬೇಕಾಗಿಲ್ಲ; ಏಕೆಂದರೆ, ಅದು ವಿವರಣಾತ್ಮಕ ಪದವೇ ಹೊರತು ಬೈಗುಳ ಪದವಲ್ಲ. 'ಬಲಶಾಲಿ' ಎಂಬ ಪದದಿಂದ ಹೇಗೆ ಭೀತರಾಗಬೇಕಾಗಿಲ್ಲವೋ ಹಾಗೆ 'ನಾಸ್ತಿಕ' ಎಂಬ ಪದದಿಂದಲೂ ಭೀತರಾಗಬೇಕಾಗಿಲ್ಲ. ನಾಸ್ತಿಕರೆಂದರೆ ಜೀವನಮೌಲ್ಯಗಳಿಗೆ ವಿಮುಖರೆಂಬ ವ್ಯಾಖ್ಯಾನವೇನಾದರೂ ಇದ್ದರೆ ಅದು ತಪ್ಪು ವ್ಯಾಖ್ಯಾನ, ದುರಹಂಕಾರದ ವ್ಯಾಖ್ಯಾನ, ಬೆದರಿಕೆ ಹಾಕುವ ವ್ಯಾಖ್ಯಾನ. ಇಂತಹ ಪೊಳ್ಳು ವ್ಯಾಖ್ಯಾನಗಳಿಗೆ ಅಂಜುವುದಾದರೆ ತೆಪ್ಪಗೆ ದೇವರ ಬಗ್ಗೆ ಮೌನ ತಾಳುವ ವ್ರತವನ್ನಾಚರಿಸುವುದು ಉತ್ತಮ.

ಬುದ್ಧನು ದೇವರು, ಆತ್ಮ, ಪುನರ್ಜನ್ಮ, ಮುಂತಾದುವುಗಳ ಬಗ್ಗೆ ಮೌನದಿಂದಿರುತ್ತಿದ್ದ; ಆದರೆ ಯಾವುವೋ ವ್ಯಾಖ್ಯಾನಗಳಿಗೆ ಹೆದರಿ ಅಲ್ಲ, ನಿಜ ಜೀವನದ ಸಂಗತಿಗಳು ವಿಪುಲವಾಗಿರುವಾಗ, ಅವುಗಳ ಮಾತನ್ನಾಡದೆ ಯಾವುದೋ ಅಮೂರ್ತ ಜಿಂಕೆಯ ಬೆನ್ನುಹತ್ತುವುದು ಅನುಚಿತವೆಂಬ ಕಾರಣಕ್ಕೆ. ಕೆಲವು ವಿಷಯಗಳನ್ನು ಕುರಿತಂತೆ ಅವನು ಮೌನಿಯಾಗಿದ್ದ. ಅವನ ಗಹನವಾದ ಮೌನಕ್ಕೂ ಬೇರೆ ಕೆಲವರ ಜಾಣತನದ ಮೌನಕ್ಕೂ ಗುಣಾತ್ಮಕ ವ್ಯತ್ಯಾಸವಿದೆ. "ದೇವರು ಎಲ್ಲೆಲ್ಲೂ ಇದ್ದಾನೆ" ಎಂಬ ವಾಕ್ಯದ ಅರ್ಥವು ಸಾಮಾನ್ಯವಾಗಿ "ಎಲ್ಲದರ ಹಿಂದೆಯೂ ಒಂದು ನಿಯಮವಿದೆ, ಅದರ ನಿಯಂತ್ರಕನಿಗೆ ದೇವರೆಂಬ ಹೆಸರಿದೆ" ಎಂದಾಗುತ್ತದೆ. ಅವನು ಯಾವುದರ ಹಿಂದೆ, ಮುಂದೆ, ಪಕ್ಕ ಅಥವಾ ಮಧ್ಯದಲ್ಲಿಯೂ ಇರಬೇಕಾಗಿಲ್ಲ. ವಿಶ್ವದ ಒಂದು ಮೂಲ ಲಕ್ಷಣವನ್ನು "ಸ್ವಭಾವ" ಎಂದು ಗುರುತಿಸಿದರೆ ಸಾಕು. ನೀರು ಹರಿಯಲು, ಬೆಂಕಿ ಸುಡಲು, ಗಾಳಿ ತಂಪಾಗಿರಲು, ಕಲ್ಲು ಗಡುಸಾಗಿರಲು, ದೇವರ ಯಜಮಾನಿಕೆ ಬೇಕಿಲ್ಲ; ಕೇವಲ ತಮ್ಮ ಸ್ವಭಾವದಿಂದ ಹಾಗಿರಲು ಅವು ಸಮರ್ಥವಾಗಿವೆ. "ಅಣು ರೇಣು ತೃಣ ಕಾಷ್ಠಗಳಲಿರುವನವನು, ಕಣುಗಳನು ತೆರೆದವರ್ಗೆ ಗೋಚರಿಸುತಿಹನು" ಎಂದು ಪರಮಾತ್ಮನ ಮಹಾತ್ಮೆಯನ್ನು ಶ್ಲಾಘಿಸುವ ಒಂದು ಪದ್ಯವಿದೆ. ಅದನ್ನು ಹೀಗೂ ಹೇಳಬಹುದು : "ಅಣು ರೇಣು ಇತ್ಯಾದಿಗಳೆಲ್ಲಾ ಇವೆ; ಅವೆಲ್ಲಾ ತಮ್ಮ ಸ್ವಭಾವದಂತೆ ನಡೆದುಕೊಳ್ಳುತ್ತವೆ ಮತ್ತು ಪ್ರಜ್ಞಾವಂತನಾದ ಮಾನವನು ಆ ಸ್ವಭಾವಗಳನ್ನೆಲ್ಲಾ ಅರಿತುಕೊಳ್ಳಬಲ್ಲ." ವಿಶ್ವವನ್ನು ಸೃಷ್ಟಿಸುವ ದೇವರಿಗೆ ಇನ್ನೊಬ್ಬ ಸೃಷ್ಟಿಕರ್ತ ಬೇಕಿಲ್ಲವೆಂದು ವಾದಿಸಿದರೆ ತರ್ಕರಹಿತವಾದ ಮಾತಿಗೆ ಪುಷ್ಟಿ ನೀಡಿದಂತಾಗುತ್ತದೆ. ಅದು ಅಸಂಗತವಾದದು, ಏಕೆಂದರೆ ಆಗ ಬೇರೆಲ್ಲ ಪ್ರಕ್ರಿಯೆಗಳಲ್ಲೂ ಕಾರ್ಯ–ಕಾರಣ ಭಾವದ ಅನಿವಾರ್ಯತೆಯನ್ನು ತಳ್ಳಿಹಾಕಬೇಕಾಗುತ್ತದೆ. ಅದು (ಅಂದರೆ, ಅಂತಹ ಯಾದೃಚ್ಛಿಕತೆಯು) ಮಾನವನ ಅನುಭವಕ್ಕೆ ವಿರೋಧವಾದುದು. ನಮ್ಮೆಲ್ಲ ವ್ಯವಹಾರಗಳಲ್ಲಿ ಎರಡು ಸತ್ಯಗಳು ಪ್ರಶ್ನಾತೀತ: (ಅ) ವಿಶ್ವದಲ್ಲಿ (ಅಥವಾ ಪ್ರಕೃತಿಯಲ್ಲಿ) ಏಕಪ್ರಕಾರತೆ ಇದೆ, ಮತ್ತು (ಆ) ಕಾರ್ಯ–ಕಾರಣ ಭಾವವು ಯಾರ ಇಚ್ಛೆಗೂ ಅಧೀನವಲ್ಲ. ಈ ಎರಡೂ ಸೂತ್ರಗಳು ವಿಜ್ಞಾನದ ಅಡಿಗಲ್ಲುಗಳು. ಎಂತಹ ಸರ್ವಶಕ್ತ ದೇವರಿಗೂ ಮೇಲಿಂದ ಬೀಳುವ ಕಲ್ಲನ್ನು ತಡೆದು ನಿಲ್ಲಿಸಲಾಗುವುದಿಲ್ಲ; ಗುರುತ್ವಾಕರ್ಷಣೆಯ ನಿಯಮವನ್ನು ಉಲ್ಲಂಘಿಸಲಾಗದು (ಅಥವಾ, ಉಸಿರಾಡದೆಯೇ ಜೀವಂತವಾಗಿರುವ ಸ್ವಾತಂತ್ರ್ಯ ಮಾನವನಿಗಿಲ್ಲ). ವಿಶ್ವಾಮಿತ್ರನು ತ್ರಿಶಂಕುವನ್ನು ಸ್ವರ್ಗದಿಂದ ಬೀಳುತ್ತಿದ್ದಾಗ ಮಧ್ಯದಲ್ಲೇ ತಡೆದು ನಿಲ್ಲಿಸಿ, ಅವನಿಗೆ ಅಲ್ಲೇ ಒಂದು ಪ್ರತ್ಯೇಕ ಸ್ವರ್ಗ ನಿರ್ಮಿಸಿಕೊಟ್ಟನೆಂಬ ಕತೆಯನ್ನು ಕತೆಯಾಗಿ ಸವಿಯಬೇಕು, ವಾಸ್ತವಿಕ ಘಟನೆಯೆಂದಲ್ಲ. ದೇವರು ಸಹ "ಸ್ವಭಾವ" ಎಂಬುದನ್ನು ಮೀರಿ ವರ್ತಿಸಲಾರ. ಋಗ್ವೇದದ ಕಾಲದಷ್ಟು ಹಿಂದೆಯೇ ಗ್ರಹಿಸಲಾಗಿದ್ದ ಈ ತತ್ತ್ವವನ್ನು ಮುಚ್ಚಿಡುವ ಅಥವಾ ಯಾವುದೋ ಕಾರಣಕ್ಕಾಗಿ ತಿರುಚುವ ಯತ್ನ ಹೇಯವಾದ್ದು. ಋಗ್ವೇದದಲ್ಲಿ ಈ ಮಹಾನ್ ಪರಿಕಲ್ಪನೆಗೆ "ಋತ" ಎಂಬ ಹೆಸರಿದೆ. "ಋತಂ ನಾತ್ಯೇತಿ ಕಿಂಚನ" (ಋತವನ್ನು ಯಾವುದೂ ಮೀರಿ ನಿಲ್ಲುವುದಿಲ್ಲ) ಎಂಬುದು ಅಂದಿಗೂ ಸತ್ಯ ಮತ್ತು ಇಂದಿಗೂ ಸತ್ಯ. "ಋತ"ವು ಋತವಾಗಿರುವುದಕ್ಕೆ ದೇವರ ಮಧ್ಯಪ್ರವೇಶ ಸರ್ವಥಾ ವರ್ಜ್ಯ.

"ದೇವರು" ಎಂಬುದರ ಚರ್ಚೆಯು ತತ್ತ್ವಶಾಸ್ತ್ರದ ನೆಲೆಯಲ್ಲಿ ನಡೆಯುತ್ತದೋ ಮತಧರ್ಮದ ನೆಲೆಯಲ್ಲಿ ನಡೆಯುತ್ತದೋ ಎನ್ನುವುದು ಇನ್ನೊಂದು ಶ್ರೀಮಂತ ವಿಚಾರ. ರಾಮಾನುಜ, ಮಧ್ವ, ಶಂಕರ, ಮುಂತಾದವರನ್ನು ಮತಧರ್ಮ ಪ್ರವರ್ತಕರೆನ್ನಬೇಕೇ ವಿನಾ ತತ್ತ್ವಶಾಸ್ತ್ರಕಾರರು ಎನ್ನಲಾಗದು. ದಾರ್ಶನಿಕ ನೆಲೆಯಲ್ಲಿ ನ್ಯಾಯ, ವೈಶೇಷಿಕ, ಸಾಂಖ್ಯ, ಲೋಕಾಯತ ಮತ್ತು ಆದಿಮ ಬೌದ್ಧ ದರ್ಶನಗಳು ಗಟ್ಟಿಯಾಗಿ ನಿಲ್ಲುವಂತೆ ಬೇರೆಯವು (ಯೋಗ, ಮೀಮಾಂಸಾ, ವೇದಾಂತ, ಜೈನ, ಇತ್ಯಾದಿ) ನಿಲ್ಲಲಾರವು. ನ್ಯಾಯದರ್ಶನದ (ಅಥವಾ ಉದಯನಾಚಾರ್ಯನ) ದೇವರನ್ನು ತುಷ್ಟೀಕರಿಸಿ ಏನನ್ನೂ ಪಡೆಯಲಾಗುವುದಿಲ್ಲ ಮತ್ತು ಪಡೆಯಬೇಕೆಂಬ ಆಶಯವೂ ಇಲ್ಲ. ಅಲ್ಲಿ "ಅಪವರ್ಗ" ಪಡೆಯಲು ಪ್ರಮಾಣ ಮತ್ತು ಪ್ರಮೇಯಗಳ ಜ್ಞಾನ ಅಗತ್ಯವೇ ವಿನಾ ಭಕ್ತಿ, ಇತ್ಯಾದಿಗಳ ಅಗತ್ಯವಿಲ್ಲ: ಸಾಂಖ್ಯ ಮತ್ತು ವೈಶೇಷಿಕರಿಗೆ ಹಾಗೂ ಲೋಕಾಯತ ಮತ್ತು ಬೌದ್ಧ ದರ್ಶನಗಳಿಗೆ ದೇವರ ಗೊಡವೆಯೇ ಇಲ್ಲ. ಮತಧರ್ಮಗಳು ಕಂಡುಕೊಂಡಿರುವ ದೇವರುಗಳು ಹೆಚ್ಚೆಂದರೆ ದಳ್ಳಾಳಿ ದೇವರುಗಳು, ಎರಡನೆಯ ದರ್ಜೆ ದೇವರುಗಳು.

"ನಾನು ನಿನ್ನ ಗಲ್ಲಾಪೆಟ್ಟಿಗೆಗೆ ಇಷ್ಟು ಹಣ ಹಾಕುತ್ತೇನೆ, ನೀನು ನನ್ನನ್ನು ಐಶ್ವರ್ಯವಂತನನ್ನಾಗಿಸು" ಎಂಬ ಸಂಬಂಧ ದೇವರಿಗೆ ಗೌರವ ತರುವ ವಿಷಯವಲ್ಲ. ಇರುವ ಸಂಪತ್ತನ್ನು ದೇವರಿಗೆ ಕೊಟ್ಟು, ಆಮೇಲೆ "ನನಗೆ ಸಂಪತ್ತು ಕೊಡು" ಎಂದೇಕೆ ಕೇಳಬೇಕು? ಇರುವುದನ್ನು ತಿರುಪತಿಯ ಹುಂಡಿಗೆ ಹಾಕದೆ ಬ್ಯಾಂಕಿನ ಖಾತೆಯಲ್ಲಿಟ್ಟರೆ ಆಗದೆ? ಸರ್ವಸಂಪನ್ನನೆಂದು ವೈಭವೀಕರಿಸಲಾಗುವ ತ್ರಿನಾಮಧಾರಿ ವೆಂಕಟೇಶ್ವರನಿಗೆ ಭಕ್ತನ ಸಂಪತ್ತಿನಿಂದ ಏನಾಗಬೇಕು? "ಅದೆಲ್ಲಾ ನಿಗೂಢ, ಪಾಮರರಿಗೆ ತಿಳಿಯುವುದಿಲ್ಲ" ಎಂದು ದೇವರನ್ನು ಆರಾಧಿಸುವಂತೆ ನಟಿಸುವ ಸ್ವಾಮಿಗಳು ಉದ್ಗರಿಸಬಹುದು. ಅದರಿಂದ ದೇವರ ಘನತೆ ಹೆಚ್ಚುವುದಿಲ್ಲ.

ಒಟ್ಟಿನಲ್ಲಿ ಹೇಳುವುದಾದರೆ, ಮತಧರ್ಮದ ದೇವರು ಯಾವ ತರ್ಕ ಮತ್ತು ಘನತೆಗೂ ಬಾಹಿರನಾದವನು (ಅಥವಾ ಬಾಹಿರಳಾದವಳು) ಮತ್ತು ತತ್ತ್ವಶಾಸ್ತ್ರದ ದೇವರು ಅಸ್ತಿತ್ವದಲ್ಲೇ ಇಲ್ಲ. ತಾತ್ವಿಕ ಚಿಂತನೆಯು ಶ್ರೇಷ್ಠವೋ, ಬುಡುಬುಡಿಕೆ ಮಂತ್ರ–ಪೂಜೆ–ಪ್ರಸಾದ ಶ್ರೇಷ್ಠವೋ ಎಂಬುದನ್ನು ವಿಸ್ತಾರವಾಗಿ ಚರ್ಚಿಸಬೇಕಾಗಿಲ್ಲ. ಅದು ಸ್ವಯಂವೇದ್ಯ.

ಬುಡುಬುಡಿಕೆ ಸಂಪ್ರದಾಯದವರು ದೇವರ ಏಕಸ್ವಾಮ್ಯ ಹೊಂದಿದ್ದಾರೆ. ಅರಳುಮಲ್ಲಿಗೆ ಪಾರ್ಥಸಾರಥಿ ಎಂಬ ಬಹು–ಬಿರುದಾಂಕಿತರು ವಿಷ್ಣುಸಹಸ್ರನಾಮದ ಯಾವ ಶ್ಲೋಕ ಹೇಳಿಕೊಂಡರೆ ಏನೇನು ಸಿಗುತ್ತದೆಯೆಂದು ಬಹಳ ನಿಖರವಾಗಿ ತಿಳಿಸುವ, ಕೆಲಸಕ್ಕೆ ಬಾರದ, ಪುಸ್ತಕವೊಂದನ್ನು ಪ್ರಕಟಿಸಿದ್ದಾರೆ. ಗಂಡ–ಹೆಂಡಿರ ಜಗಳ, ವಿದ್ಯಾರ್ಥಿಯ ಪರೀಕ್ಷೆ, ಸಂತಾನದ ಅಪೇಕ್ಷೆ (ಮತ್ತು ನಿರಪೇಕ್ಷೆ?), ವಾಹನದ ಖರೀದಿ, ಮನೆಯ ಮಾರಾಟ, ಸಚಿವ ಪದವಿಯ ಪ್ರಾಪ್ತಿ, ಹೀಗೆ ಯಾವುದಕ್ಕೆ ಬೇಕಾದರೂ ವಿಷ್ಣುಸಹಸ್ರನಾಮದ ಯಾವುದೋ ಒಂದು ಪದ್ಯ ಪರಿಹಾರ ನೀಡುತ್ತದೆಂದು ಹೇಳಿರುವ ಶ್ರೀಯುತರು ಮೂಲತಃ ವಾಣಿಜ್ಯಶಾಸ್ತ್ರದ ಪ್ರಾಧ್ಯಾಪಕರು ಮತ್ತು ಮ್ಯಾನೇಜ್‌ಮೆಂಟ್ ಗುರು. ಯಾರಾದರೂ ನಿಮ್ಮಲ್ಲಿ ಅನುರಕ್ತರಾಗಬೇಕೆಂಬ ಆಶಯ ನಿಮ್ಮದಾದರೆ ವಿಷ್ಣುಸಹಸ್ರನಾಮದ ಯಾವ ಪದ್ಯವನ್ನು ಗುನುಗಿಕೊಳ್ಳಬೇಕೆಂದು ಆಚಾರ್ಯ ಪಾರ್ಥಸಾರಥಿಯವರನ್ನೇ ಕೇಳಿ ನೋಡಿ! ದೇವರು ದೊಡ್ಡವನು, ಸರ್ವಾಂತರ್ಯಾಮಿ, ಸರ್ವಶಕ್ತ, ಸರ್ವಜ್ಞ; ಆದರೆ ಅವನಿಗಿಂತಲೂ ದೊಡ್ಡವರು, ಎಲ್ಲೆಡೆ ಪಸರಿಸಿರುವವರು, ಅವನನ್ನು ಹಿಡಿತದಲ್ಲುಳ್ಳವರು, ಎಲ್ಲ ಜ್ಞಾನಭಂಡಾರದ ಕೀಲಿ ಇರಿಸಿಕೊಂಡಿರುವವರು, ಎಂದರೆ ದೇವರ ಏಜೆಂಟರು. ಏಜೆಂಟರು ಬಿಕರಿ ಮಾಡುವ ಪದಾರ್ಥಗಳ ಗುಣಮಟ್ಟವನ್ನು ಬಳಕೆದಾರರು ನಿರ್ಧರಿಸಬೇಕಾದ ವೇಳೆ ಬಂದಿದೆ ಎನ್ನೋಣವೆ?

**ಅರ್ಯಮನ್**
ನಂ. ೧೪, ಪೈಪ್‌ಲೈನ್ ರಸ್ತೆ, ವೈಯಾಲಿಕಾವಲ್, ಬೆಂಗಳೂರು – ೫೬೦ ೦೦೩

# ಚಿಕ್ಕಪಡಸಲಗಿ ಬ್ಯಾರೇಜ್ ನೀರಾವರಿ ಯೋಜನೆ ಸಮುದಾಯ ಆಧಾರಿತ ಭಗೀರಥ ಪ್ರಯತ್ನಕ್ಕೆ ಸಾಕ್ಷಿ!

ಡಾ॥ ರಾಜೇಂದ್ರ ಪೋದ್ದಾರ

"ಚಿಕ್ಕದಲ್ಲೋ ತಮ್ಮಾ, ಈ ಪಡಸಲಗಿ ನಾಡಿಗೆ ದೊಡ್ಡದು". ಕರ್ನಾಟಕದ ಕೃಷ್ಣ ಕಣಿವೆಯಲ್ಲಿ ಮಾರ್ದನಿಸಿದ ಈ ಕವಿವಾಣಿಗೆ ಸಾಕ್ಷಿಯಾದಂತೆ ಚಿಕ್ಕಪಡಸಲಗಿ ಬ್ಯಾರೇಜ್ ವಿಶ್ವಖ್ಯಾತಿಯನ್ನು ಪಡೆದ ರೋಚಕ ಕಥೆ.

ಜಲವು ಜೀವನದ ಜೀವಾಳವಾಗಿದ್ದು, ತನ್ನ ವಿವಿಧ ರೂಪಗಳ ಮೂಲಕ ಜಗತ್ತಿನ ಜೀವರಾಶಿಯನ್ನು ಸಲಹುವ ಸಂಜೀವಿನಿಯಾಗಿದೆ. ವಿಶೇಷವಾಗಿ ಕೃಷಿಯಲ್ಲಿ ನೀರಾವರಿ ಹಾಗೂ ಇತರೆ ಉಪಯೋಗಗಳ ಮೂಲಕ ಮಾನವ ಸಮಾಜ ತನ್ನ ಬದುಕಿನ ಭದ್ರ ಬುನಾದಿಯನ್ನು ನಿರ್ಮಿಸಲು ಸಾಧ್ಯವಾಗಿದೆ. ನೀರಾವರಿ ಮೂಲಕ ಕೃಷಿಯಲ್ಲಿ ಆಹಾರ ಹಾಗೂ ಇನ್ನಿತರ ಉತ್ಪನ್ನಗಳನ್ನು ಉತ್ಪಾದಿಸಿ ಆರ್ಥಿಕ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗಿದೆ. ಜಗತ್ತಿನಾದ್ಯಂತ ರಾಷ್ಟ್ರಗಳು ಸಾವಿರಾರು ವರ್ಷಗಳಿಂದ ನೀರಾವರಿ ವ್ಯವಸ್ಥೆಯನ್ನು ನಿರ್ಮಿಸಿವೆ. ಇದರಿಂದಾಗಿ ಬೆಳೆಯುತ್ತಿರುವ ಜನಸಂಖ್ಯೆ ಮತ್ತು ಅದಕ್ಕೆ ಅನುಗುಣವಾಗಿ ವೃದ್ಧಿಸುತ್ತಿರುವ ಬೇಡಿಕೆಗಳನ್ನು ಪೂರೈಸಲು ಸಾಧ್ಯವಾಗಿದೆ. ಜಾಗತಿಕ ಬೆಳವಣಿಗೆಗಳೊಂದಿಗೆ ಹೆಜ್ಜೆ ಇಟ್ಟಿರುವ ಭಾರತ ದೇಶ ಕೂಡ ನೀರಾವರಿ ಅಭಿವೃದ್ಧಿಗಾಗಿ ಭಗೀರಥ ಪ್ರಯತ್ನಗಳನ್ನು ಮಾಡಿದೆ. ಸ್ವಾತಂತ್ರ್ಯ ಪೂರ್ವದಿಂದ ಹಿಡಿದು ಇಂದಿನವರೆಗೆ ಜಗತ್ತೇ ಬೆರಗಾಗುವಂತಹ ನೀರಾವರಿ ಯೋಜನೆಗಳನ್ನು ನಿರ್ಮಿಸಲಾಗಿದ್ದು, ಆಹಾರ, ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಭದ್ರತೆಯನ್ನು ಸಾಧಿಸಲು ಸಾಧ್ಯವಾಗಿದೆ. ವಿಶೇಷವಾಗಿ ಸ್ವಾತಂತ್ರ್ಯ ನಂತರದ ನೀರಾವರಿ ಪರಿಕಲ್ಪನೆಗಳು, ವಿನ್ಯಾಸಗಳು, ಬಂಡವಾಳ ಹೂಡಿಕೆ, ಬೃಹತ್ ವಿವಿಧೋದ್ದೇಶಗಳ ನದಿ ಕಣಿವೆ ಯೋಜನೆಗಳು ಸ್ತುತ್ಯರ್ಹವಾಗಿವೆ.

ಆದರೆ, ಈ ಬೃಹತ್ ಯೋಜನೆಗಳು ನಿರ್ದಿಷ್ಟ ಗುರಿಗಳನ್ನು ಸಾಧಿಸುವಲ್ಲಿ ಪೂರಕವಾಗಿದ್ದರೂ, ಅನೇಕ ನ್ಯೂನತೆಗಳಿಂದ ಬಳಲುತ್ತಿವೆ. ಅವುಗಳಲ್ಲಿ ಪ್ರಮುಖವಾಗಿ ಅರಣ್ಯ, ಪರಿಸರ ಮತ್ತು ಜೀವ ವೈವಿಧ್ಯತೆಗಳ ನಾಶ, ಬೃಹತ್ ಪ್ರಮಾಣದ ಮರುವಸತಿ ಸವಾಲುಗಳು, ದಿನದಿಂದ ದಿನಕ್ಕೆ ವೃದ್ಧಿಸುವ ನಿರ್ಮಾಣ ವೆಚ್ಚ, ಆಡಳಿತಾತ್ಮಕ ತೊಂದರೆಗಳು ಹಾಗೂ ಬಂಡವಾಳದ ಕೊರತೆಯಿಂದ ಉಂಟಾಗುವ ವಿಳಂಬ, ದೀರ್ಘ ನಿರ್ಮಾಣ ಅವಧಿ, ಅಂತರರಾಷ್ಟ್ರೀಯ ಹಾಗೂ ಅಂತರ ರಾಜ್ಯ ಕಲಹಗಳು, ಭೂಕಂಪಗಳ ಭಯ, ಸರೋವರಗಳಲ್ಲಿ ಹೂಳು ತುಂಬುವದು ಮುಂತಾದವುಗಳಾಗಿವೆ. ಈ ತೆರನಾದ ಇನ್ನೂ ಅನೇಕ ಸವಾಲುಗಳು ಜಾಗತಿಕ ಹಾಗೂ ರಾಷ್ಟ್ರ ಮಟ್ಟದಲ್ಲಿ ನೀರಾವರಿ ತಜ್ಞರಲ್ಲಿ ವಿವಿಧೋದ್ದೇಶಗಳ ಬೃಹತ್ ಯೋಜನೆಗಳ ಫಲದಾಯಕತೆ ಬಗ್ಗೆ ಜಿಜ್ಞಾಸೆಯನ್ನು ಮೂಡಿಸಿವೆ. ದೀರ್ಘಕಾಲೀನ ಸಮೀಕ್ಷೆಗಳು ಹಾಗೂ ವರದಿಗಳ ಆಧಾರದ ಮೇಲೆ ಇತ್ತೀಚಿನ ದಶಕಗಳಲ್ಲಿ ಇಂತಹ ಯೋಜನೆಗಳ ನಿರ್ಮಾಣದ ಬಗ್ಗೆ ಮರುಚಿಂತನೆ ಪ್ರಾರಂಭವಾಗಿದೆ.

ಈ ಚಿಂತನೆಗಳ ಫಲವಾಗಿ ಜಗತ್ತಿನಾದ್ಯಂತ ಸೂಕ್ತ ತಂತ್ರಜ್ಞಾನವನ್ನು ಅಳವಡಿಸಿ ಕಡಿಮೆ ವೆಚ್ಚದಲ್ಲಿ ಸುಲಭವಾಗಿ ನಿರ್ಮಿಸಲಾಗುವ, ಆಡಳಿತಾತ್ಮಕ ಹಾಗೂ ನಿರ್ವಹಣಾತ್ಮಕವಾಗಿ ವಿಕೇಂದ್ರಿತವಾದ, ಸ್ಥಳೀಯ ಅನುಕೂಲಗಳಿಗನು ಗುಣವಾಗಿ ಹಾಗೂ ಜನಸಮುದಾಯಗಳಿಂದ ನಿರ್ಮಾಣಗೊಂಡ, "ಸಣ್ಣ ಪ್ರಮಾಣದ ಸುಸ್ಥಿರ ಯೋಜನೆಗಳಿಗೆ" ಪ್ರಾಶಸ್ತ್ಯ ನೀಡಲಾಗುತ್ತಿದೆ. ಭಾರತ, ಪಾಕಿಸ್ತಾನ, ಶ್ರೀಲಂಕಾ, ಫಿಲಿಫೈನ್ಸ್, ನೇಪಾಳ, ಇಂಡೋನೇಶಿಯಾ ಹಾಗೂ ಆಫ್ರಿಕಾ ಖಂಡದ ಗಿನಿ, ಈಜಿಪ್ಟ್, ಮುಂತಾದ ರಾಷ್ಟ್ರಗಳಲ್ಲಿ ಸಣ್ಣ ಪ್ರಮಾಣದ ಸುಸ್ಥಿರ ನೀರಾವರಿ ಯೋಜನೆಗಳನ್ನು ಶತ-ಶತಮಾನಗಳಿಂದಲೂ ನಿರ್ಮಿಸಲಾಗಿದೆ. ನಮ್ಮ ದೇಶದಲ್ಲೂ ಕೂಡ ಹಿಂದಿನಿಂದಲೂ ಈ ರೀತಿಯ ಉತ್ಕೃಷ್ಟ ಮಟ್ಟದ ನೀರಾವರಿ ಯೋಜನೆಗಳನ್ನು ಜನಸಮುದಾಯಗಳು ನಿರ್ಮಿಸುತ್ತಾ ಬಂದಿರುವುದಕ್ಕೆ ಅನೇಕ ನಿದರ್ಶನಗಳಿವೆ. ಈ ಆಶಯಗಳಿಗೆ ಕಳಶಪ್ರಾಯವಾಗಿ ಇತ್ತೀಚೆಗೆ ಕರ್ನಾಟಕದಲ್ಲಿ ಇಂಥದೊಂದು ಪ್ರಯತ್ನ ನಡೆಯಿತು. ೨೫ ವರ್ಷಗಳ ಹಿಂದೆ ನಿರ್ಮಾಣಗೊಂಡು, ಇದೀಗ ತನ್ನ "ಸುವರ್ಣ ಮಹೋತ್ಸವ"ವನ್ನು ಆಚರಿಸಿಕೊಳ್ಳುತ್ತಿರುವ ಬಾಗಲಕೋಟೆ ಜಿಲ್ಲೆಯ



ಚಿಕ್ಕಪಡಸಲಗಿ ಬ್ಯಾರೇಜಿನ ಒಂದು ವಿಹಂಗಮ ನೋಟ




ಸ್ಥಳೀಯ ಸಮುದಾಯದವರನ್ನು ಉದ್ದೇಶಿಸಿ ಮಾತನಾಡುತ್ತಿರುವ ರೈತ ನಾಯಕರು

ಜಮಖಂಡಿ ತಾಲೂಕಿನ ಚಿಕ್ಕಪಡಸಲಗಿ ಎಂಬ ಪುಟ್ಟ ಗ್ರಾಮದಲ್ಲಿ ಕೃಷ್ಣಾ ನದಿಗೆ ಅಡ್ಡಲಾಗಿ ಕಟ್ಟಿರುವ "ಚಿಕ್ಕಪಡಸಲಗಿ ಬ್ಯಾರೇಜ್" (೧೯೮೯-೨೦೧೫) ಅದು.

ಚಿಕ್ಕಪಡಸಲಗಿ ಬ್ಯಾರೇಜ್ ನಿರ್ಮಾಣ ದೇಶದಲ್ಲಿ ನೀರಾವರಿ ಕ್ಷೇತ್ರದಲ್ಲಿ ಇತಿಹಾಸವನ್ನೇ ಸೃಷ್ಟಿಸಿದೆ. ಈ ಕಾಲಘಟ್ಟದ ಕೆಲವು ಸಂಗತಿಗಳನ್ನು ಗಮನಿಸುವುದು ಸೂಕ್ತ. ಅವಿಭಜಿತ ವಿಜಯಪುರ ಜಿಲ್ಲೆ (೧೯೭೦ರ ಪೂರ್ವ) ಶತಮಾನಗಳಿಂದ ಬರಗಾಲದಿಂದ ಬಳಲುತ್ತಿದ್ದು, "ಬರಗಾಲ ಜಿಲ್ಲೆ" ಎಂಬ ಹಣೆಪಟ್ಟಿಯನ್ನು ಹೊಂದಿರುವುದು ಸರ್ವವಿದಿತ. ಜಿಲ್ಲೆಯಲ್ಲಿ ಸರಾಸರಿ ವಾರ್ಷಿಕ ಮಳೆ ಪ್ರಮಾಣ ಅಲ್ಪ ಮತ್ತು ಅಕಾಲಿಕವಾಗಿದ್ದು, ಜಿಲ್ಲೆಯ ಜನತೆ ಹಾಗೂ ರೈತಾಪಿ ಅನೇಕ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದ್ದುಂಟು. ವಿಪರ್ಯಾಸವೆಂದರೆ ಐದು ನದಿಗಳನ್ನು ಹೊಂದಿದ್ದ ಅವಿಭಜಿತ ವಿಜಯಪುರ ಜಿಲ್ಲೆಯು "ಕರ್ನಾಟಕದ ಪಂಜಾಬ್" ಎಂದೇ ಕರೆಯಲ್ಪಡುತ್ತಿದ್ದರೂ ದುರ್ದೈವವಶಾತ್ ಐತಿಹಾಸಿಕ, ರಾಜಕೀಯ ಹಾಗೂ ಆರ್ಥಿಕ ಕಾರಣಗಳಿಂದಾಗಿ 'ಹಿಂದುಳಿದ ಜಿಲ್ಲೆ' ಎಂದೇ ಕುಖ್ಯಾತಿ ಪಡೆದಿತ್ತು. ಜಿಲ್ಲೆಯ ಜನತೆ ದಶಕಗಳಿಂದ ನಿರಂತರ ಹೋರಾಟ ನಡೆಸಿದರೂ ಸಮಗ್ರ ನೀರಾವರಿ ಕೈಗೂಡಲೇ ಇಲ್ಲ. ಮಳೆ ಅಭಾವ, ಬರಗಾಲ, ಆರ್ಥಿಕ ಅಭದ್ರತೆ, ಹಸಿವು, ನಿರುದ್ಯೋಗಗಳಂತಹ ಜ್ವಲಂತ ಸಮಸ್ಯೆಗಳಿಂದ ಜನಜೀವನ ತತ್ತರಿಸಿಹೋಗಿತ್ತು. ದಶಕಗಳಿಂದ ಗೋವಾ, ಮಹಾರಾಷ್ಟ್ರಗಳಂತಹ ರಾಜ್ಯಗಳಿಗೆ ಹೊಟ್ಟೆ ಹೊರೆಯಲು ಜನ ಗುಳೆ ಹೋಗುವುದು ಸರ್ವೇಸಾಮಾನ್ಯವಾಗಿತ್ತು.

ದಕ್ಷಿಣ ಭಾರತದ ಅತೀ ದೊಡ್ಡ ನದಿಗಳಲ್ಲೊಂದಾದ ಕೃಷ್ಣಾ ನದಿಯ ಇಕ್ಕೆಲಗಳಲ್ಲಿಯೂ ಇಂತಹ ದಾರುಣ ಪರಿಸ್ಥಿತಿ ಇತ್ತು. ಅತ್ತ ಬರಗಾಲದ ಛಾಯೆ, ಇತ್ತ ಬೇಸಿಗೆಯಲ್ಲಿ ಬರಿದಾದ ಕೃಷ್ಣೆಯ ಒಡಲನ್ನು ನೋಡುತ್ತ ಹತಾಶೆಯಿಂದ ತಲೆ ಮೇಲೆ ಕೈ ಹೊತ್ತ ರೈತ ತನ್ನ ಹಣೆಬರಹವನ್ನು ಶಪಿಸುವ ಕಾಲವೊಂದಿತ್ತು. ಬರಗಾಲದಲ್ಲಿ ಹರದಾರಿ ನಡೆದು ಕೃಷ್ಣೆಯ ಗರ್ಭ ಬಗೆದು ಮಡಿಕೆ ನೀರನ್ನು ಹೊತ್ತು ತರುವ ಮಹಿಳೆಯರ ದಾರುಣ ಪರಿಸ್ಥಿತಿ ಕರುಣಾಜನಕವಾಗಿತ್ತು. ಈ ದುಸ್ಥಿತಿಯ ಅರಿವಿದ್ದ ಸ್ಥಳೀಯರ ಬೇಡಿಕೆಗೆ ಸ್ಪಂದಿಸಿದ ರಾಜ್ಯ ಸರಕಾರ ೧೯೭೬ರಲ್ಲಿ ಜಮಖಂಡಿ ತಾಲೂಕಿನ ಚಿಕ್ಕ ಪಡಸಲಗಿ ಹತ್ತಿರ ಕೃಷ್ಣಾ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣಕ್ಕೆ ಒಪ್ಪಿಗೆ ನೀಡಿ ೩೫ ಲಕ್ಷ ರೂಪಾಯಿಗಳ ಅಂದಾಜು ಪಟ್ಟಿಯನ್ನು ತಯಾರಿಸಿದ್ದರೂ, ತಾಂತ್ರಿಕ ಸಮಿತಿಯ ಪ್ರತಿಕೂಲ ವರದಿಯಿಂದಾಗಿ ಯೋಜನೆ ಪ್ರಾರಂಭವಾಗಲಿಲ್ಲ. ೧೯೮೬ರಲ್ಲಿ ಸರಕಾರ ಯೋಜನೆಯ ಪರಿಷ್ಕೃತ ಅಂದಾಜು ಪಟ್ಟಿಯನ್ನು ತಯಾರಿಸಿದರೂ, ಕಾಮಗಾರಿ ಮಾತ್ರ ಪ್ರಾರಂಭವಾಗಲಿಲ್ಲ. ಸರಕಾರದ ಈ ನಕಾರಾತ್ಮಕ ಧೋರಣೆ ಸ್ಥಳೀಯ ಜನತೆಯನ್ನು ಚಿಂತನೆಗೀಡುಮಾಡಿತ್ತು.

ಈ ಕಾಲಘಟ್ಟದಲ್ಲಿ "ಅವಶ್ಯಕತೆಯೇ ಆವಿಷ್ಕಾರಗಳ ತಾಯಿ" ಎಂಬಂತೆ ಜನತೆಯ ಆಶೋತ್ತರಗಳಿಗೆ ಸ್ಪಂದಿಸಿದ ಕೆಲವು ಪ್ರಜ್ಞಾವಂತ, ಜನಪರ ಕಾರ್ಯಕರ್ತರು ಜನ ಸಮುದಾಯವನ್ನು ಸಂಘಟಿಸುವಲ್ಲಿ ನಿರತರಾಗಿದ್ದರು. ಈ ಪ್ರಯತ್ನದ ಫಲವಾಗಿ ಜನ್ಮ ತಾಳಿದ್ದು – "ಕೃಷ್ಣಾ ತೀರ ರೈತರ ಸಂಘ". ಸಮುದಾಯ ಸಂಘಟನೆಯ ಮುಂಚೂಣಿಯಲ್ಲಿದ್ದ "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಎಂಬಂತಿರುವ ಯುವ ನಾಯಕ ಶ್ರೀ ಸಿದ್ದು ನ್ಯಾಮಗೌಡರ ನೇತೃತ್ವದಲ್ಲಿ ೧೯೮೭ರ ಅಕ್ಟೋಬರ್ ೨ (ಗಾಂಧಿ ಜಯಂತಿ)ರಂದು ಸರಕಾರದ ನಿರ್ಲಕ್ಷ್ಯ, ಸ್ಥಳೀಯ ರಾಜಕೀಯ ತಿಕ್ಕಾಟದ ಮಧ್ಯದಲ್ಲಿಯೇ ಚಿಕ್ಕಪಡಸಲಗಿ ಗ್ರಾಮದ ಪಕ್ಕದಲ್ಲಿ ಕೃಷ್ಣಾ ನದಿಗೆ ಬ್ಯಾರೇಜ್ ನಿರ್ಮಿಸುವ ಕಾರ್ಯ ಪ್ರಾರಂಭವಾಯಿತು. ರೈತರು, ಕಾರ್ಮಿಕರು, ಸಾರ್ವಜನಿಕರು, ಮುಖಂಡರು ಹೆಣ್ಣು-ಗಂಡು, ಮೇಲು-ಕೀಳೆಂಬ ಭಾವನೆಗಳನ್ನು ಮೀರಿ ಶ್ರಮದಾನ ಮಾಡಿ, ಜನ, ಧನ, ಸಾಮಗ್ರಿ, ಸಂಪನ್ಮೂಲಗಳನ್ನು ಕ್ರೋಢೀಕರಿಸಿ, ಕೇವಲ ಎರಡೇ ವರ್ಷಗಳಲ್ಲಿ ನಿರ್ಮಾಣ ಕಾರ್ಯವನ್ನು ಪೂರೈಸಿದರು. ಬ್ಯಾರೇಜ್ ನಿರ್ಮಾಣಕ್ಕೆ ಬೇಕಾದ ಸಂಪನ್ಮೂಲ ಸಂಗ್ರಹಣೆ ಒಂದು ವಿಶಿಷ್ಟ ಪ್ರಯತ್ನ – ಒಂದು ಭಗೀರಥ ಪ್ರಯತ್ನವಾಗಿದೆ. ಸರಕಾರದ ಬೊಕ್ಕಸದಿಂದ ಯಾವುದೇ ಸಹಾಯವಿಲ್ಲದಾಗ ಸರ್ಕಾರೇತರ ಮೂಲಗಳಿಂದ ಸಂಪನ್ಮೂಲ ಸಂಗ್ರಹಿಸಿ, ಸಾಮಾನ್ಯ ಜನತೆಯ ಶ್ರಮದಾನದ ಮೂಲಕ ಅದ್ಭುತ ನೀರಾವರಿ ವ್ಯವಸ್ಥೆಯನ್ನು ನಿರ್ಮಿಸಿದ್ದು ಒಂದು ಇತಿಹಾಸವೇ ಸರಿ.

ಚಿಕ್ಕಪಡಸಲಗಿ ಬ್ಯಾರೇಜ್ ತಾಂತ್ರಿಕವಾಗಿ ಕೃಷ್ಣಾ ನದಿಗೆ ಅಡ್ಡಲಾಗಿ ಕಟ್ಟಲಾದ ಒಂದು ಚಿಕ್ಕ ಅಣೆಕಟ್ಟು. ಬ್ಯಾರೇಜಿನ ಒಟ್ಟು ಉದ್ದ ೪೩೦ ಮೀಟರ್, ಎತ್ತರ ೮ ಮೀಟರ್ ಇದೆ. ಬ್ಯಾರೇಜಿನಿಂದ ನಿರ್ಮಾಣಗೊಂಡ ಸರೋವರದ ಅಗಲ ೦.೪೫ ಕಿ.ಮೀ. ಹಾಗೂ ಉದ್ದ ೪೫ ಕಿ.ಮೀ. ೧೯೯೦ರಲ್ಲಿ ಬ್ಯಾರೇಜಿನಲ್ಲಿ ಒಟ್ಟು ೨.೮ ಟಿಎಂಸಿ ನೀರನ್ನು ಸಂಗ್ರಹಿಸಲಾಗುತ್ತಿತ್ತು. ಇಂದು ಇನ್ನೊಂದು ವಿಶೇಷ ತಾಂತ್ರಿಕ ಪ್ರಯೋಗದ ಮೂಲಕ ಸಂಗ್ರಹವನ್ನು ೪.೫ ಟಿಎಂಸಿಗೆ ಹೆಚ್ಚಿಸಲಾಗಿದ್ದು, ಇದೂ ಕೂಡ ಯೋಜನೆಯ ವಿಶೇಷತೆಯಾಗಿದೆ. ಪ್ರತಿ ವರ್ಷ ಬೇಸಿಗೆಯಲ್ಲಿ ಬ್ಯಾರೇಜಿನಲ್ಲಿ ನೀರಿನ ಮಟ್ಟ ಕಡಿಮೆಯಾಗಿ ನೀರಾವರಿಗೆ ತೊಂದರೆಯಾಗದಂತೆ ನೋಡಿಕೊಳ್ಳಲು ಆಲಮಟ್ಟಿ ಅಣೆಕಟ್ಟಿನ ಹಿನ್ನೀರನ್ನು ನೀರೆತ್ತುವ ಆಧುನಿಕ ತಂತ್ರಜ್ಞಾನವನ್ನು ಬಳಸಿ ಬ್ಯಾರೇಜ್ ತುಂಬುವ ಕೆಲಸ ನಡೆದಿದೆ. ಇದರಿಂದಾಗಿ, ಪ್ರತಿ ವರ್ಷ ಬ್ಯಾರೇಜಿನಲ್ಲಿ ನೀರಿನ ಕೊರತೆಯಾದಾಗ ಕೊಯ್ನಾ ಅಣೆಕಟ್ಟಿನಿಂದ ನೀರು ಬಿಡುವಂತೆ ಮಹಾರಾಷ್ಟ್ರ ಸರಕಾರದ ಮುಂದೆ ಕರ್ನಾಟಕ ಸರ್ಕಾರ ಕೈ ಜೋಡಿಸಿ ನಿಲ್ಲುವುದು, ರೈತರು ಪ್ರತಿನಿತ್ಯ ಧರಣಿ ಮಾಡುವುದು ತಪ್ಪಿದಂತಾಗಿದೆ. ಬ್ಯಾರೇಜ್ ನಿರ್ಮಾಣದಂತೆ, ಈ ಹೊಸ ಯೋಜನೆಯೂ ಕೂಡ ವಿಶಿಷ್ಟವಾಗಿದ್ದು ಜನಮನ್ನಣೆಗೆ ಪಾತ್ರವಾಗಿದೆ.

೧೯೯೮ರ ಅಂಕಿ ಅಂಶಗಳ ಪ್ರಕಾರ ಬ್ಯಾರೇಜಿನ ನೀರಿನಿಂದ ಲಾಭ ಪಡೆದುಕೊಂಡ ಫಲಾನುಭವಿಗಳ ಸಂಖ್ಯೆ ೬,೪೨೪. ಅದರಲ್ಲಿ ೪೫೨ ಚಿಕ್ಕ ಮತ್ತು ಅತೀ ಚಿಕ್ಕ ಹಿಡುವಳಿದಾರರು, ೧,೦೩೨ ದೊಡ್ಡ ಹಿಡುವಳಿದಾರರು, ಬ್ಯಾರೇಜಿನಿಂದ ಒಟ್ಟು ೧೦,೪೧೦ ಹೆಕ್ಟೇರ್ ನೀರಾವರಿ ಸೌಲಭ್ಯವನ್ನು ಪಡೆಯುವಂತಾಗಿದೆ. ಅದರಲ್ಲಿ ಸುಮಾರು ೪,೮೭೭ ಹೆಕ್ಟೇರ್ ಭೂಮಿ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಸೇರಿದ್ದು, ೫,೯೮ ಹೆಕ್ಟೇರ್ ಭೂಮಿ ದೊಡ್ಡ ರೈತರದಾಗಿತ್ತು. ಒಟ್ಟು ಹಿಡುವಳಿದಾರರಲ್ಲಿ ಸುಮಾರು ೪೪೦ ರೈತರು ಪರಿಶಿಷ್ಟ ಜಾತಿ / ಪಂಗಡಗಳಿಗೆ ಸೇರಿದವರಾಗಿದ್ದು, ೪೫೪ ಹೆಕ್ಟೇರ್‌ನಷ್ಟು ಭೂಮಿಗೆ ನೀರಾವರಿ ಸೌಲಭ್ಯವನ್ನು ಪಡೆದಿದ್ದಾರೆ ಎಂಬ ಮಾಹಿತಿ ಬ್ಯಾರೇಜಿನಿಂದ ಒದಗಿದ ಸಾಮಾಜಿಕ ನ್ಯಾಯದ ಬೆಲೆಯನ್ನು ಎತ್ತಿ ತೋರುತ್ತದೆ. ಒಟ್ಟಾರೆ ಚಿಕ್ಕ, ಅತೀ ಚಿಕ್ಕ, ದೊಡ್ಡ ಹಾಗೂ ಹಿಂದುಳಿದ ರೈತರ ಶ್ರೇಯೋಭಿವೃದ್ಧಿಗೆ ಬ್ಯಾರೇಜ್ ನಿರ್ಮಾಣ ನಾಂದಿ ಹಾಡಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

ಬ್ಯಾರೇಜಿನಿಂದುಂಟಾದ ನೀರಾವರಿ ಪ್ರದೇಶ ಮತ್ತು ನೀರಾವರಿಯಾಗದೇ ಉಳಿದ ಒಣ ಬೇಸಾಯ ಪ್ರದೇಶದ ರೈತರ ಸಾಮಾಜಿಕ-ಆರ್ಥಿಕ ಪರಿಸ್ಥಿತಿಗಳನ್ನು ಹೋಲಿಸಿ ನೋಡಿದಾಗ ಗಣನೀಯ ವ್ಯತ್ಯಾಸಗಳು ಎದ್ದುಕಾಣುತ್ತವೆ. ನೀರಾವರಿ ಪ್ರದೇಶದ ಚಿಕ್ಕ ಹಿಡುವಳಿದಾರರ ಸರಾಸರಿ ಆಸ್ತಿಯ ಮೌಲ್ಯ ತಲಾವಾರು ಅಂದಾಜು ರೂ. ೧೯,೬೦೦ ಆಗಿದ್ದರೆ, ಒಣ ಬೇಸಾಯ ಪ್ರದೇಶದಲ್ಲಿ ಅದರ ಮೊತ್ತ ಕೇವಲ ರೂ. ೧೧,೧೫೦ರಷ್ಟಾಗಿತ್ತು. ಅದೇ ರೀತಿ ನೀರಾವರಿ ಪ್ರದೇಶದ ದೊಡ್ಡ ಹಿಡುವಳಿದಾರರಿಗೆ ಸಂಬಂಧಿಸಿದಂತೆ ತಲಾವಾರು ಆಸ್ತಿಯ ಮೌಲ್ಯ ಅಂದಾಜು ರೂ. ೫೪,೦೦೦ ಆಗಿದ್ದರೆ, ಒಣ ಬೇಸಾಯದ ರೈತರ ಆಸ್ತಿಯ ಮೌಲ್ಯ ಸುಮಾರು ರೂ. ೪೩,೪೦೦ ಆಗಿತ್ತು. ಬ್ಯಾರೇಜಿನಿಂದುಂಟಾದ ನೀರಾವರಿ ಸೌಲಭ್ಯದಿಂದಾಗಿ ರೈತರ ಕೌಟುಂಬಿಕ ಆಸ್ತಿ ಹೆಚ್ಚಾಗಿದೆ ಎನ್ನುವುದಕ್ಕೆ ಈ ಅಂಕಿ ಅಂಶಗಳೇ ಸಾಕ್ಷಿ.

ಯಶಸ್ವಿ ಸಂಪನ್ಮೂಲ ಕ್ರೋಢೀಕರಣವು ಇಲ್ಲಿನ ಮುಖಂಡತ್ವ, ಜನರ ವಿಶ್ವಾಸ,


ತಮ್ಮ 'ಶ್ರಮದಾನ'ದ ಮೂಲಕ ಬ್ಯಾರೇಜನ್ನು ನಿರ್ಮಿಸುತ್ತಿರುವ ಜನಸಾಮಾನ್ಯರು

ಆತ್ಮಶಕ್ತಿ ಹಾಗೂ ಉತ್ಸಾಹಗಳಿಗೆ ಹಿಡಿದ ಕನ್ನಡಿಯಾಗಿದೆ. ೧೯೮೭-೮೯ರ ಅವಧಿಯಲ್ಲಿ ಬ್ಯಾರೇಜಿನ ನಿರ್ಮಾಣಕ್ಕೆ ಕೇವಲ ೯೨.೫೬ ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿದ್ದು ಒಂದು ಸಾಧನೆ. ಇದೇ ಕಾರ್ಯವನ್ನು ಬೇರೆ ಯಾವುದಾದರೂ ಸಂಸ್ಥೆ ನಿರ್ವಹಿಸಿದ್ದರೆ ಹತ್ತು ಪಟ್ಟು ಅಂದಾಜು ಮಾಡಬಹುದಿತ್ತೇನೋ! ಈ ಮೊತ್ತವನ್ನು ವಿವಿಧ ಮೂಲಗಳಿಂದ ಸಂಗ್ರಹಿಸಲಾಗಿದ್ದು, ನದಿ ಪಾತ್ರದ ಇಕ್ಕೆಲಗಳಲ್ಲಿದ್ದ ರೈತರು ತಮ್ಮ ಹೊಲಗಳಿಗೆ ಅಳವಡಿಸಿರುವ ನೀರೆತ್ತುವ ಪಂಪ್‌ಸೆಟ್‌ನ ಸಾಮರ್ಥ್ಯದ (ಎಚ್‌ಪಿ) ಆಧಾರದ ಮೇಲೆ ಶೇ. ೪೦ರಷ್ಟು ವಂತಿಗೆಯನ್ನು ನೀಡಿದ್ದರು. ಜನಸಾಮಾನ್ಯರ ಶ್ರಮದಾನದ ಭಾಗ ಸುಮಾರು ಶೇ. ೧೫, ಸಾರ್ವಜನಿಕ ವಂತಿಗೆ ಶೇ. ೧೦ರಷ್ಟು ಎಂದು ಅಂದಾಜು ಮಾಡಲಾಗಿದೆ. ಇನ್ನುಳಿದ ಶೇ. ೩೫ರಷ್ಟು ಮೊತ್ತ ಬಂದಿದ್ದು ಕಪಾರ್ಟ್ ಸಂಸ್ಥೆಯಿಂದ. ಸಮುದಾಯ ಆಧಾರಿತ ಜನಪರ ಯೋಜನೆಯ ಮಹತ್ವ ಅರಿತ ಕೇಂದ್ರ ಸರಕಾರದ ಕಪಾರ್ಟ್ ಸಂಸ್ಥೆ ತನ್ನ ಅಭಯ ಹಸ್ತವನ್ನು ನೀಡಿದ್ದನ್ನು ಮೆಚ್ಚಲೇಬೇಕು.

ರಾಷ್ಟ್ರೀಯ-ಅಂತರರಾಷ್ಟ್ರೀಯ ಮಟ್ಟದಲ್ಲಿ ನಿಧಾನವಾಗಿ ಹೆಸರುವಾಸಿಯಾಗುತ್ತಿದ್ದ ಈ ಜನಪ್ರಿಯ ಯೋಜನೆಯ ಸಾಮಾಜಿಕ-ಆರ್ಥಿಕ ಮಹತ್ವವನ್ನರಿತು ಪ್ರಸ್ತುತ ಲೇಖಕರು ೧೯೯೪ರಲ್ಲಿ ಯೋಜನೆಯ ವೈಜ್ಞಾನಿಕ ವಿಶ್ಲೇಷಣೆಯನ್ನು ಕೈಗೊಂಡಿದ್ದು ಜಾಗತಿಕ ಮಟ್ಟದಲ್ಲಿ ಚಿಕ್ಕಪಡಸಲಗಿ ಬ್ಯಾರೇಜಿನ ವಿಶಿಷ್ಟತೆಯನ್ನು ಗುರುತಿಸುವಲ್ಲಿ ಸಾಧ್ಯವಾಗಿದೆ. ಈ ಕುರಿತು ಒಂದು ಬೃಹತ್ ಪ್ರೌಢ ಪ್ರಬಂಧವನ್ನು ಧಾರವಾಡ ಕೃಷಿ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಲಾಗಿದೆ. ಬ್ಯಾರೇಜಿನ ವೈಜ್ಞಾನಿಕ ವಿಶ್ಲೇಷಣೆ ಕುರಿತು ಅನೇಕ ವೈಜ್ಞಾನಿಕ ಮತ್ತು ಜನಪರ ಲೇಖನಗಳು ಪ್ರಕಟವಾಗಿವೆ. ಇವೆಲ್ಲವುಗಳಿಗೂ ಮೀರಿ ೨೦೦೮ರಲ್ಲಿ ಆಸ್ಟ್ರಿಯಾ ದೇಶದ ವಿಯೆನ್ನಾದಲ್ಲಿ ನಡೆದ ಜಾಗತಿಕ ಜಲ ಸಮ್ಮೇಳನದಲ್ಲಿ ಪ್ರಸ್ತುತ ಲೇಖಕರು ಬ್ಯಾರೇಜಿನ ಸಾಧನೆಗಳ ಪ್ರಬಂಧವನ್ನು ಮಂಡಿಸಿದಾಗ ಅಲ್ಲಿ ನೆರೆದ ನೂರಾರು ಅಂತರರಾಷ್ಟ್ರೀಯ ತಜ್ಞರ ಕರತಾಡನ ಶ್ರೀ ಸಿದ್ದು ನ್ಯಾಮಗೌಡರ ಮಾರ್ಗದರ್ಶನದಲ್ಲಿ ರೈತ ಸಮುದಾಯ ನಡೆಸಿದ ಭಗೀರಥ ಪ್ರಯತ್ನಕ್ಕೆ ಶ್ಲಾಘನೆಯ ಮುದ್ರೆಯಾಗಿತ್ತು.

ಜಾಗತಿಕ ಮಟ್ಟದ ವಿವಿಧ ನೀರಾವರಿ ಯೋಜನೆಗಳ ಸಾಮಾಜಿಕ ಆರ್ಥಿಕ ವಿಶ್ಲೇಷಣೆಯನ್ನು ಕೈಗೊಳ್ಳುವಾಗ ವಿಶ್ವ ಬ್ಯಾಂಕ್ ಹಾಗೂ ಭಾರತೀಯ ನೀರಾವರಿ ಆಯೋಗದಂತಹ ಸಂಸ್ಥೆಗಳು ಗಣನೆಗೆ ತೆಗೆದುಕೊಳ್ಳುವ ಪಿಬಿಪಿ, ಎನ್‌ಪಿವಿ, ಬಿಸಿಆರ್, ಐಆರ್‌ಆರ್‌ಗಳಂತಹ ವಸ್ತುನಿಷ್ಠ ಸೂಚ್ಯಾಂಕಗಳನ್ನು ಪರಿಗಣಿಸಿ, ಈ ವೈಜ್ಞಾನಿಕ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿತ್ತು. ಯೋಜನೆಯ ಆರ್ಥಿಕ ವಿಶ್ಲೇಷಣೆಯ ಪ್ರಕಾರ ಕೇವಲ ಆರು ವರ್ಷಗಳಲ್ಲಿ ಹೂಡಿದ ಬಂಡವಾಳ ವಾಪಸು ಬಂದಿದ್ದು ಕಂಡುಬಂದಿದೆ. ಅದೇ ರೀತಿ, ಯೋಜನೆಯು ನೀಡಿದ ಒಟ್ಟು ಲಾಭಗಳನ್ನು ೧೪ ವರ್ಷ ಹಾಗೂ ೨೫ ವರ್ಷ ಯೋಜನಾ ಜೀವಾವಧಿ ಆಧಾರದ ಮೇಲೆ ವಿಶ್ಲೇಷಿಸಿದಾಗ ಯೋಜನೆಯ ಲಾಭ-ವೆಚ್ಚ ಅನುಪಾತ ಕ್ರಮವಾಗಿ ೧.೫೪ ಮತ್ತು ೧.೮೦ ಎಂದು ತಿಳಿದುಬಂದಿದೆ. ಆರಂಭದಲ್ಲಿ ಹೂಡಿದ ಒಟ್ಟು ರೂ. ೯೨.೫೬ ಲಕ್ಷ ಮೊತ್ತ ೧೪ ವರ್ಷಗಳಲ್ಲಿ ರೂ. ೩,೪೦೧ ಲಕ್ಷಕ್ಕೂ, ೨೫ ವರ್ಷಗಳಲ್ಲಿ ರೂ. ೬,೬೦೪ ಲಕ್ಷಕ್ಕೂ ವೃದ್ಧಿಯಾಗಿರುವುದು ಕಂಡುಬಂದಿದೆ. ಮುಂದುವರಿದು, ೧೪ ವರ್ಷಗಳ ಜೀವನಾವಧಿಯನ್ನು ಪರಿಗಣಿಸಿದ ಯೋಜನೆಯ ಆಂತರಿಕ ಆದಾಯ ಗತಿ ಸುಮಾರು ಶೇ. ೪೦ ಹಾಗೂ ೨೫ ವರ್ಷಗಳ ಜೀವನಾವಧಿಯನ್ನು ಪರಿಗಣಿಸಿದರೆ ಶೇ. ೪೯ರಷ್ಟಿರುವುದು ಕಂಡುಬಂದಿದೆ.

ಈ ಎಲ್ಲ ಆರ್ಥಿಕ ಸೂಚ್ಯಾಂಕಗಳನ್ವಯ, ಚಿಕ್ಕಪಡಸಲಗಿ ಬ್ಯಾರೇಜ್ ಯೋಜನೆ ಒಂದು ಅತ್ಯಂತ ಲಾಭದಾಯಕ ಯೋಜನೆ ಎಂದು ನಿರ್ದಿಷ್ಟವಾಗಿ ಹೇಳಬಹುದು. ಯೋಜನೆಯು ಸಮುದಾಯಕ್ಕೆ ನೀಡಿದ ಇನ್ನುಳಿದ ಪರೋಕ್ಷ ಲಾಭಗಳನ್ನು ಗಣನೆಗೆ ತೆಗೆದುಕೊಂಡಾಗ ಯೋಜನೆಯ ಒಟ್ಟಾರೆ ಸಾಮಾಜಿಕ-ಆರ್ಥಿಕ ಮೌಲ್ಯ ಬಹುಮಹತ್ವದ್ದಾಗಿದೆ ಮತ್ತು ಸ್ವಾಗತಾರ್ಹವಾಗಿದೆ.

ಯೋಜನೆಯ ಅಚ್ಚುಕಟ್ಟು ಪ್ರದೇಶದಲ್ಲಿ ನೀರಾವರಿಯಿಂದ ಪ್ರತಿ ಸಣ್ಣ ರೈತನ ಎಕರೆವಾರು ನಿವ್ವಳ ಲಾಭ ಶೇ. ೭೪ರಿಂದ ಶೇ. ೨೬೮ರಷ್ಟು ಹೆಚ್ಚಾದರೆ, ದೊಡ್ಡ ರೈತನ ಎಕರೆವಾರು ನಿವ್ವಳ ಲಾಭ ಶೇ. ೮೧ರಿಂದ ೧೫೬ರವರೆಗೆ ವೃದ್ಧಿಸಿರುವುದು ಕಂಡುಬಂದಿದೆ. ಅದೇ ರೀತಿ ಉದ್ಯೋಗ ಸೃಷ್ಟಿಯಲ್ಲಿಯೂ ಯೋಜನೆಯು ಮಹತ್ವದ ಪಾತ್ರ ವಹಿಸಿದೆ. ಬರಗಾಲದಿಂದ ಬೆಂದು ಗುಳೆ ಹೋಗುವ ರೈತರೀಗ ತಮ್ಮದೇ ಹೊಲಗಳಲ್ಲಿ ಸಾಕಷ್ಟು ಶ್ರಮವಹಿಸಿ ದುಡಿಯುವಂತಾಗಿದೆ. ಪ್ರತಿ ಹಿಡುವಳಿಯಲ್ಲಿ ಅಗಾಧ ಪ್ರಮಾಣದಲ್ಲಿ ಉದ್ಯೋಗಾವಕಾಶಗಳು ಸೃಷ್ಟಿಯಾಗಿವೆ.



***ಕಮಾಂಡ್ ಏರಿಯಾದಲ್ಲಿ ಹಚ್ಚಹಸಿರಿನಿಂದ ಕಂಗೊಳಿಸುತ್ತಿರುವ ಕಬ್ಬು***

ಬ್ಯಾರೇಜಿನ ಪರೋಕ್ಷ ಲಾಭಗಳನ್ನು ಪರಿಗಣಿಸಿದರೆ ಅವುಗಳಲ್ಲಿ ಪ್ರಮುಖವಾಗಿ ಕೃಷಿ ಮೂಲಭೂತ ಸೌಲಭ್ಯಗಳ ಸುಧಾರಣೆ, ಬೀಜ, ಗೊಬ್ಬರಗಳಂತಹ ಕೃಷಿ ಪರಿಕರಗಳ ವಹಿವಾಟಿನಲ್ಲಿ ವೃದ್ಧಿ, ನೀರಾವರಿ ಸಂಬಂಧಿತ ಉಪಕರಣಗಳ (ಸುಧಾರಿತ ನೇಗಿಲು, ಟ್ರ್ಯಾಕ್ಟರ್, ನೀರಾವರಿ ಪಂಪ್‌ಸೆಟ್, ಮಾರಾಟ) ಮತ್ತು ಸೇವೆಗಳಲ್ಲಿ ಉಂಟಾದ ಬೆಳವಣಿಗೆಗಳು ಮಹತ್ವದ್ದಾಗಿವೆ. ಅದೇ ರೀತಿ ಜಮಖಂಡಿ ಮತ್ತು ಸುತ್ತಮುತ್ತಲಿನ ಭಾಗದಲ್ಲಿ ಹೊಸದಾಗಿ ಸ್ಥಾಪಿಸಲಾದ ಸಾರ್ವಜನಿಕ ಬ್ಯಾಂಕ್‌ಗಳು, ಗ್ರಾಮೀಣ ಬ್ಯಾಂಕ್‌ಗಳು, ರೈತ ಸೇವಾ ಸಂಘಗಳು, ಬೆಲ್ಲ ತಯಾರಿಕಾ ಕೇಂದ್ರಗಳು, ಮೆಕ್ಕೆಜೋಳದಂತಹ ಬೆಳೆಗಳ ಸಂಸ್ಕರಣಾ ಘಟಕಗಳ ಸಂಖ್ಯೆಯಲ್ಲಿನ ಬೆಳವಣಿಗೆಗಳು ಎದ್ದುಕಾಣುತ್ತವೆ.

ಬ್ಯಾರೇಜ್ ನಿರ್ಮಾಣದ ನಂತರ ಕೃಷಿ ಸಾಗುವಳಿ ಜೊತೆ ಜೊತೆಗೆ ಹೈನುಗಾರಿಕೆ ಹೆಚ್ಚಿನ ಪ್ರಮಾಣದಲ್ಲಿ ಬೆಳೆದಿರುವುದು ಕಂಡುಬಂದಿದೆ. ಸ್ಥಳೀಯ ಮತ್ತು ಮಿಶ್ರತಳಿ ಆಕಳುಗಳು, ಎಮ್ಮೆಗಳು, ಕುರಿ-ಆಡುಗಳ ಸಂಖ್ಯೆ ಗಣನೀಯವಾಗಿ ಬೆಳೆದಿದೆ ಮತ್ತು ಅವುಗಳಿಗೆ ಪೂರಕವಾಗಿ ಬೇಕಾಗುವ ಆಹಾರ ಸರಬರಾಜು, ವೈದ್ಯಕೀಯ ಸೇವೆ, ಕೃತಕ ಗರ್ಭಧಾರಣೆ ಕೇಂದ್ರಗಳ ಸಂಖ್ಯೆ ಕೂಡ ಸಾಕಷ್ಟು ಪ್ರಮಾಣದಲ್ಲಿ ಬೆಳೆದಿರುವುದು ಕಂಡುಬಂದಿದೆ.

ಅದೇ ರೀತಿ ಈ ಭಾಗದಲ್ಲಿ ಸರಕು ಸಾಗಾಣಿಕೆ ಹಾಗೂ ಸಂವಹನ ಕ್ಷೇತ್ರಗಳಲ್ಲಿಯೂ ಸಾಕಷ್ಟು ಬದಲಾವಣೆಗಳನ್ನು ಗಮನಿಸಲಾಗಿದ್ದು, ಅವುಗಳಲ್ಲಿ ಪ್ರಮುಖವಾಗಿ ರಸ್ತೆ ನಿರ್ಮಾಣ, ಟ್ರಕ್, ಟ್ರ್ಯಾಕ್ಟರ್, ಮೋಟಾರ್ ಕಾರ್, ಜೀಪ್, ದ್ವಿಚಕ್ರ ವಾಹನಗಳು, ಎತ್ತಿನ ಗಾಡಿ ಹಾಗೂ ದೂರವಾಣಿ ಸಂಖ್ಯೆಯಲ್ಲಿ ಅಗಾಧವಾದ ಬೆಳವಣಿಗೆಯನ್ನು ಕಾಣಬಹುದು. ಇವುಗಳಿಗೆಲ್ಲ ಕಳಶಪ್ರಾಯವಾದಂತೆ ಅಗಾಧ ಪ್ರಮಾಣದಲ್ಲಿ ಉತ್ಪಾದನೆಯಾದ ಕಬ್ಬಿನ ಸಂಸ್ಕರಣೆಗಾಗಿ ಜನಶಕ್ತಿಯ ಸಹಾಯ-ಸಹಕಾರದಿಂದ ೧೯೯೮ರಲ್ಲಿ ಜಮಖಂಡಿ ಶುಗರ್ಸ್ ಲಿಮಿಟೆಡ್ ಕಬ್ಬಿನ ಉದ್ದಿಮೆ ಪ್ರಾರಂಭವಾಗಿರುವುದು ಈ ಭಾಗದ ರೈತರ ಕನಸು ನನಸಾದಂತಾಗಿದೆ.

ಈ ಯೋಜನೆಯ ವಿಶಿಷ್ಟ ಗುಣಲಕ್ಷಣಗಳನ್ನು ಗಮನಿಸಿದಾಗ ಅದರ ಪರಿಕಲ್ಪನೆ, ಸಂಪನ್ಮೂಲ ಕ್ರೋಢೀಕರಣ, ರೈತರ ಸಂಘಟನೆ ಮತ್ತು ಸಹಭಾಗಿತ್ವ, ನಿರ್ಮಾಣ ಮತ್ತು ನಿರ್ವಹಣೆ ಅದ್ವಿತೀಯ ಸಾಧನೆಗಳಾಗಿವೆ. ವಿಶೇಷವಾಗಿ, ಜನಸಮುದಾಯದ ಸಹಭಾಗಿತ್ವ ಶ್ಲಾಘನೀಯವಾಗಿದೆ. ಸಮಾಜದ ವಿವಿಧ ವರ್ಗಗಳ ಜನ ಅಗಾಧ ಪ್ರಮಾಣದಲ್ಲಿ ತಮ್ಮ ತನು, ಮನ, ಧನಗಳ ಅರ್ಪಣೆಯಿಂದ ಈ ವಿಶಿಷ್ಟ ಯೋಜನೆಯನ್ನು ನಿರ್ಮಿಸಿ ಧನ್ಯರಾಗಿದ್ದಾರೆ. ರೈತರಲ್ಲಿ ಸ್ವಾವಲಂಬನೆ ಮತ್ತು ಒಡೆತನದ ಭಾವನೆಗಳು ಮೂಡಿ ಅವರ ಆತ್ಮಶಕ್ತಿಯನ್ನು ವೃದ್ಧಿಸಿವೆ. ಅಲ್ಪ ಸಮಯಾವಧಿಯಲ್ಲಿ, ಕಡಿಮೆ ವೆಚ್ಚದಲ್ಲಿ, ತಮ್ಮ ಸ್ವಂತ ಶಕ್ತಿ ಸಾಮರ್ಥ್ಯಗಳಿಂದ ನಾಡೇ ಮೆಚ್ಚುವ ಯೋಜನೆಯನ್ನು ನಿರ್ಮಿಸಿದ ಈ ಮನುಷ್ಯ ಪ್ರಯತ್ನ ಒಂದು ಭಗೀರಥ ಪ್ರಯತ್ನವೇ ಸರಿ.

ಡಾ॥ ರಾಜೇಂದ್ರ ಪೋದ್ದಾರ
ಪ್ರಾಧ್ಯಾಪಕರು (ಕೃಷಿ ಅರ್ಥಶಾಸ್ತ್ರ) ಮತ್ತು ಮುಖ್ಯಸ್ಥರು
ಪ್ರಯೋಜನ ಯೋಜನ ಮತ್ತು ಉಸ್ತುವಾರಿ ಘಟಕ
ಕುಲಪತಿಗಳ ಕಾರ್ಯಾಲಯ, ಕೃಷಿ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೫

ಮಿದುಳಿನಲ್ಲಿ ೧೦೦ ಶತಕೋಟಿಗೂ ಹೆಚ್ಚು ಸೂಕ್ಷ್ಮ ಕೋಶಗಳಿವೆ. ಅವುಗಳನ್ನು ನ್ಯೂರಾನ್‌ಗಳು ಎನ್ನುತ್ತಾರೆ. ಪ್ರತಿ ನ್ಯೂರಾನ್‌ಗಳ ನಡುವೆಯೂ ಸಂಪರ್ಕ ಮಾರ್ಗಗಳಿವೆ. ನಗುವಾಗ, ಅಳುವಾಗ, ಎಲ್ಲ ಸಮಯಗಳಲ್ಲೂ ನ್ಯೂರಾನ್‌ಗಳ ನಡುವೆ ರಾಸಾಯನಿಕ ಹಾಗೂ ವಿದ್ಯುತ್ ಸಂಚಾರ ಆಗುತ್ತದೆ. ಯಾವುದೇ ಅಂಗದ ಮೇಲೆ ದುಂಬಿ ಕುಳಿತುಕೊಂಡರೆ ತಕ್ಷಣ ಸಂವೇದನಾ ಕ್ರಿಯೆ ನ್ಯೂರಾನ್‌ಗಳ ನಡುವೆ ೨೪೧ ಕಿ.ಮೀ. / ಗಂಟೆ ವೇಗಕ್ಕಿಂತಲೂ ಹೆಚ್ಚಿನ ವೇಗದಲ್ಲಿ ಸಂದೇಶಗಳನ್ನು ರವಾನಿಸಿ, ಅಂಗವನ್ನು ಅಲ್ಲಾಡಿಸಿ ದುಂಬಿಯನ್ನು ಬೀಳಿಸುವ ಸಂದೇಶವನ್ನು ಚಲನಾ ನ್ಯೂರಾನ್‌ಗಳಿಗೆ ೩೨೨ ಕಿ.ಮೀ. / ಗಂಟೆ ವೇಗದಲ್ಲಿ ರವಾನಿಸಿ ಒಂದೊಂದು ನ್ಯೂರಾನ್ ಸಹ ತನ್ನ ಮಟ್ಟದಲ್ಲಿ ಅತ್ಯಲ್ಪ ಪ್ರಮಾಣದ ಸಂದೇಶವನ್ನು ರವಾನಿಸುತ್ತದೆ.



# ಮಿದುಳು ಎಂಬ ಅದ್ಭುತ !

**ನ**ಮ್ಮ ತಲೆಯೊಳಗಿರುವ ಪುಟ್ಟ ಮಿದುಳು ಎಷ್ಟು ಅದ್ಭುತವಾದ ಶರೀರದ ಭಾಗ ! ಎಲ್ಲಾ ಅಂಗಗಳ ಪೈಕಿ ಅತ್ಯಂತ ಮಹತ್ವದ ಅಂಗ. ಸಮಸ್ತ ಕೆಲಸಗಳನ್ನು ಮಾಡಲು ಅದೇ ಕಾರಣ. ಅದು ಇಡೀ ಶರೀರವನ್ನು ನಿಯಂತ್ರಿಸುತ್ತದೆ. ನಿದ್ರೆ ಮಾಡುವಾಗಲೂ ಅದು ಸದ್ದಿಲ್ಲದೆ ತನ್ನ ಕೆಲಸವನ್ನು ಮಾಡುತ್ತಿರುತ್ತದೆ. ಎಲ್ಲಾ ಆಲೋಚನೆ, ಚಿಂತೆ, ಸಂತೋಷ – ಎಲ್ಲ ಭಾವನೆಗಳಿಗೂ ಮಿದುಳೇ ಕಾರಣ. ಕಣ್ಣುರೆಪ್ಪೆಗಳ ಬಡಿತ, ಹೃದಯದ ಮಿಡಿತ, ನರಗಳ ಸಂವೇದನೆ, ರಕ್ತ ಪರಿಚಲನೆ ಎಲ್ಲವನ್ನೂ ನಿಯಂತ್ರಿಸುವ ಅಂಗ ಮಿದುಳು. ಈ ಬ್ರಹ್ಮಾಂಡದಲ್ಲಿ ಈವರೆಗೆ ಪತ್ತೆ ಮಾಡಿರುವ ವಸ್ತುಗಳ ಪೈಕಿ ಅತಿ ಸಂಕೀರ್ಣವಾದ ಅಂಗಾಂಗ ಮಿದುಳು !

ಮಾನವನ ಮಿದುಳಿನ ಕುರಿತು ಬಹಳ ಸಂಶೋಧನೆಗಳು ನಡೆಯುತ್ತಲೇ ಇವೆ. ಆದರೂ ಅದರ ಪೂರ್ಣ ಸ್ವರೂಪ ಪತ್ತೆಯಾಗಿಲ್ಲ ! ಅದರ ಗುಟ್ಟು ವಿಜ್ಞಾನಿಗಳಿಗೆ ಸರಿಯಾಗಿ ತಿಳಿದಿಲ್ಲ. ದೂರದ ಗ್ಯಾಲಕ್ಸಿಯಷ್ಟೇ ನಿಗೂಢವಾದದ್ದು ಮತ್ತು ಶರೀರದ ಮಾಂಸಖಂಡಗಳಿಗೆ ಕಾರ್ಯ ಕೈಗೊಳ್ಳುವ ಆದೇಶ ರವಾನಿಸಿ ಹೇಗೆ ಕಾರ್ಯಮಾಡಬೇಕು ಎಂಬ ನಿರ್ದೇಶನವನ್ನೂ ನೀಡುತ್ತದೆ. ತಕ್ಷಣ ಈ ಮಾಹಿತಿಯ ಅನುಸಾರ ಕಾರ್ಯಪ್ರವೃತ್ತರಾಗಿ ನಮ್ಮ ಕಣ್ಣು, ಕಿವಿ ಹಾಗೂ ಇತರ ಸಂವೇದನಾ ಅಂಗಗಳ ಮೂಲಕ ಮಾಹಿತಿಯನ್ನು 'ಡೌನ್‌ಲೋಡ್' ಮಾಡಿಕೊಂಡು, ಅದನ್ನು ವಿಶ್ಲೇಷಿಸಿ ಬೇಗ ನಿರ್ಧಾರಕ್ಕೆ ಬಂದು, ಆ ನಿರ್ಧಾರವನ್ನು ಕಾರ್ಯಗತಗೊಳಿಸಲು ಮುಂದಾಗುವ ವೇಗ ಅದ್ಭುತವಾದದ್ದು. ಇಷ್ಟು ದಕ್ಷವಾಗಿ, ವೇಗವಾಗಿ ಜಗತ್ತಿನ ಯಾವ ಸೂಪರ್ ಕಂಪ್ಯೂಟರ್ ಸಹ ಕೆಲಸ ಮಾಡಲಾರದು !

ಮಿದುಳಿನಲ್ಲಿ ೧೦೦ ಶತಕೋಟಿಗೂ ಹೆಚ್ಚು ಸೂಕ್ಷ್ಮ ಕೋಶಗಳಿವೆ. ಅವುಗಳನ್ನು ನ್ಯೂರಾನ್‌ಗಳು ಎನ್ನುತ್ತಾರೆ. ಪ್ರತಿ ನ್ಯೂರಾನ್‌ಗಳ ನಡುವೆಯೂ ಸಂಪರ್ಕ ಮಾರ್ಗಗಳಿವೆ. ನಗುವಾಗ, ಅಳುವಾಗ, ಎಲ್ಲ ಸಮಯಗಳಲ್ಲೂ ನ್ಯೂರಾನ್‌ಗಳ ನಡುವೆ ರಾಸಾಯನಿಕ ಹಾಗೂ ವಿದ್ಯುತ್ ಸಂಚಾರ ಆಗುತ್ತದೆ. ಯಾವುದೇ ಅಂಗದ ಮೇಲೆ ದುಂಬಿ ಕುಳಿತುಕೊಂಡರೆ ತಕ್ಷಣ ಸಂವೇದನಾ ಕ್ರಿಯೆ ನ್ಯೂರಾನ್‌ಗಳ ನಡುವೆ ೨೪೧ ಕಿ.ಮೀ. / ಗಂಟೆ ವೇಗಕ್ಕಿಂತಲೂ ಹೆಚ್ಚಿನ ವೇಗದಲ್ಲಿ ಸಂದೇಶಗಳನ್ನು ರವಾನಿಸಿ, ಅಂಗವನ್ನು ಅಲ್ಲಾಡಿಸಿ ದುಂಬಿಯನ್ನು ಬೀಳಿಸುವ ಸಂದೇಶವನ್ನು ಚಲನಾ ನ್ಯೂರಾನ್‌ಗಳಿಗೆ ೩೨೨ ಕಿ.ಮೀ. / ಗಂಟೆ ವೇಗದಲ್ಲಿ ರವಾನಿಸಿ ಒಂದೊಂದು ನ್ಯೂರಾನ್ ಸಹ ತನ್ನ ಮಟ್ಟದಲ್ಲಿ ಅತ್ಯಲ್ಪ ಪ್ರಮಾಣದ ಸಂದೇಶವನ್ನು ರವಾನಿಸುತ್ತದೆ.

ಸೃಷ್ಟಿಯ (ಬ್ರಹ್ಮಾಂಡದ) ಅನೇಕ ರಹಸ್ಯಗಳನ್ನು ಹೊರಗೆಡವಿದ ವಿಶ್ವವಿಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್ ೧೯೫೫ರಲ್ಲಿ ನಿಧನರಾದ ನಂತರ ಅವರ ಮಿದುಳನ್ನು ತೆಗೆದು ಅದರ ವೈಶಿಷ್ಟ್ಯಗಳನ್ನು ಪರೀಕ್ಷಿಸುವ ಅಸಾಮಾನ್ಯ ಪ್ರಯೋಗಗಳು ನಡೆದವು. ಇಂತಹ ಅದ್ಭುತ ವಿಜ್ಞಾನಿಯ ಮಿದುಳು ಜನರ ತೀವ್ರ ಕುತೂಹಲ ಹಾಗೂ ಸಂಶೋಧನೆಯ ವಸ್ತುವಾಯಿತು. ಇದು ಎಷ್ಟು ಸರಿ ಎಂಬ ವಿಷಯದಲ್ಲಿ ವಿವಾದಗಳಿವೆ. ಅವುಗಳ ವಿವರ ಇಲ್ಲಿ ಅನಗತ್ಯ. ಐನ್‌ಸ್ಟೈನ್‌ರ ಮಿದುಳಿನ ಸ್ವರೂಪ, ಅದರ ನರಸಂಯೋಜನೆ, ಕೋಶಗಳ ಸ್ವರೂಪ, ಆಕಾರ ಲಕ್ಷಣಗಳ ಬಗ್ಗೆ ಅಧ್ಯಯನ ನಡೆಸಲು ೭ ಗಂಟೆಗಳ ಒಳಗಾಗಿ ಅಮೆರಿಕದ ನ್ಯೂಜೆರ್ಸಿಯ ಪ್ರಿನ್ಸ್‌ಟನ್ ಆಸ್ಪತ್ರೆಯಲ್ಲಿ ಅವರ ಶರೀರದಿಂದ ಮಿದುಳನ್ನು ಬೇರ್ಪಡಿಸಿ ಹೊರತೆಗೆಯಲಾಯಿತು.

ಈವರೆಗೆ ಅವರ ಮಿದುಳಿನ ಬಗ್ಗೆ ಮೂರ್‍ನಾಲ್ಕು ಪ್ರತ್ಯೇಕ ಸಂಶೋಧನಾ ಪ್ರಬಂಧಗಳು ಪ್ರಕಟವಾಗಿವೆ. ಅವರ ಮಿದುಳಿನಲ್ಲಿ ಮಾತು ಹಾಗೂ ಭಾಷೆಗೆ ಸಂಬಂಧಿಸಿದ ಭಾಗಗಳ ಸಂಖ್ಯೆಗಳ ಹಾಗೂ ವೈಜ್ಞಾನಿಕ ವಿಶ್ಲೇಷಣೆಯ ಕ್ಷೇತ್ರಗಳು ದೊಡ್ಡದಾಗಿದ್ದವು. ಹಾಗೆಯೇ 'ಗ್ಲಿಯಲ್' ಎಂಬ ಬುದ್ಧಿಕೋಶಗಳ ಸಂಖ್ಯೆ ಹೆಚ್ಚಾಗಿರುವುದು ಕಂಡುಬಂದು ಅವರ ಮಿದುಳಿನ ಕೆಲವು ಭಾಗಗಳು ಸಾಮಾನ್ಯ ಮನುಷ್ಯರ ರೀತಿ ಇರಲಿಲ್ಲ ಎಂಬ ಅಂಶ ೧೯೯೯ರ ಒಂದು ಅಧ್ಯಯನದಿಂದ ತಿಳಿದುಬಂದಿದೆ.

ಅಂದಹಾಗೆ, ಚಿಕ್ಕ ವಯಸ್ಸಿನಲ್ಲಿ ಐನ್‌ಸ್ಟೈನ್ 'ದಡ್ಡ' ಎಂದು ಕರೆಯಲ್ಪಟ್ಟಿದ್ದರೂ ಶಾಲೆಯಿಂದ ತಿರಸ್ಕೃತಗೊಂಡು ಮುಂದೆ ಅವರೇ ಹೇಗೆ 'ಜೀನಿಯಸ್' ಎನಿಸಿಕೊಂಡರು ? ಈಚೆಗೆ ಪ್ರಯೋಗಗಳ ಮೂಲಕ ಮಿಶಿಗನ್ ವಿಶ್ವವಿದ್ಯಾಲಯದ ವಿಜ್ಞಾನಿಗಳು ಕಂಡುಕೊಂಡಿರುವ ಮಾಹಿತಿ ಇದು ಕಲಿಕೆಯ ಮೂಲಕ ನಾವು ನಮ್ಮ ಮಿದುಳಿನ ಸಂರಚನೆಯನ್ನು ಉತ್ತಮಪಡಿಸಿಕೊಳ್ಳಬಹುದು. ಬುದ್ಧಿಯನ್ನು ಬಳಸಿದಷ್ಟೂ ಮಿದುಳಿನ ಕೋಶಗಳು ಹೆಚ್ಚು ಚುರುಕಾಗುತ್ತವೆ. ಶರೀರದ ವ್ಯಾಯಾಮ ಹಾಗೂ ಬುದ್ಧಿಗೆ ಕೆಲಸ ಕೊಡುವ ಸಮಸ್ಯೆಗಳನ್ನು ಬಿಡಿಸುವುದರಿಂದ ಮಿದುಳಿಗೆ ಭಾರೀ ಲಾಭವಿದೆ. ಅಂದರೆ ನಮಗೆ ಮಿದುಳಿನ ಮೂಲಕ ಭಾರಿ ಅನುಕೂಲತೆ ಇದೆ ! ನಮ್ಮ ಬುದ್ಧಿಶಕ್ತಿಯನ್ನು ನಾವೇ ಹೆಚ್ಚಿಸಿಕೊಳ್ಳಬಹುದು.

**ಪ್ರೊ॥ ಬಿ. ಎನ್. ಹಾವರಡ್ಡಿ**
ಸಹಾಯಕ ಪ್ರಾಧ್ಯಾಪಕರು, ಬಿ. ಕೆ. ಮಹಾವಿದ್ಯಾಲಯ
ಚಿಕ್ಕೋಡಿ – ೫೯೧ ೨೦೧



ಎಂ. ಎಸ್. ಕೃಷ್ಣನ್ ಅವರು ಆಶ್ರಯ ಪಡೆದಿದ್ದುದು ನಮ್ಮ ಮಾವನವರಾದ ಗಿರಿಮಾಜಿ ಗೋವಿಂದರಾಯರ ಮನೆಯಲ್ಲಿ. ಬೆಂಗಳೂರು ಬಸವನಗುಡಿ ಬಡಾವಣೆಯ ಶ್ರೀರಾಮ ಮಂದಿರಂ ರಸ್ತೆಯ ಉತ್ತರ ದಿಕ್ಕಿನ ತುದಿಯಲ್ಲಿ ಆಗ ಇದ್ದ ಒಂದು ಎರಡಂತಸ್ತಿನ ಮನೆಯಲ್ಲಿ ನಮ್ಮ ಮಾವನವರು ವಾಸ ಮಾಡುತ್ತಿದ್ದರು. ಆ ಮನೆಯ ಮಹಡಿಯಲ್ಲಿದ್ದ ಒಂದು ಚಿಕ್ಕ ಕೊಠಡಿಯಲ್ಲಿ ಕೃಷ್ಣನ್ ವಾಸಿಸುತ್ತಿದ್ದರೂ ದಿನವೆಲ್ಲ ಸ್ನಾನ, ಊಟ, ತಿಂಡಿ, ಓದು, ಮುಂತಾದುದರಲ್ಲಿ ಕಾಲ ಕಳೆಯುತ್ತಿದ್ದು ಸಂಜೆ ಏಳು ಗಂಟೆಯ ವೇಳೆಗೆ ವೇಷ ಬದಲಾಯಿಸಿಕೊಂಡು, ಗಾಂಧಿ ಟೋಪಿ, ಸಾದಾ ಗಾಜಿನ ಕನ್ನಡಕ ಹಾಕಿಕೊಂಡು ಸೈಕಲ್ ಮೇಲೆ ಹೋಗಿ ಇತರ ಭೂಗತ ಕಮ್ಯುನಿಸ್ಟ್ ಮುಖಂಡರೊಡನೆ ವ್ಯವಹರಿಸುತ್ತಿದ್ದರು.

# ಹೀಗಿದ್ದರು ಗೆಳೆಯ ಎಂ. ಎಸ್. ಕೃಷ್ಣನ್

**ಮೊ**ತ್ತಮೊದಲು ನನಗೆ ಎಂ. ಎಸ್. ಕೃಷ್ಣನ್ ಅವರ ಪರಿಚಯವಾದದ್ದು ೧೯೪೧–೪೨ರಲ್ಲಿ. ಆಗ ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ರಸಾಯನಶಾಸ್ತ್ರ ವಿಭಾಗದಲ್ಲಿ ಬಿ.ಎಸ್‌ಸಿ. ಆನರ್ಸ್‌ನ ಅಂತಿಮ ವರ್ಷದ, ಅಂದರೆ ಮೂರನೆಯ ವರ್ಷದ ವಿದ್ಯಾರ್ಥಿ. ನನಗಿಂತ ಸುಮಾರು ಮೂರು ವರ್ಷ ಕಿರಿಯರಾದ ಕೃಷ್ಣನ್ ಅವರು ಎಂಜಿನಿಯರಿಂಗ್ ಕಾಲೇಜಿನಲ್ಲಿ ಮೊದಲ ವರ್ಷದ ವಿದ್ಯಾರ್ಥಿ. ಆಗ ಸೆಂಟ್ರಲ್ ಕಾಲೇಜಿನ ಸೀನಿಯರ್ ಬಿ.ಎಸ್‌ಸಿ. ವಿದ್ಯಾರ್ಥಿಯಾಗಿದ್ದ ನನ್ನ ಸ್ನೇಹಿತ ಸಿ. ಆರ್. ಕೇಶವರಾವ್ ಅವರೂ ಕೃಷ್ಣನ್ ಅವರೂ ಸ್ಟೂಡೆಂಟ್ಸ್ ಏಯ್ಡ್ ಸೊಸೈಟಿ ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದರು. ಆ ಸಂಸ್ಥೆಯ ಪರವಾಗಿ ಅವರು ಯಾವ ಆಕರಗಳಿಂದ ಹಣ ಸಂಗ್ರಹಿಸುತ್ತಿದ್ದರೋ ನನಗೆ ಗೊತ್ತಿಲ್ಲ. ಅಂತು, ಹೇಗೋ ಹಣ ಸಂಗ್ರಹಿಸಿ ಅದನ್ನು ಬಡ ವಿದ್ಯಾರ್ಥಿಗಳ ಆವಶ್ಯಕತೆಗಳನ್ನು ಪೂರೈಸಲು ಉಪಯೋಗಿಸುತ್ತಿದ್ದರು.

ಅಲ್ಲಿಂದ ಆರೇಳು ವರ್ಷ ನನಗೆ ಅವರ ಸಂಪರ್ಕವಿರಲಿಲ್ಲ. ಪುನಃ ನಾನು ಅವರನ್ನು ಕಂಡು ಅವರೊಡನೆ ಒಡನಾಟ ಪ್ರಾರಂಭಿಸಿದುದು ೧೯೪೮–೪೯ರಲ್ಲಿ. ಆ ವೇಳೆಗೆ ಅವರ ಜೀವನದಲ್ಲಿಯೂ ನನ್ನ ಜೀವನದಲ್ಲಿಯೂ ಸಾಕಷ್ಟು ಬೆಳವಣಿಗೆಗಳಾಗಿದ್ದುವು.

ಭಾರತಕ್ಕೆ ಸ್ವಾತಂತ್ರ್ಯ ಬಂದು ಪಂಡಿತ ಜವಾಹರಲಾಲ್ ನೆಹ್ರು ಅವರು ಮೊದಲ ಪ್ರಧಾನ ಮಂತ್ರಿಯಾದದ್ದು ೧೯೪೭ರ ಆಗಸ್ಟ್‌ನಲ್ಲಿ ತಾನೆ. ಆ ವೇಳೆಗೆ ಎಂ. ಎಸ್. ಕೃಷ್ಣನ್ ಅವರು ಒಬ್ಬ ಮುಖಂಡರಾಗಿದ್ದ ಭಾರತದ ಕಮ್ಯುನಿಸ್ಟ್ ಪಕ್ಷವು "ನೆಹ್ರು ಸರ್ಕಾರಕ್ಕೆ ಸಂಪೂರ್ಣ ಬೆಂಬಲ" ಎಂಬ ಧೋರಣೆಯನ್ನು ತಳೆಯಿತು. ಅಲ್ಲಿಂದ ಆರು ತಿಂಗಳ ತರುವಾಯ, ೧೯೪೮ರ ಫೆಬ್ರವರಿಯಲ್ಲಿ ಕಲ್ಕತ್ತೆಯಲ್ಲಿ ನಡೆದ ಆ ಪಕ್ಷದ ಅಧಿವೇಶನದಲ್ಲಿ ದೀರ್ಘ ಚರ್ಚೆ ನಡೆದು, ಪಕ್ಷವು ತನ್ನ ಧೋರಣೆಯನ್ನು ಬದಲಾಯಿಸಿತು. ವಾಸ್ತವವಾಗಿ ಸ್ವಾತಂತ್ರ್ಯ ದೊರೆತಿರುವುದು ಭಾರತದ ಜನತೆಗಲ್ಲ, ವಿದೇಶೀ ಬಂಡವಾಳಗಾರರಿಂದ ಭಾರತೀಯ ಬಂಡವಾಳ ಗಾರರಿಗೆ ಅಧಿಕಾರ ಹಸ್ತಾಂತರವಾಗಿದೆ, ಅಷ್ಟೆ; ನಮ್ಮ ದೇಶದ ಕಾರ್ಮಿಕ ವರ್ಗಕ್ಕೆ ಅಧಿಕಾರ ದೊರೆತಾಗ ಮಾತ್ರ ನಮ್ಮ ಗುರಿಯಾದ ಸಮಾಜವಾದೀ ವ್ಯವಸ್ಥೆಯ ನಿರ್ಮಾಣ ಸಾಧ್ಯ; ಆದುದರಿಂದ ನಮ್ಮ ಕಾರ್ಮಿಕವರ್ಗಕ್ಕೆ ಅಧಿಕಾರ ದೊರೆಯುವವರೆಗೂ ಹೋರಾಟವನ್ನು ಮುಂದುವರಿಸಬೇಕು ಎಂಬ ನಿಲವನ್ನು ತಳೆಯಿತು.

ಅದರ ಪರಿಣಾಮವಾಗಿ ಭಾರತ ಸರ್ಕಾರ ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸುವ ಯೋಚನೆಯನ್ನು ಮಾಡಿತು. ಅನಂತರ ಆ ಕ್ರಮದ ಯುಕ್ತಾಯುಕ್ತತೆಯ ಬಗ್ಗೆ ಪರ್ಯಾಲೋಚಿಸಿ, ಪಕ್ಷವನ್ನು ನಿಷೇಧಿಸುವುದು ಬೇಡವೆಂದೂ ಪಕ್ಷದ ಮುಖಂಡರನ್ನು ನಿರೋಧಕ ಬಂಧನದಲ್ಲಿಡುವುದು ಯುಕ್ತವೆಂದೂ ನಿರ್ಧರಿಸಿತು. ಆ ಬಗ್ಗೆ ಸುಳಿವು ಸಿಕ್ಕ ಕೂಡಲೇ ಎಂ. ಎಸ್. ಕೃಷ್ಣನ್ ಅವರೂ ಒಳಗೊಂಡಂತೆ ಪಕ್ಷದ ಮುಖಂಡರೆಲ್ಲರೂ ತಲೆಮರೆಸಿ ಕೊಂಡು ಭೂಗತರಾದರು.

ನಾನು ಹಿಂದೆಯೇ ಹೇಳಿದಂತೆ, ಆ ವೇಳೆಗೆ ನನ್ನ ಜೀವನದಲ್ಲಿಯೂ ಸಾಕಷ್ಟು ಬೆಳವಣಿಗೆಗಳು ಸಂಭವಿಸಿದ್ದುವು. ನಾನು ಎಂ.ಎಸ್‌ಸಿ. ಡಿಗ್ರಿ ಪಡೆದು ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದು, ಜೊತೆಜೊತೆಗೇ ವಿಜ್ಞಾನ, ವಿಜ್ಞಾನ ವಿಧಾನ, ವೈಜ್ಞಾನಿಕ ಮನೋಭಾವ ಮುಂತಾದ ವಿಷಯಗಳಲ್ಲಿ ಆಸಕ್ತನಾಗಿ ಜನಪ್ರಿಯ ವಿಜ್ಞಾನ ಲೇಖಕರಾದ ಜೆ. ಡಿ. ಬರ್ನಾಲ್, ಜೆ. ಬಿ. ಎಸ್. ಹಾಲ್ಡೇನ್, ಹೈಮಾನ್ ಲೆವಿ, ಮುಂತಾದವರ ಪುಸ್ತಕಗಳನ್ನೂ ಲೇಖನಗಳನ್ನೂ ಓದಿ ಮಾರ್ಕ್ಸ್‌ವಾದದಲ್ಲಿ ಆಸಕ್ತನಾದೆ. ಅದರ ಪರಿಣಾಮವಾಗಿ ಭೂಗತರಾಗಿದ್ದ ಸ್ಥಳೀಯ ಕಮ್ಯುನಿಸ್ಟ್ ಮುಖಂಡರೊಡನೆ ಒಡನಾಟ ಪ್ರಾರಂಭಿಸಿದೆ. ಪರಿಣಾಮವಾಗಿ ಪುನಃ ಎಂ. ಎಸ್. ಕೃಷ್ಣನ್ ನನ್ನ ಸ್ನೇಹಿತರಾದರಲ್ಲದೆ, ಇತರ ಭೂಗತ ಕಮ್ಯುನಿಸ್ಟ್ ಮುಖಂಡರಾದ ಎಂ. ಸಿ. ನರಸಿಂಹನ್, ಕುಳಕುಂದ ಶಿವರಾವ್, ಸಿ. ಬಿ. ಮೋಟಯ್ಯ, ಎನ್. ಎಲ್. ಉಪಾಧ್ಯಾಯ ಮುಂತಾದವರೂ ನನ್ನ ಸ್ನೇಹಿತರಾದರು. ಆಗ ನಾನು ಅಧ್ಯಾಪಕನಾಗಿದ್ದುದು ಸೆಂಟ್ರಲ್ ಕಾಲೇಜಿನಲ್ಲಿ ಎಂದು ಹೇಳಿದೆನಷ್ಟೆ. ಆ ಕಾಲೇಜು ಮೈಸೂರು ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಒಳಪಟ್ಟಿತ್ತು. ಆಗ ಆ ವಿಶ್ವವಿದ್ಯಾನಿಲಯಕ್ಕೆ ಈಗಿರುವಂತೆ ಸೀಮಿತ

**ಪ್ರೊ॥ ಜೆ. ಆರ್. ಲಕ್ಷ್ಮಣ ರಾವ್**

ಸ್ವಯಮಾಡಳಿತ ವ್ಯವಸ್ಥೆಯೂ ಇಲ್ಲದೆ ಸರ್ಕಾರದ ಒಂದು ಇಲಾಖೆಯಂತೆ ಕೆಲಸ ಮಾಡುತ್ತಿತ್ತು. ಆದುದರಿಂದ ನಾನೊಬ್ಬ ಸರ್ಕಾರೀ ನೌಕರನಾಗಿದ್ದೆ. ಸರ್ಕಾರೀ ನೌಕರನಾದವನು ಭೂಗತ ವ್ಯಕ್ತಿಗಳೊಡನೆ ವ್ಯವಹರಿಸುವುದು ಬಹಳ ಅಪಾಯಕರ. ಆದರೂ ನಾನು ಅದನ್ನು ಲೆಕ್ಕಿಸದೆ ಭೂಗತ ವ್ಯಕ್ತಿಗಳೊಡನೆ ವ್ಯವಹಾರ ಮುಂದುವರಿಸಿದೆ.

ಕಾಕತಾಳೀಯವಾಗಿ ಆಗ ಭೂಗತರಾಗಿದ್ದ ಎಂ. ಎಸ್. ಕೃಷ್ಣನ್ ಅವರು ಆಶ್ರಯ ಪಡೆದಿದ್ದುದು ನಮ್ಮ ಮಾವನವರಾದ ಗಿರಿಮಾಜಿ ಗೋವಿಂದರಾಯರ ಮನೆಯಲ್ಲಿ. ಬೆಂಗಳೂರು ಬಸವನಗುಡಿ ಬಡಾವಣೆಯ ಶ್ರೀರಾಮ ಮಂದಿರಂ ರಸ್ತೆಯ ಉತ್ತರ ದಿಕ್ಕಿನ ತುದಿಯಲ್ಲಿ ಆಗ ಇದ್ದ ಒಂದು ಎರಡಂತಸ್ತಿನ ಮನೆಯಲ್ಲಿ ನಮ್ಮ ಮಾವನವರು ವಾಸ ಮಾಡುತ್ತಿದ್ದರು. ಆ ಮನೆಯ ಮಹಡಿಯಲ್ಲಿದ್ದ ಒಂದು ಚಿಕ್ಕ ಕೊಠಡಿಯಲ್ಲಿ ಕೃಷ್ಣನ್ ವಾಸಿಸುತ್ತಿದ್ದರೂ ದಿನವೆಲ್ಲ ಸ್ನಾನ, ಊಟ, ತಿಂಡಿ, ಓದು, ಮುಂತಾದುದರಲ್ಲಿ ಕಾಲ ಕಳೆಯುತ್ತಿದ್ದು ಸಂಜೆ ಏಳು ಗಂಟೆಯ ವೇಳೆಗೆ ವೇಷ ಬದಲಾಯಿಸಿಕೊಂಡು, ಗಾಂಧಿ ಟೋಪಿ, ಸಾದಾ ಗಾಜಿನ ಕನ್ನಡಕ ಹಾಕಿಕೊಂಡು ಸೈಕಲ್ ಮೇಲೆ ಹೋಗಿ ಇತರ ಭೂಗತ ಕಮ್ಯುನಿಸ್ಟ್ ಮುಖಂಡರೊಡನೆ ವ್ಯವಹರಿಸುತ್ತಿದ್ದರು.



ಯಾವ ಜಾತಿ ಬರೆಸಿದರೆ ಲೋನ್ ಕೊಡ್ತೀರೋ ಆ ಜಾತಿ ಬರೆದುಕೊಳ್ಳಿ ಸಾರ್..!

ನಾನೂ ಆಗ ಬಸವನಗುಡಿಯಲ್ಲಿಯೇ ನೂರಿನ್ನೂರು ಮೀಟರ್ ದೂರದಲ್ಲಿದ್ದ ಮನೆಯಲ್ಲಿ ವಾಸಿಸುತ್ತಿದ್ದುದರಿಂದ ಆಗಾಗ ನಮ್ಮ ಮಾವನವರ ಮನೆಗೆ ಹೋಗಿ ಕೃಷ್ಣನ್ ಅವರೊಡನೆ ಮಾತುಕತೆ ನಡೆಸುತ್ತಿದ್ದೆ. ಅದು ನನ್ನನ್ನು ಇನ್ನೂ ಅಪಾಯಕರವಾದ ಸನ್ನಿವೇಶಗಳಿಗೆ ಎಳೆದೊಯ್ಯಿತು.

ಕಮ್ಯುನಿಸ್ಟ್ ಪಕ್ಷದ ಕರ್ನಾಟಕ ಪ್ರಾಂತೀಯ ಸಮಿತಿಯು ಒಮ್ಮೆ ಎರಡು ಮೂರು ದಿನಗಳ ಕಾಲ ಒಂದೆಡೆ ಕುಳಿತು ಕೆಲವು ವಿಷಯಗಳ ಬಗ್ಗೆ ವ್ಯಾಪಕ ಚರ್ಚೆ ನಡೆಸಲು ನಿರ್ಧರಿಸಿತು. ಅದಕ್ಕೆ ಏರ್ಪಾಟು ಮಾಡಲು ಕೃಷ್ಣನ್ ಅವರು ನನ್ನ ನೆರವು ಕೋರಿದರು. ಬಸವನಗುಡಿಯಲ್ಲಿಯೇ ನಮ್ಮ ಮನೆ ಮತ್ತು ನಮ್ಮ ಮಾವನವರ ಮನೆಗಳಿಂದ ನೂರಿನ್ನೂರು ಮೀಟರ್ ದೂರದಲ್ಲಿದ್ದ ಸ್ನೇಹಿತರೊಬ್ಬರ ಮನೆಯ ಹಿಂಭಾಗದಲ್ಲಿದ್ದ ವಿಶಾಲವಾದ ಕೊಠಡಿಯಲ್ಲಿ ಅದಕ್ಕೆ ಏರ್ಪಾಟು ಮಾಡಲಾಯಿತು. ಕರ್ನಾಟಕದ ಬೇರೆ ಬೇರೆ ಕಡೆಗಳಿಂದ ಬಂದಿದ್ದ ಹತ್ತು ಹನ್ನೆರಡು ಕಮ್ಯುನಿಸ್ಟ್ ಮುಖಂಡರು ಎರಡು ಮೂರು ದಿನ ಆ ಕೊಠಡಿಯಲ್ಲೇ ಇರಬೇಕಾಯಿತು. ಅವರೆಲ್ಲರಿಗೂ ಅಲ್ಲಿಯೇ ಸ್ನಾನ, ಊಟ, ತಿಂಡಿ ಎಲ್ಲದಕ್ಕೂ ಏರ್ಪಾಟು ಮಾಡಲಾಯಿತು. ಅದಕ್ಕೆ ನಾನು ನೆರವು ನೀಡಬೇಕಾಯಿತು.

ಆ ಸಂಬಂಧದಲ್ಲಿ ಪ್ರತಿನಿತ್ಯ ಬೆಳಿಗ್ಗೆ ಒಮ್ಮೆ, ಸಂಜೆ ನಾನು ಕಾಲೇಜಿನಿಂದ ಮನೆಗೆ ಬಂದಾಗ ಒಮ್ಮೆ ಅಲ್ಲಿಗೆ ಹೋಗುತ್ತಿದ್ದೆ; ಅವರೊಡನೆ ಹತ್ತು ಹದಿನೈದು ನಿಮಿಷ ಕಾಲ ಕಳೆಯುತ್ತಿದ್ದೆ. ಹಾಗೆ ಅಲ್ಲಿಗೆ ಒಮ್ಮೆ ಹೋದಾಗ ಎಂ. ಎಸ್. ಕೃಷ್ಣನ್ ಅವರೂ ಅಂದಿನ ಪ್ರಾಂತೀಯ ಸಮಿತಿಯ ಕಾರ್ಯದರ್ಶಿಯಾಗಿದ್ದ ಎನ್. ಎಲ್. ಉಪಾಧ್ಯಾಯ ಅವರೂ "ನೀವು ನಮಗೊಂದು ಉಪಕಾರ ಮಾಡಬೇಕಾಗಿದೆ" ಎಂದರು. "ಕರ್ನಾಟಕದ ಹೊರಗಿನಿಂದ ಬಂದಿರುವ ಇಬ್ಬರೂ ಕಾಮ್ರೇಡ್‌ಗಳು ಜಯಚಾಮರಾಜೇಂದ್ರ ರಸ್ತೆಯಲ್ಲಿರುವ ಕೆ. ವಿ. ಅಯ್ಯರ್ ಅವರ ವ್ಯಾಯಾಮ ಶಾಲೆಯ ಅತಿಥಿಗೃಹದ ಒಂದು ಕೊಠಡಿಯಲ್ಲಿದ್ದಾರೆ. ಅವರನ್ನು ನಮ್ಮ ಪ್ರಾಂತೀಯ ಸಮಿತಿಯ ಸಭೆ ನಡೆಯುತ್ತಿರುವಲ್ಲಿಗೆ ಕರೆತರಬೇಕು" ಎಂದರು. ಅವರು ಒಪ್ಪಿಸಿದ ಕೆಲಸ ಸರ್ಕಾರೀ ನೌಕರನಾಗಿದ್ದ ನನಗೆ ಎಷ್ಟು ಅಪಾಯಕರವಾದುದು ಎಂಬುದನ್ನು ಅರಿಯದೆ ಒಪ್ಪಿಗೆ ಕೊಟ್ಟು, ಅವರು ನನಗೆ ಒಪ್ಪಿಸಿದ ಕೆಲಸವನ್ನು ನಿರ್ವಹಿಸಿದೆ. ನಾನು ಹಾಗೆ ಕರೆತಂದದ್ದು ಯಾರನ್ನು ಎಂಬುದು ಮೂರು ನಾಲ್ಕು ದಿನಗಳ ಮೇಲೆ ನನಗೆ ಗೊತ್ತಾಯಿತು. ಹೈದರಾಬಾದ್ ಸಂಸ್ಥಾನದಲ್ಲಿ ನಡೆದ ರೈತರ ಹೋರಾಟದ ಫಲವಾಗಿ ತೆಲಂಗಾಣದ ಮೂರು ನಾಲ್ಕು ಜಿಲ್ಲೆಗಳಲ್ಲಿ ನಿಜಾಮರ ಆಡಳಿತ ಕುಸಿದುಬಿದ್ದು, ನಿಷ್ಕ್ರಿಯಗೊಂಡು, ಗ್ರಾಮ ರಾಜ್ಯಗಳು ಅಸ್ತಿತ್ವಕ್ಕೆ ಬಂದಿದ್ದವಷ್ಟೆ. ಆ ರೈತರ ಚಳವಳಿಯ ಅತ್ಯುನ್ನತ ನಾಯಕರು ಎನ್ನಿಸಿಕೊಂಡಿದ್ದ ರವಿನಾರಾಯಣ ರೆಡ್ಡಿ ಮತ್ತು ಬದ್ದಮ್ ಯಲ್ಲಾರೆಡ್ಡಿಯವರನ್ನೇ ನಾನು ಹಾಗೆ ಕರೆದುಕೊಂಡು ಬಂದದ್ದು. ೧೯೪೮ರ ಸೆಪ್ಟೆಂಬರ್‌ನಲ್ಲಿ ನಿಜಾಮರು ಶರಣಾಗತರಾದ ಮೇಲೆ, ಭಾರತ ಸರ್ಕಾರದ ಕೈಗೆ ಆಡಳಿತ ಬಂದಾಗ ತೆಲಂಗಾಣದ ಆ ಇಬ್ಬರು ನಾಯಕರ ಬಂಧನಕ್ಕಾಗಿ ವ್ಯಾಪಕವಾದ ಜಾಲವನ್ನು ಬೀಸಲಾಗಿತ್ತು. ಅವರ ಬಂಧನಕ್ಕೆ ಅಗತ್ಯವಾದ ಸುಳಿವು ನೀಡಿದವರಿಗೆ ಒಂದು ಲಕ್ಷ ರೂಪಾಯಿ ಬಹುಮಾನವನ್ನು ಘೋಷಿಸಿದ್ದರು. ಗೆರಿಲ್ಲಾ ಮಾದರಿ ಹೋರಾಟ ನಡೆಸುತ್ತಿದ್ದ ಆ ನಾಯಕರಿಬ್ಬರೂ ಭಾರತ ಸರ್ಕಾರದ ಕಣ್ಣು ತಪ್ಪಿಸಿ ಬೆಂಗಳೂರಿಗೆ ಬಂದು ವಿಶ್ರಾಂತಿ ಮತ್ತು ಆರೋಗ್ಯ ಸುಧಾರಣೆಗಾಗಿ ಸುಳ್ಳು ಹೆಸರುಗಳಲ್ಲಿ ಕೆ. ವಿ. ಅಯ್ಯರ್ ಅವರ ವ್ಯಾಯಾಮ ಶಾಲೆಯ ಅತಿಥಿಗೃಹದಲ್ಲಿ ತಂಗಿದ್ದು ಚಿಕಿತ್ಸೆ ಪಡೆಯುತ್ತಿದ್ದರು. ನಾನು ಅವರಿಬ್ಬರನ್ನೂ ಕಮ್ಯುನಿಸ್ಟ್ ಪಕ್ಷದ ಪ್ರಾಂತೀಯ ಸಮಿತಿಯ ಸಭೆ ನಡೆಯುತ್ತಿದ್ದಲ್ಲಿಗೆ ಕರೆತಂದ ಬೆಳಿಗ್ಗೆಯಷ್ಟೇ "ಪೊಲೀಸರ ಮತ್ತು ತೆಲಂಗಾಣ ರೈತರ ನಡುವೆ ನಡೆದ ಗುಂಡಿನ ಕಾಳಗದಲ್ಲಿ ರವಿನಾರಾಯಣ ರೆಡ್ಡಿ ಹತರಾದರೆಂದು ನಂಬಲಾಗಿದೆ" ಎಂಬ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು.

ಇದೆಲ್ಲ ನಡೆದ ಕೆಲವು ತಿಂಗಳಲ್ಲಿಯೇ ನಾನು ಬೆಂಗಳೂರಿಂದ ವರ್ಗವಾಗಿ ಶಿವಮೊಗ್ಗಕ್ಕೆ ಹೋಗಿ ಅಲ್ಲಿಂದ ಮೈಸೂರಿಗೆ ಬಂದೆನಾದುದರಿಂದ ಅನೇಕ ವರ್ಷಗಳ ಕಾಲ ನಾನು ಎಂ. ಎಸ್. ಕೃಷ್ಣನ್ ಅವರನ್ನು ಭೇಟಿಯಾಗಲೇ ಇಲ್ಲ. ನವಕರ್ನಾಟಕ ಪಬ್ಲಿಕೇಷನ್ಸ್‌ರವರು ಏರ್ಪಡಿಸಿದ್ದ ಯಾವುದೋ ಪುಸ್ತಕ ಬಿಡುಗಡೆಯ ಸಮಾರಂಭಕ್ಕಾಗಿ ನಾನು ಬೆಂಗಳೂರಿಗೆ ಬಂದು ವೇದಿಕೆಯ ಮೇಲೆ ಕುಳಿತಿದ್ದಾಗ ಎಂ. ಎಸ್. ಕೃಷ್ಣನ್ ಅವರು ಬಂದು ಹಿಂದಿನ ಸಾಲಿನಲ್ಲಿ ಕುಳಿತರು. ಅವರ ಅಂದಿನ ಸ್ಥಿತಿಯನ್ನು ಕಂಡು ನನಗೆ ದುಃಖ ಉಮ್ಮಳಿಸಿತು. ಏಕೆಂದರೆ ಅವರ ಧ್ವನಿತಂತುಗಳಿಗೆ ಏನೋ ಘಾಸಿಯಾಗಿ ಅವರು ಮಾತನಾಡುವ ಶಕ್ತಿಯನ್ನು ಕಳೆದುಕೊಂಡಿದ್ದರು. ಅಲ್ಲಿಂದ ಒಂದೆರಡು ವರ್ಷಗಳಲ್ಲಿ ಅವರು ಗತಿಸಿದರು.

**ಪ್ರೊ॥ ಜೆ. ಆರ್. ಲಕ್ಷ್ಮಣ ರಾವ್**
'ಮೈತ್ರಿ', ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ
ಮೈಸೂರು – ೫೭೦ ೦೦೯

### ಅಭಿನಂದನೆಗಳು

ಶಿವಮೊಗ್ಗದ ಕರ್ನಾಟಕ ಸಂಘವು ಪ್ರತಿವರ್ಷ ಕೊಡ ಮಾಡುವ ಪುಸ್ತಕ ಬಹುಮಾನವು ೨೦೧೪ನೇ ಸಾಲಿನ 'ಹಸೂಡಿ ವೆಂಕಟಶಾಸ್ತ್ರಿ ಪ್ರಶಸ್ತಿ'ಯು ಶ್ರೀ ರೋಹಿತ್ ಚಕ್ರತೀರ್ಥ ಅವರ 'ಗಣಿತ ಕುತೂಹಲ' ಕೃತಿಗೆ ಹಾಗೂ 'ಪಿ. ಲಂಕೇಶ್ ಪ್ರಶಸ್ತಿ'ಯು ಶ್ರೀ ಅಬ್ದುಲ್ ರೆಹಮಾನ್ ಪಾಷ ಅವರ 'ನಂಬಿಕೆ, ಮೂಢನಂಬಿಕೆ, ವೈಜ್ಞಾನಿಕ ಮನೋವೃತ್ತಿ' ಕೃತಿಗೆ ದೊರೆತಿದೆ. ಇವೆರಡೂ ಕೃತಿಗಳು ನವಕರ್ನಾಟಕದಿಂದ ಪ್ರಕಟಗೊಂಡಿವೆ. ಲೇಖಕರಿಬ್ಬರಿಗೂ 'ಹೊಸತು' ಹಾಗೂ 'ನವಕರ್ನಾಟಕ' ಬಳಗದಿಂದ ಹಾರ್ದಿಕ ಅಭಿನಂದನೆಗಳು.

ಬಿಳುಮನೆ ರಾಮದಾಸ್

ತಿಂಗಳ ಕಥೆ

# ಸ್ಥಿತಪ್ರಜ್ಞ

ವೆಂಕಟಪ್ಪನವರು ಬೆಳಗ್ಗಿನ ಜಾವದ ಸಿಹಿ ನಿದ್ದೆಯಲ್ಲಿದ್ದರು. ಅಜಾತಶತ್ರುವಾಗಿದ್ದ ಅವರು ಜೀವನದಲ್ಲಿ ಅನೇಕ ಕಷ್ಟನಷ್ಟವನ್ನು ಅನುಭವಿಸಿದ್ದರು. ಯಾವುದನ್ನೂ ತಲೆಗೆ ಹಚ್ಚಿಕೊಳ್ಳದ ಅವರು 'ಬಂದದ್ದೆಲ್ಲ ಬರಲಿ ಗೋವಿಂದನ ದಯೆಯೊಂದು ಇರಲಿ' ಎಂದು ಸ್ಥಿತಪ್ರಜ್ಞರಾಗಿ ನಗುನಗುತ್ತಲೆ ಜೀವನ ಸಾಗಿಸಿದ್ದರು. ಸದಾ ಏನನ್ನಾದರು ಓದುತ್ತಲೋ ಉದ್ಯಾನವನದಲ್ಲಿ ವಿಹಾರ ಮಾಡುತ್ತಲೋ ಕಾಲ ಹಾಕುತ್ತಿದ್ದರು. ಎಷ್ಟೆಲ್ಲ ನೋವುಗಳಿದ್ದರೂ ಅವರಿಗೆ ಸುಖನಿದ್ದೆ ಬರುವುದಾದರೂ ಹೇಗೆ ಎಂದು ಬಂಧು–ಬಳಗ ಆಶ್ಚರ್ಯಪಟ್ಟಿದ್ದರು. ಹಿರಿಯ ಸರ್ಕಾರಿ ಅಧಿಕಾರಿ ಆಗಿ ನಿವೃತ್ತಿಯಾಗಿದ್ದವರು ಸರ್ಕಾರಿ ಸೇವೆಯಲ್ಲಿದ್ದಾಗ ಬಹಳ ಜನರಿಗೆ ಸಹಾಯ ಮಾಡಿದ್ದರು. ಅವರಿಂದ ಸಹಾಯ ಪಡೆದ ಕೆಲವರು ಅವರನ್ನು ನೆನೆಸಿಕೊಳ್ಳುತ್ತಿದ್ದರು. ಇನ್ನು ಕೆಲವರಿಗೆ ಕೃತಜ್ಞತೆ ಎಂಬುದು ಇರಲಿಲ್ಲ. ವೆಂಕಟಪ್ಪನವರು ಎಲ್ಲರನ್ನು ಸಮಾನ ದೃಷ್ಟಿಯಲ್ಲಿ ನೋಡಿದ್ದರು. ಅವರು ಸುಖನಿದ್ದೆಯಲ್ಲಿದ್ದಾಗಲೆ ಸೊಸೆ ಜಾನಕಿ ಅವರ ರೂಮಿನ ಬಾಗಿಲು ತಟ್ಟಿದಳು. ಎಚ್ಚರಗೊಂಡ ಅವರು "ಬಂದೆಯಮ್ಮ" ಎಂದು ಗೋಡೆಯ ಮೇಲೆ ತೂಗುಹಾಕಿದ್ದ ರಾಮಕೃಷ್ಣ ಪರಮಹಂಸ, ಶಾರದಾಮಾತೆ, ಸ್ವಾಮಿ ವಿವೇಕಾನಂದರ ಫೋಟೋ ನೋಡಿ 'ಬಂದದ್ದೆಲ್ಲ ಬರಲಿ. ಗೋವಿಂದನ ದಯೆಯೊಂದು ಇರಲಿ' ಎಂದು ಕೈಮುಗಿದು ಎದ್ದರು. ಸೊಸೆ ಜಾನಕಿ ಎಂದೂ ಹಾಗೆ ಬಾಗಿಲು ಬಡಿದಿರಲಿಲ್ಲ. ಏನಾದರೂ ಅನಾಹುತವಾದಾಗ ಮಾತ್ರ ಬಾಗಿಲು ಬಡಿದು ಅವರನ್ನು ಎಬ್ಬಿಸುತ್ತಿದ್ದಳು. ಅಂದೂ ಏನೋ ಅನಾಹುತವಾಗಿರಬೇಕೆಂದು ಅವರು ತಿಳಿದರು. ಬಾಗಿಲು ತೆಗೆದು "ಏನಮ್ಮ?" ಕೇಳಿದರು. ಜಾನಕಿ ಅಳುತ್ತಿದ್ದಳು.

"ಯಾಕೆ ಅಳತಿದಿಯಾ ? ಏನಾಯಿತು ?" ಕೇಳಿದರು.

"ನಿಮ್ಮ ಮಗ ಹೋದರು"

"ಹೋದನಾ ? ಅದು ಸ್ವಯಂಕೃತ ಅಪರಾಧ. ನೀನು ದುಃಖಪಡಬೇಕಾದ ಅವಶ್ಯಕತೆ ಇಲ್ಲ. ನಿನ್ನ ತವರುಮನೆಯವರಿಗೆ ತಿಳಿಸು. ಶವಸಂಸ್ಕಾರಕ್ಕೆ ಯಾರಿಗೂ ಕಾಯೋದು ಬೇಡ" ಎನ್ನುತ್ತ ವೆಂಕಟಪ್ಪನವರು ಮಗ ಮಲಗಿದ ರೂಮಿಗೆ ಹೋದರು. ಜಾನಕಿ ಹಿಂಬಾಲಿಸಿದಳು. ರಾಜೇಂದ್ರ ಅಂಗಾತವಾಗಿ ಕಣ್ಣುಬಿಟ್ಟುಕೊಂಡು ಮಲಗಿದ್ದ. ಆ ರೂಮಿಗೆ ತಂದೆ ಕಾಲಿಡದೆ ಬಹಳ ವರ್ಷವಾಗಿತ್ತು. ಮಗನ ಹವ್ಯಾಸದಿಂದ ಅವರು ರೋಸಿಹೋಗಿದ್ದರು. ಟೇಬಲ್ಲಿನ ಮೇಲೆ ವಿಸ್ಕಿ ಬಾಟಲಿ, ಖಾಲಿ ಲೋಟ ಇದ್ದವು. ಸೊಸೆಗೆ ಏನೂ ಕೇಳಬೇಕೆಂದೆನಿಸಲಿಲ್ಲ ಅವರಿಗೆ. ಆಕೆ ಕುಡಿತದ ಚಟದಿಂದ ದೂರವಿರಲು ಗಂಡನಿಗೆ ಹೇಳಿ ಹೇಳಿ ಸುಸ್ತಾಗಿ ಮೌನಕ್ಕೆ ಶರಣಾಗಿದ್ದಳು. ಗಂಡ–ಹೆಂಡತಿಯರ ನಡುವೆ ಮಾತುಕತೆ ಕಡಿಮೆಯಾಗಿತ್ತು. ಅಷ್ಟೇಕೆ ? ತಂದೆ ಮಗನ ನಡುವೆಯೂ ಮಾತುಕತೆ ಕಡಿಮೆಯಾಗಿತ್ತು. ಮಗ ರಾತ್ರಿ ಕುಡಿದು ತಡವಾಗಿ ಬಂದು ಕಾಲಿಂಗ್‌ಬೆಲ್ ಬಾರಿಸಿದಾಗ ತಂದೆಯೆ ಎದ್ದುಹೋಗಿ ಕಿಟಕಿಯಲ್ಲಿ ನೋಡಿ ಬಾಗಿಲು ತೆರೆದು ಮಗನೊಂದಿಗೆ ಮಾತಾಡದೆ ಹೋಗಿಬಿಡುತ್ತಿದ್ದರು.

"ಎಷ್ಟೊತ್ತಿಗೆ ಹೋದನಮ್ಮ ?"

"ಗೊತ್ತಾಗಲಿಲ್ಲ. ನಾನು ಎದ್ದು ನೋಡುವಾಗ ಹೀಗೆ ಇದ್ದರು. ಮಧ್ಯರಾತ್ರಿ ಹೋಗಿರಬೇಕು."

"ಹೋಗಲಿಬಿಡು. ಇನ್ನಾದರು ನಿನಗೆ ಸುಖಸಿಗಲಿ"

ವೆಂಕಟಪ್ಪನವರು ಮಗನ ಕಣ್ಣು ಮುಚ್ಚಿದರು. ತಂದೆಗೆ ದುಃಖವಾಗದಿದ್ದುದು ಸೊಸೆಗೆ ಆಶ್ಚರ್ಯವಾಗಲಿಲ್ಲ. ಹೆಂಡತಿ ಸತ್ತಾಗ ಮತ್ತೊಬ್ಬ ಮಗ ಸತ್ತಾಗಲೂ ಅವರು ದುಃಖಿಸದಿದ್ದುದನ್ನು ಅವಳು ಕಂಡಿದ್ದಳು. ಏಕಮಾತ್ರ ಪುತ್ರಿ ಸಂನ್ಯಾಸ ಸ್ವೀಕರಿಸಿ ಆಶ್ರಮ ಸೇರುವಾಗ ಅವರು ಸಂತೋಷದಿಂದಲೇ ಒಪ್ಪಿಕೊಂಡಿದ್ದರು. ತಾಯಿಗೆ ಮಾತ್ರ ದುಃಖವಾಗಿ ಕಣ್ಣೀರ ಕೋಡಿ ಹರಿಸಿದ್ದುದನ್ನು ಸೊಸೆ ನೋಡಿದ್ದಳು. ಎಲ್ಲ ತಾಯಂದಿರಂತೆ ಮಗಳು ಮದುವೆಯಾಗಿ ಮಕ್ಕಳು ಪಡೆಯುವುದನ್ನು ಅತ್ತೆ ಇಷ್ಟಪಟ್ಟಿದ್ದರು ಎಂಬುದು ಅವಳಿಗೆ ತಿಳಿದಿತ್ತು.

"ನಾನು ಎದುರುಗಡೆ ಪಾರ್ಕಿಗೆ ವಾಕಿಂಗ್ ಹೋಗಿ ಬರತೀನಿ. ನೆಂಟರಿಷ್ಟರು ಬಂದಮೇಲೆ ಬಾಡಿ ಹೊರಗಡೆ ಸಾಗಿಸೋಣ" ವೆಂಕಟಪ್ಪನವರು ಎಂದರು.

"ನೆಂಟರಿಷ್ಟರಿಗೆ ತಿಳಿಸಿದರೆ ಅವರು ಬರತಿದ್ದರು ಶವಸಂಸ್ಕಾರ ಮಾಡಲಿಕ್ಕೆ" ಜಾನಕಿ ಎಂದಳು.

"ಬೆಂಗಳೂರಲ್ಲಿ ಇದ್ದವರಿಗೆ ತಿಳಿಸೋಣ. ಹೊರಗಡೆಯವರಿಗೆ ಊರು

ಯಾಕೆ ಸತ್ತ ಅಂದ್ರೆ ಶಿಸ್ತಿನ ಜೀವನ ಇಲ್ಲ. ಸಿಕ್ಕಾಪಟ್ಟೆ ಕುಡಿಯೋದು ಮಾಂಸ ತಿನ್ನೋದು. ಒಂದು ವ್ಯಾಯಾಮ ಇಲ್ಲ. ಒಂದು ವಾಕಿಂಗ್ ಇಲ್ಲ. ಹೊತ್ತು ಗೊತ್ತು ಇಲ್ಲದೆ ಮನೇಗೆ ಬರೋದು ಹೋಗೋದು. ಇನ್ನೇನು ಆಗುತ್ತೆ ಹೇಳು. ಊರಲ್ಲಿ ಅವನಣ್ಣ ಮಾಡಿದ್ದು ಅದೇ ಕತೆ ತಾನೆ. ಅದೆಲ್ಲ ಮಾತಾಡಿ ಪ್ರಯೋಜನ ಇಲ್ಲ. ನೀನು ಬೇಗ ಬಾ. ಬಹಳ ಹೊತ್ತು ಹೆಣ ಇಟಕೊಳ್ಳೋದು ನಂಗೆ ಇಷ್ಟವಿಲ್ಲ. ಊರಿಗೆ ಯಾರಿಗೂ ಫೋನ್ ಮಾಡಬೇಡ. ಊರಿಂದ ಯಾರೂ ಬರೋದು ಬೇಡ.



ಮನೆಯವರಿಗೆ ತಿಳಿಸೋದು ಬೇಡ. ಅವರು ಬರೋತಂಕ ಹೆಣ ಇಟಕೊಳ್ಳಾಕೆ ಆಗಲ್ಲ."

ಮಾವನವರ ಸ್ವಭಾವ ತಿಳಿದ ಜಾನಕಿ ಮಾತನಾಡಲಿಲ್ಲ. ವೆಂಕಟಪ್ಪನವರು ಸೊಸೆಯ ಉತ್ತರಕ್ಕೆ ಕಾಯದೆ ಬೆಂಗಳೂರಿನಲ್ಲಿಯೆ ಇದ್ದ ಇ.ಎನ್.ಟಿ. ತಜ್ಞ ಡಾಕ್ಟರ್ ಸಹೋದರ ಕೃಷ್ಣಪ್ಪನವರಿಗೆ ಫೋನು ಹಚ್ಚಿ ವಿಷಯ ತಿಳಿಸಿದರು. ದಿಗ್ಭ್ರಮೆಗೊಂಡ ಕೃಷ್ಣಪ್ಪ, ರಾಜೇಂದ್ರನಿಗೆ ಏನಾಗಿತ್ತು? ಅವನು ಯಾಕೆ ಸತ್ತ ಎಂದು ಕೇಳಿದರು. ಅವರಿಗೆ ತಿಳಿದಂತೆ ರಾಜೇಂದ್ರ ಒಳ್ಳೆಯ ನೇತ್ರತಜ್ಞನಾಗಿದ್ದ. ಒಳ್ಳೆ ಮನುಷ್ಯ ಎಂದು ಹೆಸರು ಪಡೆದಿದ್ದ. ಆತ ಹಠಾತ್ತನೆ ಸತ್ತದ್ದು ಅವರಿಗೆ ನಂಬಲಿಕ್ಕೆ ಆಗಲಿಲ್ಲ.

"ಯಾಕೆ ಸತ್ತ ಅಂದ್ರೆ ಶಿಸ್ತಿನ ಜೀವನ ಇಲ್ಲ. ಸಿಕ್ಕಾಪಟ್ಟೆ ಕುಡಿಯೋದು ಮಾಂಸ ತಿನ್ನೋದು. ಒಂದು ವ್ಯಾಯಾಮ ಇಲ್ಲ. ಒಂದು ವಾಕಿಂಗ್ ಇಲ್ಲ. ಹೊತ್ತು ಗೊತ್ತು ಇಲ್ಲದೆ ಮನೇಗೆ ಬರೋದು ಹೋಗೋದು. ಇನ್ನೇನು ಆಗುತ್ತೆ ಹೇಳು. ಊರಲ್ಲಿ ಅವನಣ್ಣ ಮಾಡಿದ್ದು ಅದೇ ಕತೆ ತಾನೆ. ಅದೆಲ್ಲ ಮಾತಾಡಿ ಪ್ರಯೋಜನ ಇಲ್ಲ. ನೀನು ಬೇಗ ಬಾ. ಬಹಳ ಹೊತ್ತು ಹೆಣ ಇಟಕೊಳ್ಳೋದು ನಂಗೆ ಇಷ್ಟವಿಲ್ಲ. ಊರಿಗೆ ಯಾರಿಗೂ ಫೋನ್ ಮಾಡಬೇಡ. ಊರಿಂದ ಯಾರೂ ಬರೋದು ಬೇಡ."

ವೆಂಕಟಪ್ಪನವರು ಫೋನ್ ಕೆಳಕ್ಕಿಟ್ಟು ಕೊಂಚ ಯೋಚನೆ ಮಾಡಿ ಶವಸಂಸ್ಕಾರ ಮಾಡಲು ತಾನು ಸರ್ಕಾರಿ ಸೇವೆಯಲ್ಲಿದ್ದಾಗ ಯಾರು ಯಾರಿಗೆ ಸಹಾಯ ಮಾಡಿದ್ದೆನೊ ಅವರನ್ನೆಲ್ಲ ನೆನೆಸಿಕೊಂಡು ಫೋನಾಯಿಸಿದರು. ಕೆಲವರು ಬರುವುದಾಗಿ ಹೇಳಿದರೆ ಕೆಲವರು ಮನೆಯಲ್ಲಿದ್ದೂ ಇಲ್ಲ ಅನ್ನಿಸಿಕೊಂಡರು. ವೆಂಕಟಪ್ಪನವರು ಮನುಷ್ಯನ ಸ್ವಾರ್ಥ ಗುಣಕ್ಕೆ ನಕ್ಕು ವಿಹಾರ ಹೋದರು. ಮನೆ ಮುಂದಿನ ಪಾರ್ಕಿನಲ್ಲಿ ವಿಹಾರ ಮಾಡುವಾಗ ಹೆಂಗಸರು ಗಂಡಸರು ಅವರ ಹಿಂದೆ ಮುಂದೆ ಕೈ ಬೀಸಿಕೊಂಡು ಬಿರುಸಾಗಿ ಹೋಗುತ್ತಿದ್ದರು. ಅವರಿಗೆ ಯಾರ ಕಡೆಯೂ ಗಮನ ಬರಲಿಲ್ಲ. ಊರಿನಲ್ಲಿ ದೊಡ್ಡ ಮಗ ಎಳೆಯ ಹೆಂಡತಿ ಮತ್ತು ಹಸುಗೂಸನ್ನು ಅನಾಥರನ್ನಾಗಿ ಮಾಡಿ ಸತ್ತುಹೋದದ್ದು ನೆನಪಿಗೆ ಬಂದಿತು. ಕ್ಷೇಮೇಂದ್ರನು ವಿದ್ಯಾಭ್ಯಾಸ ಮುಗಿದಮೇಲೆ ತಾನು ಪಿತ್ರಾರ್ಜಿತ ಆಸ್ತಿಯನ್ನು ನೋಡಿಕೊಂಡಿರುತ್ತೇನೆ, ತಾನು ಯಾವುದೇ ಸರ್ಕಾರಿ ಉದ್ಯೋಗ ಮಾಡುವುದಿಲ್ಲ ಎಂದು ಹಟ ಹಿಡಿದು ಕೂತಿದ್ದ. ತಾಯಿಗೆ ಆತ ಜಮೀನು, ಮನೆ ಮಾಡಿಕೊಂಡು ಇರುವುದು ಇಷ್ಟವಿರಲಿಲ್ಲ. ಆತ ತಂದೆಯಂತೆ ತಮ್ಮನಂತೆ ಸರ್ಕಾರಿ ಉದ್ಯೋಗ ಮಾಡಿಕೊಂಡಿರುವುದನ್ನು ಆಕೆ ಇಷ್ಟಪಟ್ಟಿದ್ದರು. ಮಗನ ಆಕಾಂಕ್ಷೆಗೆ ತಂದೆ ಅಸ್ತು ಎಂದಿದ್ದರು. ಆತ ಚೆನ್ನಾಗಿಯೆ ಬೇಸಾಯ ಮಾಡಿಕೊಂಡು ಇದ್ದವನು ಹುಡುಗಿಯೊಬ್ಬಳ ಪ್ರೇಮಪಾಶಕ್ಕೆ ಬಿದ್ದಿದ್ದ. ಹುಡುಗಿಯ ತಂದೆ ಆತನಿಗೆ ಹೆಣ್ಣು ಕೊಡಲು ಇಷ್ಟಪಡದೆ ಬೇರೊಬ್ಬ ಹುಡುಗನಿಗೆ ಮಗಳನ್ನು ಕೊಡಲು ತಯಾರಿ ನಡೆಸಿದ್ದರು. ಕ್ಷೇಮೇಂದ್ರನ ಬಗ್ಗೆ ಒಳ್ಳೆಯ ಅಭಿಪ್ರಾಯ ಅವರಿಗಿರಲಿಲ್ಲ. ಆತ ಕುಡಿದು ದಾಂಧಲೆ ಮಾಡುತ್ತಾನೆಂದು ಅವರಿಗೆ ವರದಿ ಬಂದಿತ್ತು. ಅದು ಸತ್ಯ ಕೂಡ. ಆತನ ಮನೆ ಕಾಂಪೋಂಡಿನೊಳಗೆ ಬೇರೊಬ್ಬರ ಮನೆ ಹಸುಗಳೂ ಬಂದರೆ ಗುಂಡಿಕ್ಕಿ ಕೊಲ್ಲುತ್ತಿದ್ದ. ಹಸುವಿನ ತೊಡೆಮಾಂಸ ಕತ್ತರಿಸಿ ಬೇಯಿಸಿ ವಿಸ್ಕಿ ಕುಡಿಯಲು ಬಳಸುತ್ತಾನೆಂದು ಆತನ ಮೇಲೆ ಆಪಾದನೆ ಇತ್ತು. ಆತನ ಮೇಲೆ ಅನೇಕ ಕೇಸುಗಳಿದ್ದವು. ಆತ ಕೋರ್ಟಿಗೂ ಪೊಲೀಸ್ ಸ್ಟೇಷನ್ನಿಗೂ ಅಲೆಯುತ್ತಿದ್ದ. ಇದರಿಂದಾಗಿ ಆತನಿಗೆ ಹೆಣ್ಣು ಕೊಡಲು ಆತ ಪ್ರೇಮಿಸಿದ ಹುಡುಗಿಯ ತಂದೆ ಒಪ್ಪಿರಲಿಲ್ಲ. ಬೇರೊಬ್ಬನಿಗೆ ತಾನು ಪ್ರೀತಿಸಿದ ಹುಡುಗಿಯನ್ನು ಮದುವೆ ಮಾಡಿಕೊಡುವುದು ಕ್ಷೇಮೇಂದ್ರ ಒಪ್ಪದೆ, ನಿಶ್ಚಯವಾದ ಹುಡುಗನಿಗೆ ಕೊಲೆ ಮಾಡುವುದಾಗಿ ಬೆದರಿಸಿದ. ಪರಿಣಾಮವಾಗಿ ಹುಡುಗನ ಮನೆಯವರು ಕ್ಷೇಮೇಂದ್ರ ಪ್ರೀತಿಸಿದ ಹುಡುಗಿಯನ್ನು ತಂದುಕೊಳ್ಳಲು ನಿರಾಕರಿಸಿದರು. ಹುಡುಗಿಯ ತಂದೆ ವ್ಯಗ್ರವಾಗಿ ವಿಷಯವನ್ನು ವೆಂಕಟಪ್ಪನವರ ಗಮನಕ್ಕೆ ತಂದು ಕ್ಷೇಮೇಂದ್ರನ ಮೇಲೆ ಪೊಲೀಸ್ ಫಿರ್ಯಾದು ಕೊಡುವುದಾಗಿ ಬೆದರಿಸಿದರು. ವೆಂಕಟಪ್ಪನವರು ತನ್ನ ಮಾನ ಊರು ಮನೆಗಳಲ್ಲಿ ಹರಾಜು ಆಗುವುದನ್ನು ತಪ್ಪಿಸಲು ಊರಿನ ಪ್ರಮುಖರನ್ನು ಸೇರಿಸಿ ಪಂಚಾಯತಿ ಮಾಡಿ ಕ್ಷೇಮೇಂದ್ರನಿಗೆ ಹುಡುಗಿಯನ್ನು ಕಟ್ಟಲು ತೀರ್ಮಾನಿಸಿದರು. ಈ ಪ್ರಕರಣದಲ್ಲಿ ವೆಂಕಟಪ್ಪನವರ ಜೀವ ಹೈರಾಣಾಯಿತು. ಇಷ್ಟಾದ ಮೇಲೆ ಕ್ಷೇಮೇಂದ್ರ ಹೆಂಡತಿಯೊಂದಿಗೆ ಸಂಸಾರ ಮಾಡಿದ್ದು ಕೇವಲ ನಾಲ್ಕೇ ವರ್ಷ. ಹಗಲು ಮೂರು ಹೊತ್ತು ಆತ ಕುಡಿದು ಕಿಡ್ನಿ ಕಾಯಿಲೆಯಿಂದ ಸತ್ತುಹೋದ. ಊರಿನ ಜನ ಅಂತೂ ಹೋದನಲ್ಲ ಎಂದು ನಿಟ್ಟುಸಿರುಬಿಟ್ಟರು. ಸ್ಥಳೀಯ ಪತ್ರಿಕೆಯೊಂದರಲ್ಲಿ 'ಎಂಥಾ ತಂದೆಗೆ ಎಂಥಾ ಮಗ' ಎಂಬ ಲೇಖನ ಪ್ರಕಟವಾಗಿ ಜನ ನಗುವಂತಾಯಿತು. ವೆಂಕಟಪ್ಪನವರಿಗೆ ಅವಮಾನವಾಯಿತು. ಕೇಳಿದವರಿಗೆ ಉತ್ತರಿಸುವುದು ಕಷ್ಟವಾಯಿತು.

ಕಷ್ಟಗಳು ಮನುಷ್ಯನಿಗೆ ಬಂದರೆ ಒಂದರಮೇಲೊಂದು ಬರುತ್ತವೆ. ವೆಂಕಟಪ್ಪನವರ ಜೀವನದಲ್ಲೂ ಹಾಗೇ ಆಯಿತು. ಮಗ ಸತ್ತ ಕೆಲವೇ ದಿನಗಳಲ್ಲಿ ವಿದ್ಯಾಭ್ಯಾಸ ಮುಗಿಸಿದ ಮಗಳಿಗೆ ಮದುವೆ ಮಾಡಲು ವೆಂಕಟಪ್ಪನವರು ಅವರ ಶ್ರೀಮತಿಯವರು ಯೋಗ್ಯ ವರನ ಅನ್ವೇಷಣೆಯಲ್ಲಿ ತೊಡಗಿದರು. ವೆಂಕಟಪ್ಪನವರ ಆಸ್ತಿ, ಮನೆ, ಅವರು ಅಲಂಕರಿಸಿದ ಹುದ್ದೆ ಎಲ್ಲ ನೋಡಿ ಯೋಗ್ಯ ಸಂಬಂಧಗಳು ಬಂದವು. ಆದರೆ ನಿರ್ಮಲಾ ಎಲ್ಲವನ್ನು ನಿರಾಕರಿಸಿ ತಾನು ಸಂನ್ಯಾಸತ್ವ ಸ್ವೀಕರಿಸುತ್ತೇನೆಂದು, ಆ ಕುರಿತು ರಾಮಕೃಷ್ಣ ಆಶ್ರಮದ ಸ್ವಾಮೀಜಿಯೊಂದಿಗೆ ಮಾತನಾಡಿರುವುದಾಗಿ ತಿಳಿಸಿದಳು. ಮಗಳು ಅವಳ ಚಿಕ್ಕಮ್ಮನ ಮಗಳು ಸಾಧ್ವಿ ಇಬ್ಬರೂ ಬಿಡುವಿನ ವೇಳೆಯಲ್ಲಿ ಆಶ್ರಮಕ್ಕೆ ಹೋಗಿಬರುವುದು ವೆಂಕಟಪ್ಪನವರಿಗೂ ಅವರ ಶ್ರೀಮತಿಯವರಿಗೆ ತಿಳಿದಿತ್ತು. ಆದರೆ ಅವರಿಬ್ಬರು ಸಂನ್ಯಾಸ ಸ್ವೀಕರಿಸುವ ಮಟ್ಟಕ್ಕೆ ಹೋಗಿದ್ದಾರೆಂದು ಅವರು ತಿಳಿಸಿರಲಿಲ್ಲ. ವೆಂಕಟಪ್ಪನವರು ಮಗಳ ನಿರ್ಧಾರವನ್ನು ಒಪ್ಪಿಕೊಂಡರೂ ಅವರ ಶ್ರೀಮತಿಯವರು ಒಪ್ಪಲಿಲ್ಲ. ಅವರು ಅಳುವುದು ಕರೆಯುವುದು ಮಾಡಿದರು. ಅವರು ಏನೇ ಮಾಡಿದರೂ ನಿರ್ಮಲಾ ತನ್ನ ನಿರ್ಧಾರವನ್ನು ಬದಲಿಸಲಿಲ್ಲ. ಬಂಧುಬಳಗದಿಂದ ಅವಳಿಗೆ ಹೇಳಿಸಿದರು. ಯಾವುದೂ ನಿರೀಕ್ಷಿತ ಫಲ ನೀಡಲಿಲ್ಲ. ಅಕ್ಕತಂಗಿಯರಿಬ್ಬರು ಆಶ್ರಮಕ್ಕೆ ಸೇರಿಯೇಬಿಟ್ಟರು. ಆ ಸಮಯದಲ್ಲಿ ರಾಜೇಂದ್ರ ಹುಬ್ಬಳ್ಳಿಯಲ್ಲಿ ವೈದ್ಯನಾಗಿದ್ದ. ಮತ್ತೊಬ್ಬ ಮಗ ಕ್ಷೇಮೇಂದ್ರ ಸತ್ತುಹೋಗಿದ್ದ. ವೆಂಕಟಪ್ಪನವರು ಕಚೇರಿಗೆ ಕೆಲಸದ ಮೇಲೆ ಹೋದವರು ಸಂಜೆ ಮನೆಗೆ ಬರುತ್ತಿದ್ದರು. ಕೆಲವೊಮ್ಮೆ ಮೀಟಿಂಗ್ ನೆಪದಲ್ಲಿ ಮನೆಗೆ ತಡವಾಗಿ ಬರುತ್ತಿದ್ದರು. ಅವರ ಶ್ರೀಮತಿಯವರಿಗೆ ಮಗನ ಸಾವು ಮಗಳು ಸಂನ್ಯಾಸತ್ವ ಸ್ವೀಕರಿಸಿದ್ದು ಅವರನ್ನು ಬಹುವಾಗಿ ಕಾಡಿದವು. ಮನೆಯಲ್ಲಿ ಒಬ್ಬರೆ ಇದ್ದುದರಿಂದ ಅವರನ್ನು ಖಿನ್ನತೆ ಕಾಡಿತು. ಅವರು ಯಜಮಾನರೊಂದಿಗೆ ಮಾತುಕತೆ ಕಡಿಮೆ ಮಾಡಿದರು. ಅವರ ಚಲನವಲನವನ್ನು ಗಮನಿಸಿದ ವೆಂಕಟಪ್ಪನವರು ಹೆಂಡತಿಗೆ ಸಮಾಧಾನ ಮಾಡಲು ಯತ್ನಿಸಿದರಾದರೂ ಪ್ರಯೋಜನವಾಗಲಿಲ್ಲ. ಅವರು ಮೌನಕ್ಕೆ ಜಾರಿದರು. ಹೀಗೆ ದಿನ ಕಳೆಯುವಾಗ ಒಂದು ದಿನ ಮಧ್ಯರಾತ್ರಿ ಅವರ ಶ್ರೀಮತಿಯವರು ನೇಣಿಗೆ ಶರಣಾದರು. ಹೆಂಡತಿಯ ನೇತಾಡುವ ಶವವನ್ನು ನೋಡಿದ ವೆಂಕಟಪ್ಪನವರು 'ಬಂದದ್ದೆಲ್ಲ ಬರಲಿ, ಗೋವಿಂದಯ್ಯನ ದಯೆಯೊಂದಿರಲಿ' ಎಂದು ಗೊಣಗಿದರು. ಆ ಸಮಯದಲ್ಲಿ ನಿರ್ಮಲಾ ಅಸ್ಸಾಂನ ರಾಮಕೃಷ್ಣಾಶ್ರಮದಲ್ಲಿದ್ದಳು. ತಂದೆ ಮಗಳಿಗೆ ಹೆಂಡತಿಯ ಸಾವಿನ ಕುರಿತು ಬರೆದರು. ನಿರ್ಮಲಾ ತಡವಾಗಿ ಉತ್ತರಿಸಿ, "ಅಮ್ಮ ದೇಹ ಬಿಟ್ಟ ವಿಷಯ ತಿಳಿಯಿತು. ಶಾರದಾಮಾತೆ ಆಕೆಯ ಆತ್ಮಕ್ಕೆ ಶಾಂತಿ ಕೊಡಲಿ ಎಂದು ಪ್ರಾರ್ಥಿಸುತ್ತೇನೆ" ಎಂದು ಚುಟುಕಾಗಿ ಬರೆದಳು. ಮಗಳ ಪತ್ರ ನೋಡಿ ತಂದೆ ನಕ್ಕರು.

ಬೆಳಗ್ಗಿನ ವಿಹಾರ ಮುಗಿಸಿ ವೆಂಕಟಪ್ಪನವರು ಮನೆಗೆ ಬಂದರು. ಸುದ್ದಿ ತಿಳಿದು ಬೆಂಗಳೂರಿನಲ್ಲಿದ್ದ ಊರು ಮನೆಯವರು ಜಮಾಯಿಸಿದ್ದರು. ಮಗ ಸತ್ತು ಮಲಗಿರುವಾಗ ಸಾಹೇಬರು ವಿಹಾರ ಹೋಗಿದ್ದುದು ಕೆಲವರಿಗೆ ವಿಚಿತ್ರವಾಗಿ ಕಂಡಿತು. ತಮ್ಮ ಕೃಷ್ಣಪ್ಪ ಅಣ್ಣನ ಸನಿಹಕ್ಕೆ ಬಂದು, "ಅರ್ಜುನನಿಗೆ ತಿಳಿಸಿದೆಯಾ ?" ಕೇಳಿದರು. ಅರ್ಜುನನು ರಾಜೇಂದ್ರನ ಮಗ. ಹೆಚ್ಚಿನ ವ್ಯಾಸಂಗಕ್ಕಾಗಿ ಅಮೆರಿಕಾಕ್ಕೆ ತೆರಳಿದ್ದ.

"ಅರ್ಜುನನಿಗೆ ತಿಳಿಸಿದರೆ ಅವನು ಬರೋದು ಯಾವಾಗ ? ಅಲ್ಲೀತಂಕ ಹೆಣ ಇಟ್ಟು ಕೊಳ್ಳೋಕೆ ಆಗಲ್ಲ. ಶವಸಂಸ್ಕಾರ ಮಾಡಿ ನನ್ನ ಮೇಲೆ ವಿಶ್ವಾಸ ಇರುವವರು" ವೆಂಕಟಪ್ಪನವರು ಖಡಾಖಡಿಯಾಗಿ ಹೇಳಿದರು. ಇನ್ನೊಬ್ಬ ಯಾರೋ ಬಂಧು ಹತ್ತಿರ ಬಂದು.

"ನಿರ್ಮಲಂಗಾದರೂ ತಿಳಿಸಿದ್ದರೆ ಆಗತಿತ್ತು" ಎಂದ.

"ಅವಳಿಗೆ ಈಗ ತಿಳಿಸೋ ಅವಶ್ಯಕತೆ ಇಲ್ಲ. ಅವಳು ಸಂಸಾರ ಬಂಧುಬಳಗದ ಸಂಬಂಧ ಕಡಿದುಕೊಂಡಿದ್ದಾಳೆ. ಅವಳ ಬಗ್ಗೆ ನನಗೆ ಬಹಳ ಹೆಮ್ಮೆ ಇದೆ. ಮೊದಲು ಶವಸಂಸ್ಕಾರ ಮಾಡಿ. ಮತ್ತೇನು ಮಾತಾಡಬೇಡಿ." ಸಾಹೇಬರು ಹಾಗೆ ಹೇಳಿದ ಮೇಲೆ ಯಾರಿಗೂ ಮತ್ತೇನನ್ನೂ ಕೇಳಲಿಕ್ಕೆ ಧೈರ್ಯವಾಗಲಿಲ್ಲ. ತರಾತುರಿಯಲ್ಲಿ ರಾಜೇಂದ್ರನ ಶವಸಂಸ್ಕಾರ ಮುಗಿಯಿತು. ಶವಸಂಸ್ಕಾರಕ್ಕೆ ಬಂದವರೆಲ್ಲ ಹೋದರು. ಮನೆಯಲ್ಲಿ ಮಾವ ಸೊಸೆ ಇಬ್ಬರೆ ಉಳಿದರು. ಮನೆಯಲ್ಲಿ ಸ್ಮಶಾನ ಮೌನ ಆವರಿಸಿತು. ಮನೆಯ ಕೆಲಸ ಕಾರ್ಯ ಯಾಂತ್ರಿಕವಾಗಿ ನಡೆದುಕೊಂಡು ಹೋಯಿತು. ಸೊಸೆ ಮೌನಕ್ಕೆ ಶರಣಾದರೆ ವೆಂಕಟಪ್ಪನವರು ಏನೂ ನಡೆದೇ ಇಲ್ಲ ಎನ್ನುವಂತೆ ವರ್ತಿಸಹತ್ತಿದರು. ಇಳಿವಯಸ್ಸಿನಲ್ಲಿ ಅವರಿಗೆ ಎರಡೂ ಮನೆಯ ಜವಾಬ್ದಾರಿ ಬಿದ್ದಿತು. ಊರಿಗೂ ಬೆಂಗಳೂರಿಗೂ ಅವರ ಓಡಾಟ ಶುರುವಾಯಿತು.

**ಬಿಳುಮನೆ ರಾಮದಾಸ್**
ನಂ. ೧೪೧೧, ೩೭ನೇ 'ಬಿ' ಕ್ರಾಸ್, ೧೧ನೇ ಮುಖ್ಯರಸ್ತೆ
೪ನೇ 'ಟಿ' ಬ್ಲಾಕ್ ಜಯನಗರ, ಬೆಂಗಳೂರು – ೫೬೦ ೦೪೧






ಎಲ್ಲ ನಗರಗಳಿಗೂ ಒಂದು 'ಅಂಡರ್‌ಬೆಲ್ಲಿ' (Underbelly–ಕೆಳಹೊಟ್ಟೆ) ಇರುತ್ತದೆ. ಇದನ್ನು ದುರ್ಬಲ ಸ್ಥಾನ ಅಥವಾ ಮರ್ಮಸ್ಥಾನ ಎಂದು ಕರೆಯಬಹುದೇನೋ. ಒಂದರ್ಥದಲ್ಲಿ ಕೊಳಗೇರಿಗಳನ್ನು ನಗರ ಮಹಾನಗರಗಳ 'ಅಂಡರ್‌ಬೆಲ್ಲಿ' ಎಂದು ಸಂಬೋಧಿಸಬಹುದು. ಚೆನ್ನೈ ಎಂಬ ಮಹಾನಗರದ ಒಂದು ಕೊಳಗೇರಿ ಜೀವನದ ಒಂದು ಝಳಕನ್ನು ಈ ಚಲನಚಿತ್ರದಲ್ಲಿ ಕಾಣಬಹುದು. ನಿತ್ಯ ದುರ್ಭರ ಬಾಳನ್ನು ಸಾಗಿಸುತ್ತಿದ್ದರೂ, ಕೊಳಗೇರಿಯಲ್ಲಿ ವಾಸಿಸುವ ಜನರದ್ದು ಬತ್ತದ ಜೀವನೋತ್ಸಾಹ. ಎಂತಹ ಸಂಕಷ್ಟಕರ ಪರಿಸ್ಥಿತಿಗಳನ್ನು ಎದುರಿಸುವ ಛಾತಿ ಅವರಲ್ಲಿರುತ್ತದೆ. ಕಠಿಣ ಜೀವನ ಹಾದಿಯ ಪಯಣವೇ ಅವರನ್ನು ಹಾಗೆ ರೂಪಿಸಿರುತ್ತದೆ. ಈ ವಿಷಯಕ್ಕೆ ಸಂಬಂಧಿಸಿದ ಕೆಲವು ಘಟನೆಗಳು ಚಲನಚಿತ್ರದಲ್ಲಿವೆ. ಅಲ್ಲದೆ ಬದಲಾಗುತ್ತಿರುವ ಮಹಾನಗರಗಳ ಚಹರೆಗಳು ಇಲ್ಲಿ ಗೋಚರಿಸುತ್ತವೆ.

# ಕಾಕಾ ಮುಟ್ಟೈ – ವೀಕ್ಷಕರನ್ನು ತಟ್ಟುವ ಚಲನಚಿತ್ರ

ಮ. ಶ್ರೀ. ಮುರಳಿ ಕೃಷ್ಣ

'ಕಾಕಾ ಮುಟ್ಟೈ' ಎಂಬ ತಮಿಳು ಚಲನಚಿತ್ರದ ಹೆಸರು ಕೇಳಿದಾಕ್ಷಣ ನನಗೆ ೧೯೭೭ರಲ್ಲಿ ಖ್ಯಾತ ನಿರ್ದೇಶಕ ಜಿ. ವಿ. ಅಯ್ಯರ್ ನಿರ್ದೇಶನದಲ್ಲಿ ತಯಾರಾದ 'ಕುದುರೆ ಮೊಟ್ಟೆ' ಎಂಬ ಕನ್ನಡ ಚಲನಚಿತ್ರದ ನೆನಪಾಯಿತು. ನನಗೆ ನೆನಪಿರುವಂತೆ, ಅಯ್ಯರ್‌ರ ಈ ಚಲನಚಿತ್ರ ತೆರೆ ಕಾಣಲಿಲ್ಲ.

ಇರಲಿ... ಒಂದು ಸರಳ ಕಥಾ ಎಳೆಯನ್ನು ಆಧರಿಸಿ 'ಕಾಕಾ ಮುಟ್ಟೈ' ಚಲನಚಿತ್ರದ ಚಿತ್ರಕಥೆಯ ಹಂದರವನ್ನು ಹೆಣೆಯಲಾಗಿದೆ. ಚೆನ್ನೈನ ಕೊಳಗೇರಿಯೊಂದರಲ್ಲಿ ಒಬ್ಬ ಹೆಣ್ಣುಮಗಳು ತನ್ನ ಎರಡು ಮಕ್ಕಳು ಮತ್ತು ಅತ್ತೆಯೊಡನೆ, ಯಾವುದೇ ಆಧುನಿಕ ಸೌಲಭ್ಯವಿರದ ಒಂದು ಕೊಠಡಿಯಲ್ಲಿ ವಾಸ ಮಾಡುತ್ತಿರುತ್ತಾಳೆ. ಆಕೆಯ ಗಂಡ ಒಂದು ಕ್ರಿಮಿನಲ್ ಕೇಸ್‌ನಲ್ಲಿ ಸಿಲುಕಿ ಕೈದಿಯಾಗಿರುತ್ತಾನೆ. ಮುದುಕಿಯಾದ ಅತ್ತೆಗೆ ಯಾವುದೇ ಕಷ್ಟದ ಕೆಲಸವನ್ನು ಮಾಡಲಾಗದ ಪರಿಸ್ಥಿತಿ. ಗಂಡನನ್ನು ಬಂಧವಿಮುಕ್ತಗೊಳಿಸಲು ವಕೀಲರಿಗೆ ದುಡ್ಡು ಕೊಟ್ಟು ಹೈರಾಣಳಾಗಿರುತ್ತಾಳೆ ಚಿತ್ರದ ನಾಯಕಿ (ಅಭಿನೇತ್ರಿ ಐಶ್ವರ್ಯ ರಾಜೇಶ್)! ಆಕೆಯ ಮೊದಲನೇ ಮಗನನ್ನು ಆ ಕೊಳಗೇರಿಯ ಪರಿಚಿತ ಮಂದಿ 'ಪೆರಿಯ (ದೊಡ್ಡ) ಕಾಕಾ ಮುಟ್ಟೈ' (ವಿಘ್ನೇಶ್ ೧೪ ವರ್ಷ) ಮತ್ತು ಎರಡನೆಯವನನ್ನು 'ಚಿನ್ನ (ಚಿಕ್ಕ) ಕಾಕಾ ಮುಟ್ಟೈ' (ರಮೇಶ್ ೧೨ ವರ್ಷ) ಎಂದೇ ಕರೆಯುತ್ತಿರುತ್ತಾರೆ ! ಹಣದ ತೀವ್ರ ಮುಗ್ಗಟ್ಟಿನಿಂದ ಈ ಮಕ್ಕಳ ವಿದ್ಯಾಭ್ಯಾಸ ಮೊಟಕುಗೊಂಡಿರುತ್ತದೆ. ಈ ಸಹೋದರರು ತಮ್ಮ ತಾಯಿಯ ಕಣ್ಣು ತಪ್ಪಿಸಿ, ತಮ್ಮ ಕಿಸೆಯಲ್ಲಿ ಅನ್ನವನ್ನು ತುಂಬಿಸಿಕೊಂಡು, ಪಕ್ಕದ ಬಯಲಿನಲ್ಲಿರುವ ದೊಡ್ಡ ಮರದ ಬಳಿ ಸಾಗಿ, ಅನ್ನವನ್ನು ಎರಚಿ, 'ಕಾಕಾ'... ಎಂದು ಕರೆದಾಗ, ಕಾಗೆಗಳು ಹಾರಿ ಬಂದು, ಅನ್ನದ ಅಗಳುಗಳ ಮೇಲೆ ಎರಗುತ್ತವೆ. ಆಗ 'ಪೆರಿಯ ಕಾಕಾ ಮುಟ್ಟೈ' ಮರ ಏರಿ, ಕಾಗೆಯ ಮೊಟ್ಟೆಗಳನ್ನು ಕದ್ದು, ತನ್ನ ಸಹೋದರನಿಗೆ ಕೊಟ್ಟು, ತಾನೂ ಸೇವಿಸುತ್ತಿರುತ್ತಾನೆ. ಕೋಳಿ ಮೊಟ್ಟೆಗಳನ್ನು ಖರೀದಿಸಲು ಹಣವಿರದಿದ್ದುದರಿಂದ ಬೆಳೆಯುವ ಮಕ್ಕಳಿಗೆ ಅವಶ್ಯವಾಗಿ ಬೇಕಾಗುವ ಪ್ರೋಟೀನುಗಳಿಗಾಗಿ ಈ ಕ್ರಮಕ್ಕೆ ಅವರು ಮುಂದಾಗುತ್ತಾರೆಂದು ತಿಳಿಸುವ ಅವರ ಅಜ್ಜಿಯ ಮಾತುಗಳಿಂದ ಆ ಕುಟುಂಬದ ದೈನೇಸಿ ಪರಿಸ್ಥಿತಿಯು ವೀಕ್ಷಕರಿಗೆ ಅರಿವಾಗುತ್ತದೆ.

ಈ ಮಕ್ಕಳು ನಿತ್ಯ ಗೂಡ್ಸ್ ರೈಲು ಗಾಡಿಗಳಿಂದ ಬೀಳುವ ಕಲ್ಲಿದ್ದಲುಗಳನ್ನು ಸಂಗ್ರಹಿಸಿ, ಒಂದು ಕೆ.ಜಿ.ಗೆ ರೂ. ೩ರಂತೆ ಗುಜರಿ ಅಂಗಡಿಗೆ ಮಾರಿ, ಹತ್ತೋ ಹದಿನೈದೋ ರೂ.ಗಳನ್ನು ಸಂಪಾದಿಸುತ್ತಿರುತ್ತಾರೆ. ಕಲ್ಲಿದ್ದಲು ಹೆಕ್ಕುವ ಕಾರ್ಯದಲ್ಲಿ ಅವರಿಗೆ 'ಫಳರಸಂ' (ಅರ್ಥ–ಹಣ್ಣಿನ ರಸ) ಎಂಬ ರೈಲ್ವೆ ಕಾರ್ಮಿಕ ಸಹಾಯಹಸ್ತ ನೀಡುತ್ತಿರುತ್ತಾನೆ. ಹೀಗಿರುವಾಗ ಕೊಳಗೇರಿಯ ಪಕ್ಕದಲ್ಲಿ ಇದ್ದ ಜಾಗವನ್ನು (ದೊಡ್ಡ ಮರವಿದ್ದ) ಒಬ್ಬ ಶ್ರೀಮಂತ ಖರೀದಿಸುತ್ತಾನೆ. ನೋಡ–ನೋಡುತ್ತಿರುವಂತೆಯೇ ಆ ಸ್ಥಳದಲ್ಲಿ ಒಂದು ಪೀಟ್ಜ ಮಳಿಗೆಯನ್ನು ಆ ಶ್ರೀಮಂತ ಶುರು ಮಾಡುತ್ತಾನೆ. ಅದರ ಉದ್ಘಾಟನೆಗೆ ಜನಪ್ರಿಯ ತಮಿಳು ಹೀರೊ ಸಿಂಬು ಆಗಮಿಸಿ, ಪೀಟ್ಜ ಸವಿಯುತ್ತಾನೆ. ಇದನ್ನು ಕಂಡ ಕೊಳಗೇರಿ ಮಕ್ಕಳಲ್ಲಿ ತಾವೂ ಅದನ್ನು ಭುಜಿಸಬೇಕೆಂಬ ಹೆಬ್ಬಯಕೆ ಉಂಟಾಗುತ್ತದೆ. 'ಪೆರಿಯ ಕಾಕಾ ಮುಟ್ಟೈ' ಮತ್ತು 'ಚಿನ್ನ ಕಾಕಾ ಮುಟ್ಟೈ' ಕೂಡ ಈ ಆಕರ್ಷಣೆಗೆ ಒಳಗಾಗುತ್ತಾರೆ. ಪೀಟ್ಜ ತಿನ್ನಬೇಕೆಂಬ ತಮ್ಮ ಆಸೆಯನ್ನು ರೈಲ್ವೆ ಕಾರ್ಮಿಕ ಫಳರಸಂ ಬಳಿ ತಿಳಿಸುತ್ತಾರೆ. ಆಗ ಆತ ಕಲ್ಲಿದ್ದಲು ಸಂಗ್ರಹಿಸಿರುವ ಒಂದು ಸ್ಥಳಕ್ಕೆ ಕರೆದೊಯ್ಯುತ್ತಾನೆ. ನಂತರ ನಿತ್ಯ ಈ ಸಹೋದರರು ಆ ಸ್ಥಳಕ್ಕೆ ಧಾವಿಸಿ, ಕಲ್ಲಿದ್ದಲನ್ನು ಕದ್ದು ಪೀಟ್ಜಗಾಗಿ ಹಣ ಸಂಗ್ರಹಿಸುತ್ತಾರೆ. ರೂ. ೩೦೦/– ಸಂಗ್ರಹವಾದ ತರುವಾಯ ಅವರು ಪೀಟ್ಜ ಅಂಗಡಿಗೆ ಧಾವಿಸುತ್ತಾರೆ. ಆದರೆ ಅಲ್ಲಿನ ಸೆಕ್ಯುರಿಟಿ ಗಾರ್ಡ್ ಅವರನ್ನು ಒಳಗೆ ಹೋಗಲು ಬಿಡುವುದಿಲ್ಲ. ಫಳರಸಂ ಬಳಿ ತಮಗಾದ ಕಹಿ ಅನುಭವವನ್ನು ವಿವರಿಸಿದಾಗ, ಆತ ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡು ಹೋದರೆ ಪ್ರವೇಶ ದೊರಕಬಹುದೆಂದು ತಿಳಿಸುತ್ತಾನೆ. ಹೇಗೋ ಉಪಾಯ ಹೂಡಿ ಹೊಸ ಬಟ್ಟೆಯನ್ನು ಪಡೆದುಕೊಳ್ಳುತ್ತಾರೆ. ಅದನ್ನು ಧರಿಸಿಕೊಂಡು ಪೀಟ್ಜ ಅಂಗಡಿಗೆ ಹೋದಾಗ, ಪುನಃ ಅವರನ್ನು ನಿರ್ಬಂಧಿಸಲಾಗುತ್ತದೆ. ಅಲ್ಲಿ ಜರಗುತ್ತಿದ್ದ ಗಲಾಟೆಯನ್ನು ಕಂಡು ಹೊರಬರುವ ಸೂಪರ್‌ವೈಸರ್ 'ಪೆರಿಯ ಕಾಕಾ ಮುಟ್ಟೈ'ನ ಕಪಾಳಕ್ಕೆ ಬಾರಿಸುತ್ತಾನೆ. ಕೊಳಗೇರಿಯ ಒಬ್ಬ ಹುಡುಗ ಈ ದೃಶ್ಯವನ್ನು ತನ್ನ ಮೊಬೈಲ್‌ನಲ್ಲಿ ಸೆರೆಹಿಡಿಯುತ್ತಾನೆ. ಅದು ಕೊಳಗೇರಿಯ ಒಬ್ಬ ಪುಢಾರಿ ಹಾಗೂ ಆತನ ಭಂಟನ ಕೈ ತಲುಪುತ್ತದೆ. ಅವರು ಪೀಜ್ಜ ಅಂಗಡಿಯ ಯಜಮಾನನನ್ನು ಬ್ಲ್ಯಾಕ್‌ಮೇಲ್ ಮಾಡಿ ಹಣ ಪಡೆಯಲು ನಿರ್ಧರಿಸುತ್ತಾರೆ. ಪುಢಾರಿಗೆ ರೂ. ಒಂದು ಲಕ್ಷ ನೀಡಲು ಪೀಟ್ಜ ಅಂಗಡಿಯ

ಮಾಲೀಕ ಒಪ್ಪುತ್ತಾನೆ. ಈ ಡೀಲನ್ನು ಪುಢಾರಿ ತನ್ನ ಭಂಟನಿಗೆ ತಿಳಿಸುವುದಿಲ್ಲ! ಆ ಭಂಟನೋ ತುಂಬ ಕಿಲಾಡಿ. ಆತ ಕಪಾಳ ಸೇವೆಯ ಚಿತ್ರವನ್ನು ಟಿ.ವಿ. ಚಾನೆಲ್‌ವೊಂದಕ್ಕೆ ಮಾರಿಕೊಂಡಿರುತ್ತಾನೆ!

ಕೊನೆಗೆ ವಿಷಯ ಬೆಳೆದು ಆ ಪ್ರದೇಶದ ಶಾಸಕ, ಪೊಲೀಸರನ್ನು ಪೀಟ್ಜ಼ ಅಂಗಡಿಯ ಮಾಲೀಕ ಸುಪ್ರೀತಗೊಳಿಸುತ್ತಾನೆ. ಶಾಸಕನ ಕುಮ್ಮಕ್ಕಿನಿಂದ ಜರುಗಬೇಕಾಗಿದ್ದ ಪ್ರತಿಭಟನೆ ಕಾರ್ಯಕ್ರಮ ತಣ್ಣಗಾಗುತ್ತದೆ. ಈ ಘಟನೆಗೆ ತೆರೆ ಎಳೆಯಲು ಅಂಗಡಿಯ ಮಾಲೀಕ ಇಬ್ಬರು ಸಹೋದರರನ್ನು ಆದರದಿಂದ ಬರಮಾಡಿಕೊಂಡು, ಮಾಧ್ಯಮದವರ ಸಮಕ್ಷಮದಲ್ಲಿ ಅವರಿಗೆ ಪೀಟ್ಜ಼ ತಿನ್ನಲು ನೀಡಿ, ಅವರು ಪೀಟ್ಜ಼ ತಿನ್ನಬೇಕೆಂದು ಬಯಸಿದಾಗಲೆಲ್ಲ ಅಂಗಡಿಗೆ ಭೇಟಿ ನೀಡಿ ಅದನ್ನು ಭುಜಿಸಬಹುದೆಂದು ಆಸೆ ತೋರಿಸುತ್ತಾನೆ. ಸ್ವಲ್ಪ ಪೀಟ್ಜ಼ ರುಚಿ ನೋಡಿದ ತರುವಾಯ 'ಪೆರಿಯ ಕಾಕಾ ಮುಟ್ಟೈ' ತಮ್ಮನತ್ತ ತಿರುಗಿ – "ಈ ಪೀಟ್ಜ಼ ತುಂಬ ಅಂಟು ಅಂಟಾಗಿದೆ... ನಮ್ಮ ಅಜ್ಜಿ ಮಾಡುತ್ತಿದ್ದ ದೋಸೆಯೇ ಚೆನ್ನಾಗಿರುತ್ತಿತ್ತು" ಎಂದು ಹೇಳುವುದರೊಂದಿಗೆ ಚಲನಚಿತ್ರ ಮುಕ್ತಾಯವಾಗುತ್ತದೆ.

'ಕಾಕಾ ಮುಟ್ಟೈ' ನಿರ್ದೇಶಕ ಎಮ್. ಮಣಿಕಂಡನ್‌ರ ಚೊಚ್ಚಲ ಚಲನಚಿತ್ರ. ಮೊದಲು ವಿವಾಹ ಸಮಾರಂಭಗಳ ಫೋಟೋಗ್ರಾಫರಾಗಿ, ನಂತರ ಸಿನಿಮಾಟೋಗ್ರಾಫರಾಗಿ ಈಗ ನಿರ್ದೇಶಕನಾಗಿರುವ ಮಣಿಕಂಡನ್ ಈ ಚಲನಚಿತ್ರದ ಛಾಯಾಗ್ರಹಣದ ಕಾರ್ಯವನ್ನೂ ನಿರ್ವಹಿಸಿದ್ದಾರೆ. ನಿರ್ಮಾಪಕರು ಧನುಷ್ ಮತ್ತು ವೆಟ್ರಿಮಾರನ್. ಈ ಚಲನಚಿತ್ರವನ್ನು ತಯಾರಿಸಲು ಸುಮಾರು ೨ ಕೋಟಿ ರೂ. ಖರ್ಚಾಗಿದೆ.

ಎಲ್ಲ ನಗರಗಳಿಗೂ ಒಂದು 'ಅಂಡರ್‌ಬೆಲ್ಲಿ' (Underbelly–ಕೆಳಹೊಟ್ಟೆ) ಇರುತ್ತದೆ. ಇದನ್ನು ದುರ್ಬಲ ಸ್ಥಾನ ಅಥವಾ ಮರ್ಮಸ್ಥಾನ ಎಂದು ಕರೆಯಬಹುದೇನೋ. ಒಂದರ್ಥದಲ್ಲಿ ಕೊಳಗೇರಿಗಳನ್ನು ನಗರ ಮಹಾನಗರಗಳ 'ಅಂಡರ್‌ಬೆಲ್ಲಿ' ಎಂದು ಸಂಬೋಧಿಸಬಹುದು. ಚೆನ್ನೈ ಎಂಬ ಮಹಾನಗರದ ಒಂದು ಕೊಳಗೇರಿ ಜೀವನದ ಒಂದು ಝಳಕನ್ನು ಈ ಚಲನಚಿತ್ರದಲ್ಲಿ ಕಾಣಬಹುದು. ನಿತ್ಯ ದುರ್ಭರ ಬಾಳನ್ನು ಸಾಗಿಸುತ್ತಿದ್ದರೂ, ಕೊಳಗೇರಿಯಲ್ಲಿ ವಾಸಿಸುವ ಜನರದ್ದು ಬತ್ತದ ಜೀವನೋತ್ಸಾಹ. ಎಂತಹ ಸಂಕಷ್ಟಕರ ಪರಿಸ್ಥಿತಿಗಳನ್ನು ಎದುರಿಸುವ ಛಾತಿ ಅವರಲ್ಲಿರುತ್ತದೆ. ಕಠಿಣ ಜೀವನ ಹಾದಿಯ ಪಯಣವೇ ಅವರನ್ನು ಹಾಗೆ ರೂಪಿಸಿರುತ್ತದೆ. ಈ ವಿಷಯಕ್ಕೆ ಸಂಬಂಧಿಸಿದ ಕೆಲವು ಘಟನೆಗಳು ಚಲನಚಿತ್ರದಲ್ಲಿವೆ. ಅಲ್ಲದೆ, ಬದಲಾಗುತ್ತಿರುವ ಮಹಾನಗರಗಳ ಚಹರೆಗಳು ಇಲ್ಲಿ ಗೋಚರಿಸುತ್ತವೆ.

ಈ ಕಾಲಘಟ್ಟದ ಜಾಗತೀಕರಣದ ಹಂತದಲ್ಲಿ ಉಳ್ಳವರ ಮತ್ತು ಇರದವರ ಅಂತರ ಜಾಸ್ತಿಯಾಗುತ್ತ ಹೋಗುತ್ತಿದೆ. ಕೊಳಗೇರಿಯ ಸಮೀಪದಲ್ಲೇ ಸ್ಥಾಪಿಸಲ್ಪಡುವ ಪೀಟ್ಜ಼ ಮಳಿಗೆ ಮತ್ತು ಕಲ್ಲಿದ್ದಲನ್ನು ಸಂಗ್ರಹಿಸಿ ವಾಪಸ್ಸು ಬರುವಾಗ ಕೊಳಗೇರಿ ಸಹೋದರರು ದೊಡ್ಡ ಅಪಾರ್ಟ್‌ಮೆಂಟಿನ ಶ್ರೀಮಂತ ಸ್ನೇಹಿತನನ್ನು ಮುಳ್ಳಿನ ಬೇಲಿಯ ಆಚೆ ಬದಿಯಲ್ಲಿ ನಿಂತು ಭೇಟಿಮಾಡುವ ದೃಶ್ಯ, ಅವರು ನಾಯಿಮರಿಯೊಂದನ್ನು ರೂ. ೨೫,೦೦೦/–ಕ್ಕೆ ಮಾರುವ ಪ್ರಯತ್ನ ಎರಡೂ ಈ ಅಂತರವನ್ನು ಸೂಕ್ಷ್ಮವಾಗಿ ಅನಾವರಣಗೊಳಿಸುತ್ತವೆ. ಪೀಟ್ಜ಼ ಕೂಡ ಜಾಗತೀಕರಣದ ಆಕರ್ಷಣೆಗಳ ಒಂದು ರೂಪಕವಾಗಿ ಈ ಚಲನಚಿತ್ರದಲ್ಲಿ ಮೂಡಿದೆ ಎಂದೆನಿಸುತ್ತದೆ.

ಈ ಚಲನಚಿತ್ರದ ಸ್ತ್ರೀ ಪಾತ್ರಗಳು ಗಟ್ಟಿಯಾಗಿ ಕಟ್ಟಲ್ಪಟ್ಟಿವೆ. ಉದಾಹರಣೆಗೆ ಕೊಳಗೇರಿ ಸಹೋದರರ ತಾಯಿ, ಅಜ್ಜಿ ಮತ್ತು ಗುಜರಿ ಅಂಗಡಿಯ ಮಹಿಳೆಯರ ಪಾತ್ರಗಳನ್ನು ಗಮನಿಸಬಹುದು. 'ಪೆರಿಯ ಕಾಕಾ ಮುಟ್ಟೈ' ಮತ್ತು 'ಚಿನ್ನ ಕಾಕಾ ಮುಟ್ಟೈ'ರ ತಂದೆ ಜೈಲಿನಲ್ಲಿದ್ದರೂ, ಅವರ ತಾಯಿ ಸಂಸಾರದ ರಥವನ್ನು ಕಷ್ಟಪಟ್ಟು ಮುನ್ನಡೆಸುತ್ತಾಳೆ. ಅಜ್ಜಿ ಕೈಲಾಗದಿದ್ದರೂ ಸಹೋದರರನ್ನು ನೋಡಿಕೊಳ್ಳುವುದು, ಚಿಕ್ಕಪುಟ್ಟ ಕೆಲಸಗಳನ್ನು ಮಾಡುವುದರಲ್ಲಿ ನಿರತಳಾಗಿರುತ್ತಾಳೆ. ಕುಡುಕ ಗಂಡನ ಜೊತೆ ಏಗುತ್ತ ವ್ಯಾಪಾರವನ್ನೂ ನೋಡಿಕೊಳ್ಳುವ ಗುಜರಿ ಅಂಗಡಿಯ ಮಹಿಳೆ, ಈ ಮೂವರು ಸ್ತ್ರೀ ಧಾರಣಾ ಶಕ್ತಿಯ ಪ್ರತೀಕಗಳಂತೆ ಚಿತ್ರಿತಗೊಂಡಿದ್ದಾರೆ.

ಕೊಳಗೇರಿಯಲ್ಲೇ ವಾಸಮಾಡುತ್ತಿದ್ದು , ಅಲ್ಲಿನ ನಿವಾಸಿಗಳನ್ನು ಏಮಾರಿಸಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವ ಪುಢಾರಿಗಳು, ಇಂತಹ ಅಂಚಿನಲ್ಲಿರುವವರ ಕಲ್ಯಾಣದ ಬಗೆಗೆ ಮಾತನಾಡುತ್ತಲೇ ಅವರನ್ನು ದಾಳಗಳನ್ನಾಗಿ ಬಳಸುವ ರಾಜಕೀಯ ಪಕ್ಷ / ಅದರ ಶಾಸಕ, ಪೊಲೀಸರನ್ನು ಮತ್ತು ಶಾಸಕರನ್ನು ಬುಟ್ಟಿಗೆ ಹಾಕಿಕೊಳ್ಳುವ ಪೀಟ್ಜ಼ ಸರಣಿ ಅಂಗಡಿಗಳ ಮಾಲೀಕನ ಆರ್ಥಿಕ ತಾಕತ್ತು , ಇತ್ಯಾದಿಗಳು ಈ ಚಲನಚಿತ್ರದಲ್ಲಿ ಸೂಕ್ಷ್ಮವಾಗಿ ಅಭಿವ್ಯಕ್ತಗೊಂಡಿವೆ.

ಸುಮಾರು ೯೮ ನಿಮಿಷಗಳ ಅವಧಿಯ ಈ ಚಲನಚಿತ್ರದಲ್ಲಿ ನಿರ್ದೇಶಕರು ಚಿಕ್ಕ




***ಕೊಳಗೇರಿಯ ಸಮೀಪದಲ್ಲಿ ಇರುವ ಪೀಟ್ಜ಼ ಮಳಿಗೆ***

ಚಿಕ್ಕ ವಿವರಗಳನ್ನು ಕಟ್ಟಿಕೊಟ್ಟಿದ್ದಾರೆ. ಪೀಟ್ಜ಼ ಕರಪತ್ರವನ್ನು ಇಟ್ಟುಕೊಂಡು, ಅದರಂತೆ ದೋಸೆ ಮಾಡುವ ಅಜ್ಜಿಯ ಪ್ರಯೋಗ, ನಿತ್ಯ ರಾತ್ರಿ ನಿದ್ದೆಯಲ್ಲಿ ಉಚ್ಚೆ ಮಾಡಿಕೊಳ್ಳುವ 'ಚಿನ್ನ ಕಾಕಾ ಮುಟ್ಟೈ'ನನ್ನು ಗದರುವ ಆತನ ತಾಯಿಯ ಭೋಳೆತನ, ಆಟಿಕೆಯ ಕೈಗಡಿಯಾರವನ್ನೇ ನಿಜವಾದದ್ದು ಎಂದು ನಂಬುವ ಸಹೋದರರ ಮುಗ್ಧತೆ, ಗಡದ್ದಾಗಿ ಕುಡಿದು ತೂರಾಡುತ್ತಿದ್ದ ಗುಜರಿ ಅಂಗಡಿಯ ಮಾಲೀಕನನ್ನು ಕೈಗಾಡಿಯೊಂದರಲ್ಲಿ ಕುಳ್ಳಿರಿಸಿಕೊಂಡು ಅಂಗಡಿಗೆ ತಲುಪಿಸಿದಾಗ ಆತನ ಮಡದಿ ನೀಡುವ ರೂ. ೧೦/– ನೋಟಿನಿಂದ ಪ್ರೇರೇಪಣೆ ಪಡೆದು ಮಾರನೆಯ ದಿನ ಶರಾಬು ಅಂಗಡಿಗೆ ಹೋಗಿ, ಪಾನಮತ್ತನಾದ ವ್ಯಕ್ತಿಯೊಬ್ಬನಿಂದ ರೂ. ೨೦/– ಪಡೆದು, ಆತ ಕೈಗಾಡಿಯಲ್ಲಿ ಕುಳಿತಾಗ, ಅದು ಭಗ್ನವಾಗುವುದು ಹಾಗೂ ಅದನ್ನು ಕಂಡು ಸಹೋದರರು ಕಂಬಿ ಕೀಳುವುದು, ಚೆನ್ನೈನ ಮೈಲಾಪುರದ ಮಾಲ್‌ವೊಂದರ ಮುಂದೆ ಇದ್ದ ಬೀದಿ ಬದಿಯಲ್ಲಿ ಮಾರಲ್ಪಡುತ್ತಿದ್ದ ಪಾನಿಪುರಿಯನ್ನು ಸೇವಿಸಲು ತಹತಹಿಸುವ ಶ್ರೀಮಂತ ಮಕ್ಕಳು ಹಾಗೂ ಅವರನ್ನು ತಡೆಗಟ್ಟುವ ಅವರ ತಂದೆಯ ನಡವಳಿಕೆ ಇತ್ಯಾದಿಗಳನ್ನು ವೀಕ್ಷಕರಿಗೆ ದಾಟಿಸುವುದರಲ್ಲಿ ನಿರ್ದೇಶಕರು ಸಫಲರಾಗಿದ್ದಾರೆ.

ಈ ಚಲನಚಿತ್ರದ ಪ್ರಧಾನ ಭೂಮಿಕೆಯಲ್ಲಿರುವ ಇಬ್ಬರು ಸಹೋದರರು ನಿಜ ಜೀವನದಲ್ಲಿ ಕೊಳಗೇರಿಯಲ್ಲಿ ವಾಸಿಸುತ್ತಿದ್ದಾರೆ. ಹಾಗೆಯೇ ಉಳಿದ ಆರೇಳು ಮಕ್ಕಳು ಕೂಡ. ಆ ಬಾಲನಟರೂ ಸಮರ್ಥವಾಗಿ ನಟಿಸಲು ಸಾಧ್ಯವಾಗುವಂತೆ ಮಾಡುವಲ್ಲಿ ನಿರ್ದೇಶಕರು ಸಫಲರಾಗಿದ್ದಾರೆ. 'ಚಿನ್ನ ಕಾಕಾ ಮುಟ್ಟೈ' ಪಾತ್ರಧಾರಿ ರಮೇಶ್ ಕೆಲವು ಸಂದರ್ಭಗಳಲ್ಲಿ ತನ್ನ ಕಂಗಳ ಮೂಲಕವೇ ಭಾವಾಭಿವ್ಯಕ್ತಿಯನ್ನು ವ್ಯಕ್ತಪಡಿಸಿರುವ ಪರಿ ಗಮನಾರ್ಹ. ಈ ಬಾಲನಟರು ಈಗಾಗಲೇ ರಾಷ್ಟ್ರಮಟ್ಟದ ಪ್ರಶಸ್ತಿಯನ್ನು ಗಳಿಸಿದ್ದಾರೆ. ಮೊದಲು ತಾಯಿಯ ಪಾತ್ರ ನಟಿಸಲು ನಿರಾಕರಿಸಿದ್ದ ಯುವನಟಿ ಐಶ್ವರ್ಯ ತಮ್ಮ ಪಾತ್ರಕ್ಕೆ ನ್ಯಾಯ ಒದಗಿಸಿದ್ದಾರೆ. ಡಿಗ್ಲಾಮರೈಸ್ಡ್ ಪಾತ್ರದಲ್ಲಿ ಸಹಜ ಅಭಿನಯದ ಮೂಲಕ ಗಮನ ಸೆಳೆಯುತ್ತಾರೆ. ಸಂಗೀತವೂ ಸಂದರ್ಭೋಚಿತವಾಗಿದೆ. ಆದರೆ ಚಲನಚಿತ್ರದ ಕ್ಲೈಮಾಕ್ಸ್‌ನ ದೃಶ್ಯಗಳು ನಾಟಕೀಯ ಎಂದೆನಿಸಿತು.

ಚಲನಚಿತ್ರಗಳನ್ನು 'ಕಲಾತ್ಮಕ' / 'ಪ್ರಯೋಗಾತ್ಮಕ' ಮತ್ತು 'ವ್ಯಾಪಾರಿ' ಎಂದು ವಿಭಾಗೀಕರಣ ಮಾಡುವ ಪರಿಪಾಠವಿದೆ. ಈ ತರಹದ ವರ್ಗೀಕರಣವನ್ನು ಒಪ್ಪದೆ, ಇರುವುದು 'ಒಳ್ಳೆಯ' ಮತ್ತು 'ಕೆಟ್ಟ' ಚಲನಚಿತ್ರಗಳು ಮಾತ್ರ ಎಂದು ವಾದಿಸುವವರೂ ಇದ್ದಾರೆ. 'ಕಲಾತ್ಮಕ' ಮತ್ತು 'ವ್ಯಾಪಾರಿ' ಚಲನಚಿತ್ರಗಳ ನಡುವಿನದ್ದನ್ನು 'ಬ್ರಿಜ್' ಸಿನಿಮಾ ಎಂದು ಗುರುತಿಸುವುದು ವಾಡಿಕೆ. 'ಕಾಕಾ ಮುಟ್ಟೈ' ಚಲನಚಿತ್ರವನ್ನು 'ಬ್ರಿಜ್' ಸಿನಿಮಾ ಎಂದು ಗುರುತಿಸಬಹುದೇನೋ...

ತಮಿಳು ಮತ್ತು ಮಲಯಾಳಂ ಚಲನಚಿತ್ರರಂಗದಲ್ಲಿ 'ಕಾಕಾ ಮುಟ್ಟೈ'ನಂತಹ ಪ್ರಯತ್ನಗಳು ಗಮನಾರ್ಹ ರೀತಿಯಲ್ಲಿ ನಡೆಯುತ್ತಿವೆ. ಕನ್ನಡ ಚಲನಚಿತ್ರರಂಗದಲ್ಲೂ ಮಾಮೂಲಿ ಚೌಕಟ್ಟಿನಿಂದಾಚೆ ಸಿನಿಮಾಗಳನ್ನು ತಯಾರಿಸುತ್ತಿರುವ / ನಿರ್ದೇಶಿಸುತ್ತಿರುವ ಉತ್ಸಾಹಿಗಳಿದ್ದಾರೆ. ಆದರೆ ಅಂತಹವರ ಸಂಖ್ಯೆ ಕಡಿಮೆ. ಚರ್ವಿತ ಚರ್ವಣ. ಸೂತ್ರಬದ್ಧ, ಕ್ಲೀಷೆ ಎನ್ನಬಹುದಾದ ಚಲನಚಿತ್ರಗಳಿಗಿಂತ ಭಿನ್ನವಾದುವುಗಳು ಕನ್ನಡ ಚಲನಚಿತ್ರರಂಗದಿಂದ ಹೊರಬರಲಿ ಎಂದು ಆಶಿಸೋಣ...

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜಾಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

# 'ಗೊಂದಲಿಗ್ಯಾ' ಎಂಬ ಸಮೂಹ ಕಥನ

ನಾನು ಓದಿದ ಪುಸ್ತಕ




*ಲೇಖಕರು :*
**ಎ. ಎಂ. ಮದರಿ**
ಪುಟಗಳು : ೨೬೦, ಬೆಲೆ : ರೂ. ೧೫೦/-
*ಪ್ರಕಾಶಕರು :*
ಲೋಹಿಯಾ ಪ್ರಕಾಶನ, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ – ೫೮೩ ೧೦೩

'ಬದುಕಲೂ ಆಗದ, ಸಾಯಲೂ ಆಗದ ಕೊಳಗೇರಿ, ಗುಡಿಸಲುಗಳಲ್ಲಿ – ಬದುಕು ಸವೆಸುತ್ತಿರುವ ನನ್ನ ಜನಾಂಗದ ಅಸಹಾಯಕರಿಗೆ' ಎಂಬ ಸಾಲುಗಳ ಅರ್ಪಣೆಯಿಂದ ಆತ್ಮಕಥೆ ಆರಂಭವಾದಾಗ ಇದೊಂದು ಸಾಮಾನ್ಯ ಜನಾಂಗೀಯ ಬರಹ ಎನಿಸಬಹುದು. ಆದರೆ 'ಗೊಂದಲಿಗ್ಯಾ' ಬರೀ ಆತ್ಮಕಥೆಯಾಗದೆ ಒಂದು ಸಮೂಹ ಕಥನವಾಗಿ ಹೊರಹೊಮ್ಮಿದೆ. ಅಂತಲೇ ೨೦೧೨ರಲ್ಲಿ ಮುದ್ರಿತವಾದ ಈ ಕೃತಿಯು ೨೦೧೪ರಲ್ಲಿ ದ್ವಿತೀಯ ಮುದ್ರಣ ಕಂಡಿದ್ದು, ಕರ್ನಾಟಕ ವಿ.ವಿ.ಯ 'ಪ್ರೊ॥ ಸ. ಸ. ಮಾಳವಾಡ ಪ್ರಶಸ್ತಿ', ಕ.ಸಾ.ಪ.ದ 'ನಿಡಸಾಲೆ ಪುಟ್ಟಸ್ವಾಮಯ್ಯ ದತ್ತಿನಿಧಿ ಪ್ರಶಸ್ತಿ', ನರೇಗಲ್‌ನ 'ಬಾಲಕೃಷ್ಣ ಸಾಹಿತ್ಯ ಪುರಸ್ಕಾರ' ಮತ್ತು ಕಲಬುರಗಿಯ 'ಕನ್ನಡನಾಡು ಲೇಖಕರ ಮತ್ತು ಓದುಗರ ಒಕ್ಕೂಟ ನಿಯಮಿತ ಸಾಹಿತ್ಯ ಪ್ರಶಸ್ತಿ'ಗಳು ದೊರೆತಿವೆ.

ಪುಸ್ತಕವನ್ನು ಓದಿದಾಗ ಲೇಖಕರ ಜೀವನದ ಹಲವು ಘಟನೆಗಳು ಬಹುಕಾಲ ಓದುಗನ ಮನಸ್ಸಿನಲ್ಲುಳಿದು ನಮ್ಮ ಸಮಾಜದ ಬಗೆಗೆ ವಿಮರ್ಶೆ ಮಾಡಿಕೊಳ್ಳುವಂತೆ ಮಾಡುತ್ತವೆ. ಗೊಂದಲಿಗರು ಹೊಟ್ಟೆಪಾಡಿಗಾಗಿ ಊರಿಂದೂರಿಗೆ ಹೋಗಿ, ಠಿಕಾಣಿ ಹೂಡುವುದು, ವ್ಯಾಪಾರ ಮಾಡುವುದು, ಮತ್ತೆ ವ್ಯಾಪಾರ ಕುಂದಿದಾಗ ಮುಂದಿನ ಊರಿಗೆ ಹೋಗುವುದು, ಅವರ ಬದುಕಿನ ವಿಧಾನವೇ ಆದ ಈ 'ಮುಸಾಫರ', ಅಲ್ಲಿ ನಡೆವ ಹಲವು ಘಟನೆಗಳು ಮೊನಚಾಗಿ ಓದುಗನನ್ನು ಚುಚ್ಚುತ್ತವೆ ; ಮುಸಾಫರಕ್ಕೆ ಹೊರಡುವಾಗ – ಅತಂತ್ರ ಬದುಕಿನ ವಿಧಾನ ದಿಂದಾಗಿ – ಪರಸ್ಪರರು ಬೀಳ್ಕೊಡುವಾಗ "ರಾಮ್ ರಾಮ್, ಬದುಕಿದ್ದರೆ ಮತ್ತೆ ಮುಂದಿನ ವರ್ಷ ಭೇಟಿಯಾಗೋಣ" ಎಂದು ಹೇಳುವುದು, ಗೊಂದಲಿಗ ಹೆಣ್ಣುಮಕ್ಕಳು ಸ್ನಾನ ಮಾಡುವಾಗ ಬೇಕಂತಲೇ ಚೆಂಡು ಹೊಡೆಯುವ ಕಿಡಿಗೇಡಿಗಳು, ಮಳೆ ಬಂದು ಕೂಸನ್ನು ಮಲಗಿಸಲು ಜಾಗವಿಲ್ಲದಿರುವ ವೇಳೆಯಲ್ಲೂ ಊರಿನ ಇತರ ಜನಾಂಗದವರು ಗೊಂದಲಿಗ ದಂಪತಿಯನ್ನು ಗುಡಿಯಿಂದ ಹೊರಹಾಕಲೆತ್ನಿಸುವುದು, ಲೇಖಕರು ಚಿಕ್ಕವನಿದ್ದಾಗ ಬಾಯಿ ಪಕ್ಕಕ್ಕೆ ಸರಿದು ಯಾವ ಊರಿನ ಯಾವ ಓಣಿಯಲ್ಲಿ ಅಪ್ಪನಿರುವನೆಂಬುದೇ ಗೊತ್ತಿಲ್ಲದೆ ಹುಡುಕುತ್ತಾ ಹೋಗುವುದು, ಗೊಂದಲಿಗನೆಂಬ ಕಾರಣಕ್ಕೆ ಸಹೋದ್ಯೋಗಿಯೋರ್ವನು ತೋರುವ ಅಕಾರಣ ಈರ್ಷ್ಯೆ, "ನಮ್ಮ ಜೀವನದಲ್ಲಿ ಎಂದೂ ಸಂತಿ ಮಾಡಿದವರಲ್ಲ. ಅಂದು ದುಡಿದು ಅಂದೇ ಉಣ್ಣುವವರಿಗೆ ಸಂತೆ ಮುಖ್ಯವಾಗಿರಲಿಲ್ಲ. ನಾಳಿನ ಚಿಂತೆಯಿರಲಿಲ್ಲ" ಎಂಬಂಥ ಸಾಲು, ವಿಜ್ಞಾನ ಶಿಕ್ಷಕನ ಹುದ್ದೆಯ ನೇಮಕಾತಿ ಮಾಡಿಕೊಳ್ಳುವುದಾಗಿ ನೌಕರಿಗೆ ಸೇರಿಸಿಕೊಂಡು ಕಡೆಗೆ ಸಿಪಾಯಿ (ಜವಾನ) ಆಗಿ ಇರು ಎಂದು ಹೇಳುವ ವಿದ್ಯಾ ಸಂಸ್ಥೆಗಳ 'ಜಾತಿ ರಾಜಕೀಯ', ...ಇತ್ಯಾದಿ ಉದಾಹರಣೆಗಳು ಥೆ ! ನಿಜವಾಗಲೂ ನಾವು ಎಂಥ ಸಮಾಜವನ್ನು ಸೃಷ್ಟಿಸಿಕೊಂಡಿದ್ದೇವೆ ಎನಿಸುವಂತೆ ಮಾಡುತ್ತವೆ.

ಆಲೂರಿನ ಕಷ್ಟದ ದಿನಗಳಲ್ಲೂ ಅವ್ವನಿರುವವರೆಗೆ ಒಂದು ಸೂತ್ರದಲ್ಲಿ ಬಂಧಿತವಾಗಿದ್ದ ಬದುಕು, ಗರ್ಭಪಾತವಾದಾಗ ಆಕೆ ಮೈಲುಗಟ್ಟಲೇ ನಡೆದುಕೊಂಡು ಬಂದು ಊರು ಸೇರುವುದು, ಅನಾರೋಗ್ಯಪೀಡಿತ ಅಪ್ಪನನ್ನು ಚಕ್ಕಡಿಯಲ್ಲಿ ಕೂಡಿಸಿಕೊಂಡು ಯಾರೂ ಎತ್ತುಗಳನ್ನು ಕೊಡದೆ ಇದ್ದಾಗ ತಮ್ಮನೊಡನೆ ಎದೆ ಕೊಟ್ಟು ಸ್ಟೇಶನ್‌ವರೆಗೆ ಆ ಚಕ್ಕಡಿಯನ್ನು ಎಳೆದು ತರುವುದು, ಉಳ್ಳವರ ಉಪೇಕ್ಷೆ, 'ಗೊಂದಲಿಗ್ಯಾ', 'ದೋಸಿಗ್ಯಾ' ಎಂಬಂಥ ನಿಂದನೆಗಳು ನಾಮಪದಗಳೇ ಆಗಿ ಬೆಂಬತ್ತುವುದು, ಅವ್ವ ಸತ್ತ ಮೇಲೆ ತಮ್ಮ ತಂಗಿಯರು ಅಕ್ಕಪಕ್ಕದ ಮನೆಯವರು ಅನುಕಂಪದಿಂದ ನೀಡಿದ ತಿಂಡಿಯನ್ನು ಬಡಿದಾಡಿಕೊಂಡು ತಿನ್ನುತ್ತಿದ್ದ ಉಪವಾಸದ ದಿನಗಳು, ಅವರಿವರ ಕಡೆ ಸಾಲ ಮಾಡಿ ನಿರಂತರ ತನ್ನ ಮತ್ತು ತಂಗಿಯರ ಸಂಸಾರದ ನೊಗ ಹೊರುವುದು, ಮುಂದೆ ಲೇಖಕರು ಕೊಪ್ಪಳದಲ್ಲಿ

**ಮಹೇಶ್ವರಿ ಕೋಟಿ**

ಗೊಂದಲಿಗ ಸಮಾಜದ ಪ್ರಮುಖ ಉದ್ಯೋಗಗಳು ಪಾತ್ರೆಗಳ ಕಲಾಯಿಮಾಡುವುದು, ಹಳೆ ಬಟ್ಟೆ ವ್ಯಾಪಾರ, ಬುಡುಬುಡಿಕೆತನ, ಗೊಂದಲಹಾಕುವುದು, ಕಥೆಗಳ ಅಭಿನಯ, ಸಂಬಾಳ ಬಾರಿಸುತ್ತ ಲಾವಣಿ ಪದ ಹಾಡುವುದು ಇತ್ಯಾದಿಗಳಾಗಿವೆ. 'ಗೊಂದಲ' ಹಾಕುವವರು ಬುಡುಬುಡಿಕೆ ಹೇಳುವಂತಿಲ್ಲ : ಬುಡುಬುಡಿಕೆ ಹೇಳುವವರು ಗೊಂದಲ ಹಾಕುವಂತಿಲ್ಲ ಎಂಬಂಥ ವೃತ್ತಿ ಬದ್ಧತೆಯೂ ಈ ಜನರಲ್ಲಿದೆ. ಆದರೆ ಹೆಚ್ಚಾಗಿ ಅನಕ್ಷರಸ್ಥರೇ ತುಂಬಿರುವ ಈ ಜನರಿಗೆ ಆಧುನಿಕತೆಯ ಪರಿಣಾಮದಿಂದಾಗಿ ಇಂಥ ಉದ್ಯೋಗಗಳಿಂದ ಜೀವನ ನಿರ್ವಹಣೆಯಾಗದೆ ಉಂಟಾಗುತ್ತಿರುವ ತೊಂದರೆಗಳ ಬಗ್ಗೆಯೂ ಲೇಖಕರು ಚಿಂತಿಸುತ್ತಾರೆ. ತಮ್ಮ ಜನಾಂಗದವರ ಮುಗ್ಧತೆಯ ಜೊತೆ ಜೊತೆಗೇ ಬದುಕು ಅವರಲ್ಲಿ ಸೃಷ್ಟಿಸಿ ಪೋಷಿಸುವ ವಂಚನೆಯನ್ನೂ ಮದರಿಯವರು ಇಲ್ಲಿ ಯಾವುದೇ ಅಳುಕಿಲ್ಲದೇ ಬಿಚ್ಚಿಡುತ್ತಾರೆ.

ಶಿಕ್ಷಕನಾಗಿದ್ದ ದಿನದಲ್ಲಿ ಒಂದು ದಿನ ಸ್ನೇಹಿತರೊಡನೆ ಹೊರಗೆ ಹೋದಾಗ ಸ್ವಂತ ತಂಗಿಯ ಮಗನೇ ಇವರಲ್ಲಿ ಭಿಕ್ಷೆ ಬೇಡಲು ಎದುರಾಗುವ ಘಟನೆಗಳು ಎಂಥವರ ಕಲ್ಲು ಹೃದಯವನ್ನೂ ಅಲುಗಾಡಿಸಿಬಿಡುತ್ತವೆ.

ಬಾಲ್ಯದಲ್ಲಂತೂ ಗೊಂದಲಿಗರ ಮಕ್ಕಳೆಂಬ ಕಾರಣಕ್ಕೆ ಯಾರು ಬೇಕಾದರೂ ತಮ್ಮ ಕೆಲಸಗಳನ್ನು ಮಾಡಿಸಿಕೊಳ್ಳುವುದು ಮತ್ತು ವಿನಾಕಾರಣ ಪದೇ ಪದೇ ದೈಹಿಕ ದಂಡನೆಗೊಳಗಾದ ಸನ್ನಿವೇಶಗಳಂತೂ ತೀರಾ ಅಮಾನವೀಯ! ಇಷ್ಟಾಗಿಯೂ ಇಲ್ಲೆಲ್ಲೂ ತಮಗಾದ ಸಾಮಾಜಿಕ ಅನ್ಯಾಯ ಮತ್ತು ಶೋಷಣೆಗೆ ಲೇಖಕರು ಪ್ರತೀಕಾರದ ಭಾವನೆ ಬಿತ್ತಲೆತ್ನಿಸುವುದಿಲ್ಲ! ಯಾರ ಮೇಲೂ ದ್ವೇಷ ಕಾರುವುದಿಲ್ಲ! ಇಷ್ಟೆಲ್ಲ ಸಹಿಸಿಕೊಂಡರಾದರೂ ಏಕೆ? ಎಂದು ಅನ್ನಿಸಿದಾಗ ಅಂದಿನ ಸಮಾಜ-ಜಾತಿ ವ್ಯವಸ್ಥೆ ವ್ಯಕ್ತಿಯೋರ್ವನಿಗೆ ಸಹಿಸುವಿಕೆಯನ್ನು ಎಷ್ಟು ವ್ಯವಸ್ಥಿತವಾಗಿ ರೂಢಿಸಿಬಿಟ್ಟಿತ್ತು! ಎನ್ನುವ ಸತ್ಯ ಹೊಳೆಯುತ್ತದೆ. ಬಯಲು ರೋದನಕ್ಕೆ ಬೆಲೆಯೆಲ್ಲಿ? ಅಲ್ಲವೇ? ನಿರೂಪಣೆಯ ಇಡೀ ಭಾಗದಲ್ಲಿ ಎಲ್ಲಿಯೂ ಮದರಿಯವರು ಎಳೆ ತಪ್ಪಿ ಯಾರನ್ನೂ ಶಪಿಸುವುದಿಲ್ಲ. ಚಿಕ್ಕಂದಿನಲ್ಲಿ ಹೊಳೆ ಆಲೂರಿನಲ್ಲಿದ್ದಾಗ ಹಕ್ಕಾಪಕ್ಕಿಯವರ ಮನೆಯ ಹುಡುಗನು ವಿನಾಕಾರಣ ಮದರಿಯವರನ್ನು ಹೊಡೆದು ಗಾಯ ಮಾಡಿರುತ್ತಾನೆ. ಮಕ್ಕಳಿಗೆ ಬುದ್ಧಿ ಹೇಳಿ ಎಂದು ಆ ಹುಡುಗನ ಪಾಲಕರನ್ನು ಕೇಳಿಕೊಳ್ಳಲು ಹೋದ ಇವರ ಮಾವನನ್ನೂ ಹುಡುಕಿಕೊಂಡು ಬಂದು ಅವರ ಆಳುಗಳು ಹೊಡೆದು ಹೋಗುವ ಘಟನೆಯಲ್ಲಿ



ನೀವು ಸಾಲಕೊಡುವುದಿಲ್ಲಾ, ನಮ್ಮ ಬ್ಯಾಂಕ್ ನಿಂದ ಸಾಲಕೊಡಿಸುತ್ತೇನೆ ಬನ್ನಿ ಬುದ್ದಿ...!

ಮಾತ್ರ, "ಆ ರೀತಿ ದೌರ್ಜನ್ಯ ನಡೆಸಿದ ಎಷ್ಟೋ ಸಾವ್ಕಾರ ಮನೆತನಗಳು ಇಂದು ಹೇಳಹೆಸರಿಲ್ಲ ದಂತಾಗಿವೆ. ಕಾಲವೆನ್ನುವುದು ದೊಡ್ಡ ನ್ಯಾಯಾಧೀಶ" ಎಂಬಲ್ಲಿ ಮಾತ್ರ ಅವರು ಅನುಭವಿಸಿದ ದೇಹಯಾತನೆಗಿಂತಲೂ ಆಳವಾದ ಮನೋವೇದನೆಯ ನಿಟ್ಟುಸಿರು ಹೊರಬೀಳುತ್ತದೆ.

ಕೃತಿಯಲ್ಲಿ ಗೊಂದಲಿಗ ಸಮಾಜದ ಮಕ್ಕಳು ವಿದ್ಯೆಗಾಗಿ ಪಡುವ ಪಾಡು ಲೇಖಕರ ವಿದ್ಯಾರ್ಥಿ ಜೀವನದ ನಿದರ್ಶನದೊಂದಿಗೆ ನಿರೂಪಿಸಲ್ಪಟ್ಟಿದೆ. ಛಲದಿಂದ ವಿದ್ಯೆಯನ್ನು ದಕ್ಕಿಸಿಕೊಂಡ ಲೇಖಕರ ಪ್ರಯತ್ನದ ಹಿಂದೆ ಅವರ ತಂದೆಯ ಮನೋಬಲವೂ ಅಷ್ಟೇ ಮಹತ್ವದ್ದಾಗಿ ನಿಲ್ಲುತ್ತದೆ. ಮುಂದೆ ಶಿಕ್ಷಕ ವೃತ್ತಿಯಿಂದ ಜಿಲ್ಲಾ ಖಜಾನಾಧಿಕಾರಿಯಂಥ ಉನ್ನತ ಹುದ್ದೆಗೆ ಬದಲಾಗುತ್ತಾ – ಬೆಳೆಯುತ್ತಾ ಹೋದದ್ದು ಅವರ ಸಾಮರ್ಥ್ಯ ಮತ್ತು ಜೀವನ್ಮುಖಿ ಮನಃಶಕ್ತಿಗೆ ಸಾಕ್ಷಿ. ಬಾಲ್ಯದಲ್ಲಿ ಅವರು ಶಿಕ್ಷಣ ಪಡೆದುಕೊಳ್ಳಲು ಪಟ್ಟ ಪಡಿಪಾಟಲು ಇಲ್ಲಿ ಸಾರ್ಥಕ್ಯ ಪಡೆದುಕೊಳ್ಳುತ್ತದೆ. ತರಗತಿಯ ಘಟನೆಗಳು, ಹಾಸ್ಟೆಲ್ ಸಮಸ್ಯೆ, ಅವ್ವ ಸತ್ತಾಗ ಅಪ್ಪನೇ 'ಕುಳ್ಳಿನಂಥ ರೊಟ್ಟಿ' ಮಾಡಿ ಬುತ್ತಿ ಕಟ್ಟಿ ಕಳುಹಿಸುತ್ತಿದ್ದುದು, ಓರಗೆಯವರ ಸಹಾಯ-ಸಹಕಾರ, ಗೆಳೆಯನ ನಿಧನ ಮತ್ತು ಆಪಾದನೆ, ಸ್ನೇಹಿತರ ಬೆಂಬಲ, ಚಂದಾ ಕಾಕಾ ಬೆನ್ನೆಲುಬಾಗಿ ನಿಂತದ್ದು, ಎಲ್ಲವನ್ನೂ ಲೇಖಕರು ತುಂಬ ಹೃದಯಾಳದಿಂದ ಸ್ಮರಿಸಿಕೊಳ್ಳುತ್ತಾರೆ.

ಕನಕಗಿರಿ ಮತ್ತು ಕೊಪ್ಪಳದಲ್ಲಿ ಕಳೆದ ದಿನಗಳನ್ನು, ವೃತ್ತಿ ಸ್ನೇಹಿತರನ್ನು, ಸಾಹಿತ್ಯಿಕ ಚಟುವಟಿಕೆಗಳನ್ನು ಅವರು ತುಂಬ ಪ್ರೀತಿಯಿಂದ ಬರೆದುಕೊಳ್ಳುತ್ತಾರೆ. 'ಕನಕಗಿರಿಯಲ್ಲಿ ಒಂದಷ್ಟು ದಿನ ನೆಮ್ಮದಿಯಿಂದ ಕಳೆದೆವು. ಆ ದಿನಗಳು ನನಗೂ ನನ್ನ ಹೆಂಡತಿಗೂ ಓಯಸಿಸ್ ಇದ್ದಂತೆ' ಎನ್ನುವಷ್ಟರಮಟ್ಟಿಗೆ ಮುಂದೆಯೂ ಕೂಡ ಈ ಅವಧಿಗಿಂತ ಜೀವನದಲ್ಲಿ ಕಷ್ಟದ ದಿನಗಳನ್ನೇ ಅವರು ಎದುರಿಸುತ್ತಾರೆ.

ಮದರಿಯವರು ಗೊಂದಲಿಗ ಸಮಾಜದ ರೀತಿ ರಿವಾಜುಗಳ ಬಗ್ಗೆ ಓದುಗನಿಗೆ ಬೇಸರವೆನಿಸದ ಹಾಗೆ ಸಂಕ್ಷಿಪ್ತವಾಗಿ ಮಾಹಿತಿ ನೀಡುತ್ತಾರೆ. ಆಷಾಢ ಮಾಸದಲ್ಲಿ ಎಷ್ಟೇ ದೂರದಲ್ಲಿದ್ದರೂ ಮೂಲ ಊರಿಗೆ ಬಂದು ಸೇರುವ ಗೊಂದಲಿಗರು ಒಟ್ಟಾಗಿ ಮೀನು ಹಿಡಿದು ಆಯಾ ಮನೆಯ ಜನರ ಸಂಖ್ಯೆಗೆ

# ಪ್ರೀತಿ

ಕಾವ್ಯಲೋಕ



ಪ್ರೀತಿಸುವೆನು ನಾನು
ಎದೆ ಎದೆಗಳಲಿ ದ್ವೇಷ ಆರುವ ತನಕ
ಪ್ರೀತಿಸುವೆನು ನಾನು
ಹಗೆತನಗಳು ಕೊನೆಗಾಣುವ ತನಕ

ಪ್ರೀತಿಸುವೆನು ನಾನು
ಬಿತ್ತಿದ ಬೀಜ ಮೊಳಕೆಯೊಡೆಯುವ ತನಕ
ಪ್ರೀತಿಸುವೆನು ನಾನು
ಬುವಿ ಬಸಿರ ಸಸಿ ಮರವಾಗುವ ತನಕ

ಪ್ರೀತಿಸುವೆನು ನಾನು
ಕಣ್ಣ ಸ್ಫೋಟಕಗಳು ಕಂಬನಿಯಾಗುವ ತನಕ
ಪ್ರೀತಿಸುವೆನು ನಾನು
ಉರಿಗಾರುವ ಮಾತು ಹೆಪ್ಪಾಗುವ ತನಕ

ಪ್ರೀತಿಸುವೆನು ನಾನು
ಅಗಲಿದ ಹೆಗಲುಗಳು ಒಂದಾಗುವ ತನಕ

ಪ್ರೀತಿಸುವೆನು ನಾನು
ವೈರತ್ವದ ಚೂರಿ ಹೂವಾಗುವ ತನಕ

ಪ್ರೀತಿಸುವೆನು ನಾನು
ಗುಡುಗು ಸಿಡಿಲುಗಳು ಜೀವದಾಯಿನಿಯಾಗುವ ತನಕ
ಪ್ರೀತಿಸುವೆನು ನಾನು
ಕುದಿವ ಎದೆಗಳು ತಣ್ಣಗಾಗುವ ತನಕ

ಪ್ರೀತಿಸುವೆನು ನಾನು
ಅಕ್ಷರಗಳೆಲ್ಲ ಪದ್ಯವಾಗುವ ತನಕ
ಪ್ರೀತಿಸುವೆನು ನಾನು
ನನ್ನೊಳಗಿನ ನಾನು ಇಲ್ಲವಾಗುವ ತನಕ

**ಸಿದ್ಧರಾಮ ಹಿರೇಮಠ**
ಬಾಪೂಜಿ ನಗರ, ಕೂಡ್ಲಿಗಿ, ಬಳ್ಳಾರಿ ಜಿಲ್ಲೆ

ಅನುಗುಣವಾಗಿ ಹಂಚಿಕೊಳ್ಳುವುದು, ಸಂಬಾಳ ಬಾರಿಸುವುದು, ಹಾಡುವುದು, ನ್ಯಾಯ ನಿಬದ್ದೆಗಳನ್ನು ಪಂಚಾಯಿತಿ ಮಾಡಿ ಬಗೆಹರಿಸಿಕೊಳ್ಳುವುದು, ಇದೇ ಅವಧಿಯಲ್ಲಿ ಬೀಗತನದ ಪ್ರಸ್ತಾಪ – ಅದಕ್ಕೆ ಓಣಿಯ ಹಿರಿಯರ ಸಮ್ಮತಿ, ಎಲ್ಲವೂ ಆಷಾಢದ ಈ ಭೇಟಿಯಲ್ಲೇ ನಡೆಯಬೇಕು. ನಂತರ 'ರಾಮ್ ರಾಮ್' ಹೇಳುತ್ತ ಕುಟುಂಬ ಸಮೇತರಾಗಿ ಮತ್ತೆ 'ಮುಸಾಫರ'ಕ್ಕೆ ಹೊರಡುವುದು. ಈ ಅಲೆದಾಟದಲ್ಲಿ ಜನರ ಒಡನಾಟ, ಗೊಂದಲ ಹಾಕಲು ಹೋಗುವುದು, ಪಾತ್ರೆ ಕಲಾಯಿ ಮಾಡುವುದು, ಬುಡುಬುಡಿಕೆ ಭವಿಷ್ಯ ಹೇಳುವುದು ಇತ್ಯಾದಿ ನಡೆಯುತ್ತವೆ.

ಗೊಂದಲಿಗರಲ್ಲಿ ಹೆಣ್ಣಿನ ಸ್ಥಾನಮಾನದ ಬಗೆಗೆ ಇಲ್ಲಿ ಬೆಳಕು ಚೆಲ್ಲಲಾಗಿದೆ. ಒಂದು ಕಡೆ ಈ ಸಮುದಾಯದಲ್ಲಿ ಹೆಣ್ಣುಮಕ್ಕಳೇ ದುಡಿಯಬೇಕು. ಗಂಡಸು ಆ ಆದಾಯವನ್ನು ಅನುಭವಿಸಬೇಕೆಂಬ ಮನೋಭಾವನೆ. ಇನ್ನೊಂದು ಕಡೆ ವಿಧವೆಗೂ ಮತ್ತೆ ಬದುಕು ಕಲ್ಪಿಸುವ ಸಲುವಾಗಿ ಮರುಮದುವೆ ಮಾಡುವ 'ಉಡಿಕೆ' ಪದ್ಧತಿ ! ಹೆಂಡತಿಗೆ 'ನಿನ್ನೌನ' ಎಂದು ಬೈದವನಿಗೆ ಗೊಂದಲಿಗ ಪಂಚಾಯಿತಿ ಮಾಡಿ ದಂಡ ವಿಧಿಸುವುದು ! ಇವು ಹೆಣ್ಣಿನ ಬಗ್ಗೆ ಈ ಸಮುದಾಯದ ಎರಡು ವಿರುದ್ಧ ಮನೋಭಾವವನ್ನು ತೋರಿಸುತ್ತವೆ.

ಗೊಂದಲಿಗ ನ್ಯಾಯ ಪದ್ಧತಿಯ ವಿಶಿಷ್ಟತೆಯೂ ಇಲ್ಲಿ ಅನಾವರಣಗೊಂಡಿದೆ. ತಮ್ಮ ಗೊಂದಲಿಗ ಓಣಿಯಲ್ಲಿ ನ್ಯಾಯ ಬಗೆಹರಿಯದಿದ್ದರೆ ಹೆಚ್ಚು ಪ್ರಸಿದ್ಧವಿರುವ ಮುಂದಿನ ಊರಿಗೆ ಹೋಗುವುದು, ಮಹಾರಾಷ್ಟ್ರದ 'ಗೌಡಗಾಂವ' ಪಂಚಾಯಿತಿ ಸುಪ್ರೀಂ ಕೋರ್ಟ್‌ನಂತೆ ಇದ್ದದ್ದು, ನ್ಯಾಯ ಮಂಡನೆಗಾಗೇ ವಕೀಲರಂತಿದ್ದ 'ಬೋಲಾಗಳು', ನ್ಯಾಯಾಧೀಶರ ಸ್ಥಾನದಲ್ಲಿ ಪಂಚರು ಎಲ್ಲವೂ ಇಲ್ಲಿನ ನ್ಯಾಯ ಪದ್ಧತಿಯಲ್ಲಿವೆ. ಇಂಥ ನ್ಯಾಯ ಪದ್ಧತಿಯ ವಿಧಾನಕ್ಕೆ ಕೆಲವು ಉದಾಹರಣೆಗಳೂ ಇಲ್ಲಿವೆ. ಭೀಮಪ್ಪ ಎಂಬಾತನ ಹೆಂಡತಿ ಯಾರ ಜೊತೆಗೊ ಓಡಿ ಹೋಗಿರುತ್ತಾಳೆ. ಆಕೆಯನ್ನು ಹಿರಿಯರು ಹಿಡಿದು ತರಿಸುತ್ತಾರೆ. ಗಂಡ, ಹೆಂಡತಿ ಮತ್ತು ಪ್ರಿಯಕರನಿಗೂ ತಮ್ಮ ವಿಚಾರಗಳನ್ನು ಹಿರಿಯರ ಮುಂದಿಡಲು ಅವಕಾಶ ದೊರೆಯುತ್ತದೆ. ಭೀಮಪ್ಪನಿಗೆ ಗಂಡಸುತನವೇ ಇಲ್ಲ ಎಂಬ ವಿಷಯವನ್ನು ಆತನ ಹೆಂಡತಿ ಬಹಿರಂಗಪಡಿಸಿದಾಗ, ಒಬ್ಬಿಬ್ಬರು ಸೂಳೆಯರ ಹತ್ತಿರ ಆತನನ್ನು ಕರೆದೊಯ್ದು ಸತ್ಯಾಂಶವನ್ನು ಖಾತರಿಪಡಿಸಿಕೊಳ್ಳಲಾಗಿ, ಭೀಮಪ್ಪನ ಹೆಂಡತಿಗೆ ಆಕೆಯ ಪ್ರಿಯಕರನೊಂದಿಗೆ 'ಉಡಿಕೆ' (ಮರು ಮದುವೆ) ಮಾಡಲಾಗುತ್ತದೆ. ಇನ್ನೊಂದು ಘಟನೆಯಲ್ಲಿ ವ್ಯಕ್ತಿಯೊಬ್ಬ 'ನಿನ್ನ ಚಪ್ಪಲಿಯಿಂದ ಹೊಡಿತೀನಿ' ಎಂದದ್ದಕ್ಕೆ ಕಾಲಲ್ಲಿ ಮೆಡುವ ವಸ್ತುವನ್ನು ಹೇಳಿದ್ದಕ್ಕೆ ಆತನ ಬಾಯಿ ಹೊಲಸಾಯಿತೆಂದು ಪಂಚರು ತೀರ್ಮಾನಿಸಿ ಬಾಯಿ ತೊಳೆಸಿ ಶುದ್ಧೀಕರಣ ಮಾಡಿಸುತ್ತಾರೆ. ಇನ್ನು ಇದಾಗಲೇ ಪ್ರಸ್ತಾಪಿಸಿದಂತೆ ಹೆಂಡತಿಯನ್ನು 'ನಿನ್ನೌನ' ಎಂದವನಿಗೆ ಶಿಕ್ಷೆ ವಿಧಿಸಿದ ಘಟನೆಯಂತೂ ಇತರ ಜಾತಿಗಳ ಜನಕ್ಕೆ ವಿಚಿತ್ರ ಎನಿಸದೇ ಇರಲಾರದು.

ಗೊಂದಲಿಗ ಸಮಾಜದ ಪ್ರಮುಖ ಉದ್ಯೋಗಗಳು ಪಾತ್ರೆಗಳ ಕಲಾಯಿಮಾಡುವುದು, ಹಳೆ ಬಟ್ಟೆ ವ್ಯಾಪಾರ, ಬುಡುಬುಡಿಕೆತನ, ಗೊಂದಲ ಹಾಕುವುದು, ಕಥೆಗಳ ಅಭಿನಯ, ಸಂಬಾಳ ಬಾರಿಸುತ್ತ ಲಾವಣಿ ಪದ ಹಾಡುವುದು ಇತ್ಯಾದಿಗಳಾಗಿವೆ. 'ಗೊಂದಲ' ಹಾಕುವವರು ಬುಡುಬುಡಿಕೆ ಹೇಳುವಂತಿಲ್ಲ: ಬುಡುಬುಡಿಕೆ ಹೇಳುವವರು ಗೊಂದಲ ಹಾಕುವಂತಿಲ್ಲ ಎಂಬಂಥ ವೃತ್ತಿ ಬದ್ಧತೆಯೂ ಈ ಜನರಲ್ಲಿದೆ. ಆದರೆ ಹೆಚ್ಚಾಗಿ ಅನಕ್ಷರಸ್ಥರೇ ತುಂಬಿರುವ ಈ ಜನರಿಗೆ ಆಧುನಿಕತೆಯ ಪರಿಣಾಮದಿಂದಾಗಿ ಇಂಥ ಉದ್ಯೋಗಗಳಿಂದ ಜೀವನ ನಿರ್ವಹಣೆಯಾಗದೆ ಉಂಟಾಗುತ್ತಿರುವ ತೊಂದರೆಗಳ ಬಗ್ಗೆಯೂ ಲೇಖಕರು ಚಿಂತಿಸುತ್ತಾರೆ. ತಮ್ಮ ಜನಾಂಗದವರ ಮುಗ್ಧತೆಯ ಜೊತೆ ಜೊತೆಗೇ ಬದುಕು ಅವರಲ್ಲಿ ಸೃಷ್ಟಿಸಿ ಪೋಷಿಸುವ ವಂಚನೆಯನ್ನೂ ಮದರಿಯವರು ಇಲ್ಲಿ ಯಾವುದೇ ಅಳುಕಿಲ್ಲದೆ ಬಿಚ್ಚಿಡುತ್ತಾರೆ. ಬಾಯಲ್ಲಿ ಮರಳು ಹಾಕಿಕೊಂಡು ಕಣ್ಣಲ್ಲಿನ ಧೂಳು ತೆಗೆಯುತ್ತೇನೆ ಎನ್ನುವುದು, ಮೀನು ಹಿಡಿಯಲು ಹೇಳಿದಾಗ ಕೈಗೆ ಸಿಕ್ಕ ಮೀನನ್ನು ಮುರಿದು ಬಚ್ಚಿಟ್ಟು ಎಲ್ಲರೂ ಹೋದ ನಂತರ ಮತ್ತೆ ಅದನ್ನು ತೆಗೆದುಕೊಂಡು ಹೋಗುವ ಅವರ ಚಿಕ್ಕಪ್ಪ, ಬುಡುಬುಡಿಕೆಯ ಉದ್ಯೋಗ ಮಾಡಿಕೊಂಡು ಹೆಣ್ಣನ್ನು ಹಾರಿಸಿಕೊಂಡು ಬಂದವನ ಸುದ್ದಿ, ಎಲ್ಲವನ್ನೂ. ಇಲ್ಲಿ ಹೇಳಲೇಬೇಕು. ಮದರಿಯವರ ಅಜ್ಜ ಲಾವಣಿ ಪದಗಳನ್ನು ರಚಿಸುತ್ತಿದ್ದರಂತೆ. ಅವರ ತಂದೆಯವರೂ ಕೂಡ ಪದಗಳ ಜೊತೆಗೆ ನಾಟಕಗಳನ್ನೂ ರಚಿಸುತ್ತಿದ್ದರಂತೆ. ಇವೆಲ್ಲ ನಂತರ ಮದರಿಯವರೂ ಕನ್ನಡ ಸಾಹಿತ್ಯಕ್ಕೆ ಒಂದಷ್ಟು ನುಡಿಸೇವೆ ಸಲ್ಲಿಸಲು ಸಾಂಸ್ಕೃತಿಕ ಹಿನ್ನೆಲೆ ಒದಗಿಸಿವೆ ಎನ್ನಬಹುದು. ಅವರ ತಂದೆ ರಚಿಸಿದ ಲಾವಣಿಗಳನ್ನು ಹಾಡಿದವರು ಪ್ರಶಸ್ತಿಗಳನ್ನು ಪಡೆದರೂ ಅವರು ಮಾತ್ರ ಕನಿಷ್ಠ ಮಾಸಾಶನವೂ ಪಡೆಯದೆ, ಎಲೆಮರೆಯ ಕಾಯಿಯಾಗೇ ಉಳಿದದ್ದು ಎಷ್ಟೋ ಗೊಂದಲಿಗರ ಬದುಕಿನ ಸತ್ಯವೂ ಆಗಿರಲಿಕ್ಕೆ ಸಾಕು. ('ಫಕೀರವ್ವ ಗುಡಿಸಾಗರ' ಅವರಿಗೆ 'ಜಾನಪದಶ್ರೀ' ಪ್ರಶಸ್ತಿ ದೊರೆತದ್ದನ್ನು ಮತ್ತು ಅವರ ಪರಿಚಯವನ್ನು ಸ್ವತಃ ಲೇಖಕರೇ ದಾಖಲಿಸಿದ್ದಾರೆ.)

ಕುಟುಂಬದಲ್ಲಿ ಉಳಿದವರ್‍ಯಾರಿಗೂ ವಿದ್ಯೆ ಒಲಿಯದೆ ಅದೇ ಗೋಜಲುಗಳ ಗೊಂದಲಿಗ ಬದುಕಿಗೇ ಅಂಟಿಕೊಂಡರೂ ಮದರಿಯವರು ಮಾತ್ರ ತಮ್ಮ ಇಡೀ ಜೀವನವನ್ನು ಬೇಸರವಿಲ್ಲದೆ ತಮಗಂಟಿಕೊಂಡ ಎಲ್ಲರಿಗೂ ಒಂದಷ್ಟು ಮುಡಿಪಾಗಿರಿಸುತ್ತಾರೆ. ಬಾಲ್ಯದಲ್ಲಿ ಪಾತ್ರೆಗಳ ಮೇಲೆ ಹೆಸರು ಹಾಕುವ ಕೆಲಸದಿಂದ ಹಿಡಿದು ಇಲ್ಲಿಯವರೆಗೂ ಅವರ ಕೌಟುಂಬಿಕ ಜವಾಬ್ದಾರಿತನ, ಒಬ್ಬ ಮಗ ಮತ್ತು ಅಣ್ಣನಾಗಿ ಅವರು ತೋರಿದ ಸ್ಪಂದನೆ ಶ್ಲಾಘನೀಯ. ಅವರ ಈ ಕಾಳಜಿ ಕೇವಲ ಕುಟುಂಬಕ್ಕಷ್ಟೇ ಪರಿಮಿತವಾಗದೆ ಅವರ ಇಡೀ ಗೊಂದಲಿಗ ಸಮಾಜಕ್ಕೇ ಒಂದು ಸಾಮಾಜಿಕ ಭದ್ರತೆ ಮತ್ತು ಸ್ಥಾನಮಾನ ಒದಗಿಸಬೇಕೆನ್ನುವವರೆಗೆ ವಿಸ್ತಾರ ಗೊಳ್ಳುತ್ತದೆ. ಆದರೆ ನಿರಂತರ ಅಲೆಮಾರಿ ಜೀವನ ನಡೆಸಿದ ಅವರ ಕುಟುಂಬ ತಮ್ಮ ಗುರುತಿಗಾಗಿ ಗೊಂದಲಿಗರಲ್ಲಿ ಅಗತ್ಯವಾದ ಒಂದು ಊರು – 'ಮೇಡ್' – ಅನ್ನೂ ಕೂಡ ಒಂದು ರೀತಿ ಕಳೆದುಕೊಂಡಂತಾಗಿ ಮುಂದೆ ಜಿಲ್ಲಾ ಖಜಾನಾಧಿಕಾರಿಯಾಗಿದ್ದ ಸಂದರ್ಭದಲ್ಲೂ ಅವರ ಮಗಳ ಮದುವೆಯನ್ನು ಕೆಲವರು ತಡೆಯಲೆತ್ನಿಸುವುದು ಮತ್ತು ಜಾತಿಯಿಂದ ಹೊರಹಾಕುತ್ತೇವೆಂದು ಸಂಬಂಧಿಕರೇ ಬೆದರಿಕೆ ಹಾಕುವುದು ವಿಪರ್ಯಾಸವೇ ಸರಿ ! ಆದರೂ ಮುಂದುವರಿದಿರುವ ಗೊಂದಲಿಗರೆಲ್ಲ ಸಂಘಟಿತರಾಗಿ ಉಳಿದ ಅಸಹಾಯಕರನ್ನೂ ಮೇಲೆತ್ತಬೇಕೆನ್ನುವ ಹಪಾಹಪಿ ಇನ್ನೂ ಅವರಲ್ಲಿ ಉಳಿದುಕೊಂಡಿರುವುದು ಅವರ ಪ್ರಾಂಜಲ ಮನಸ್ಸಿಗೆ ಹಿಡಿದ ಕನ್ನಡಿಯಾಗಿದೆ.

ಕಡೆಯಲ್ಲಿ ಲೇಖಕರು ತಮ್ಮ ವ್ಯಸನ ಮತ್ತು ಕೌಟುಂಬಿಕ ಹೊಂದಾಣಿಕೆಯ ಬಗೆಗೆ ಗೌರವಯುತವಾಗಿ ಒಂದೇ ಮಾತಿನಲ್ಲಿ ಹೇಳಿ ಮುಗಿಸುತ್ತಾರೆ. ಅವರ ಇಡೀ ಜೀವನದ ನಿರೂಪಣೆ ಸ್ವಕೇಂದ್ರಿತವಾಗಿರದೆ ಸಮುದಾಯ ಕೇಂದ್ರಿತವಾಗಿ ಮೂಡಿಬಂದಿದೆ. ವೈಯಕ್ತಿಕ ಜೀವನ, ಪ್ರೇಮ–ಕಾಮಗಳ ವಿಜೃಂಭಣೆ, ಗುಂಪು ರಾಜಕೀಯಗಳನ್ನೇ ಆಡಂಬರ ಮಾಡಿ ಬರೆದು ಪ್ರಚಾರಮಾಡಿಕೊಳ್ಳುವ ಎಷ್ಟೋ ಜನರ ಆತ್ಮಕಥೆಗಳಿಗಿಂತ ಮದರಿಯವರ ಆತ್ಮಕಥೆ ತುಂಬ ಭಿನ್ನವಾಗಿ ನಿಲ್ಲುತ್ತದೆ. ಅಂತಲೇ ಅದನ್ನು ಓದಿ ಮುಗಿಸಿದಾಗ ಕೃತಿಯ ಎರಡನೇ ಮುದ್ರಣದ ಹಿಂದಿನ ಪುಟಗಳಲ್ಲಿ ಕೃತಿಯ ಬಗ್ಗೆ ಸಿ. ಎನ್. ರಾಮಚಂದ್ರನ್ ಅವರು ಪ್ರತಿಕ್ರಿಯಿಸಿರುವಂತೆ "...ನಿಮ್ಮ ನಿರೂಪಣೆಯಲ್ಲಿ ಮೆಚ್ಚಬೇಕಾದ ಅಂಶವೆಂದರೆ ಇವೆಲ್ಲವನ್ನೂ ಚೀರಿ ಹೇಳದೇ, ಕೆಳದನಿಯಲ್ಲಿ ದಾಖಲಿಸುತ್ತಾ ಹೋಗುವುದು. ಈ ಕೆಳದನಿಯ ಸಂಯಮಪೂರ್ಣ ನಿರೂಪಣೆಯೇ ನಿಮ್ಮ ಆತ್ಮಕಥನವನ್ನು ಒಂದು ಅಪರೂಪದ ಸಾಹಿತ್ಯ ಕೃತಿಯನ್ನಾಗಿ ಮಾಡಿದೆ. ಇಂತಹ ನಿರೂಪಣೆಯೊಡನೆಯೇ ಉದ್ದಕ್ಕೂ ಕಂಡುಬರುವ ಪ್ರಾಮಾಣಿಕತೆ; ಯಾವುದನ್ನೂ ವಿಶೇಷವಾಗಿ ಕೀರ್ತಿಸದೇ ಸ್ವವೈಭವೀಕರಣಕ್ಕೆ ಎಡೆಕೊಡದೆ, ನಿಮ್ಮ ಬದುಕನ್ನು ದಾಖಲಿಸಿರುವ ಬಗೆ ಅಸಾಧಾರಣ..." ಎಂಬಂತಹ ಮಾತುಗಳು ತಕ್ಕಂಥವು ಎನಿಸುತ್ತವೆ.

**ಮಹೇಶ್ವರಿ ಕೋಟಿ**
೨೨ನೇ ಮುಖ್ಯರಸ್ತೆ, ವಿದ್ಯಾಗಿರಿ
ಬಾಗಲಕೋಟ – ೫೮೭ ೧೦೨

**ಎಲ್ಲೊ ಒಂದೆಡೆ**

ಬಾಳಂಗಳದಲ್ಲಿ
ಅನೇಕ ಆಸೆಗಳು
ಹೂಬಿಡುತ್ತವೆ
ಆದರೆ
ಎಲ್ಲೊ ಒಂದೆರಡು
ಸಾಧಿಸಿ
ಕಾಯಿಯಾಗಿ
ಹಣ್ಣಾಗುತ್ತವೆ...!

**ಎಂ. ಜಿ. ದೇಶಪಾಂಡೆ**
ಬೀದರ್ – ೫೮೫ ೪೦೩

# ‘ಯಾನ’ದ ಬಾಧೆಗಳು

ಮಹಾಯಾನದಲ್ಲಿ ಇದೀಗ ಸುದರ್ಶನನ ಸಂಗಾತಿಯಾಗಿರುವ ಉತ್ತರೆ ಈ ಹಿಂದೆ ಇನ್ನೊಂದು ಆಕಾಶಯಾನದಲ್ಲಿ ಸತತ ನೂರು ದಿನ ಯಾದವನೊಂದಿಗೆ ಹೆಂಡತಿಯಾಗಿ ಪಯಣಿಸಿದ್ದವಳು. ವೃತ್ತಿಯಲ್ಲಿ ಅವಳು ಫ್ಲೈಯಿಂಗ್ ಆಫೀಸರ್... ಫೈಟರ್ ಪೈಲಟ್. ಸ್ವಭಾವದಲ್ಲಿ ಸಾಹಸಿ. ಇದೀಗ ಮಹಾ ಯಾನಕ್ಕೆ ಯಾದವ ಒಪ್ಪುವುದಿಲ್ಲವಾಗಿ ವಿಧಿಯಿಲ್ಲದೆ ಸುದರ್ಶನನೊಂದಿಗೆ ಬಂದಿದ್ದಾಳೆ. ಆದರೆ ಅವನ ಪತ್ನಿಯಾಗಿ, ಹೆರಲು–ಹೊರಲು ನಿರಾಕರಿಸುತ್ತಾಳೆ. ಸಿದ್ಧಪಡಿಸಿದ ಗರ್ಭಾಂಕುರಗಳಿಂದ ತಾಯಿಯಾಗುವುದಕ್ಕೂ ಒಪ್ಪುವುದಿಲ್ಲ. ಯಾನದ ಉದ್ದೇಶವೇ ನಿರರ್ಥಕವಾಗುತ್ತದೆ ಎಂದು ಸುದರ್ಶನ ಎಷ್ಟೇ ಎಚ್ಚರಿಸಿದರೂ ಅವಳು ಮಣಿಯುವುದಿಲ್ಲ. ಉದ್ದಕ್ಕೂ ಅವಳನ್ನು ಸುದರ್ಶನ “ಹೆಣ್ಣು ಭೂತ, ದರಿದ್ರ, ಭೂತ ಹೆಂಗಸು” ಎಂದೆಲ್ಲ ಧಂಡಿಯಾಗಿ ಬೈದುಕೊಳ್ಳುತ್ತಾನೆ.




ಸಂಗೀತಗಾರರು ಶಾರೀರವನ್ನು ಮಿದುಗೊಳಿಸಿ ಕೊಂಡು ನಾದಮಾಧುರ್ಯವನ್ನು ಪಸರಿಸುವ ಹಾಗೆಯೇ, ಹಿರಿಯ ಲೇಖಕ ಡಾ॥ ಎಸ್. ಎಲ್. ಭೈರಪ್ಪ ಅವರ ಭಾಷೆ, ತರ್ಕ, ತತ್ವ, ಬುದ್ಧಿ, ಅನುಭವ ಸೌಂದರ್ಯ ಎಲ್ಲವೂ ಮೇಳೈಸಿರುವ ಶ್ರುತಿಬದ್ಧ ಬರವಣಿಗೆ ಆದರೂ ಇತ್ತೀಚೆಗೇಕೋ ಅವರು ‘ಮಂದ್ರ’, ‘ಕವಲು’ ‘ಆವರಣ’ ಮತ್ತು ‘ಯಾನ’ದಂತಹ ಕಾದಂಬರಿ ಗಳನ್ನು ಬರೆಯುತ್ತಾರೆ. ಇಂತಹ ಕಾದಂಬರಿಗಳ ಕೆಲವೊಂದು ಘಟನಾ ವಿವರ, ಸಂಭಾಷಣೆ, ಅನೇಕ ಬಾರಿ ಆಶಯಗಳು ಕೂಡ – ಹಲವಾರು ಮನಸ್ಸುಗಳನ್ನು ನಿಷ್ಕಾರುಣವಾಗಿ ಪರಚಿಬಿಡುತ್ತವೆ.

‘ಯಾನ’ ಒಂದು ಪ್ರಬುದ್ಧ ವೈಜ್ಞಾನಿಕ ಕಾದಂಬರಿ ಎನ್ನಲಾಗಿದೆ. ಚಂದ್ರಸ್ಪರ್ಶ – ಮಂಗಳ ಭೇಟಿಗಳನ್ನೂ ಮೀರಿಸುವಂಥ ಒಂದು ಮಹತ್ವದ ಯೋಜನೆಯ ಸುತ್ತ ಜಾಣತನದಿಂದ ಹೆಣೆದ ಪ್ರೌಢ ಕಥನ. ಸುಸಜ್ಜಿತ ಆಕಾಶ ನೌಕೆಯಲ್ಲಿ ಗಂಡು–ಹೆಣ್ಣು ಭೂಮಿಯ ವ್ಯಾಮೋಹಗಳನ್ನೇ ತೊರೆದು ಪಯಣಿಸಬೇಕು; ಸಂತಾನವನ್ನು ನಿರಂತರವಾಗಿ ಮುಂದುವರಿಸುತ್ತಿರಬೇಕು. ಯಾಕೆಂದರೆ, ಒಂದು ಬಗೆಯಲ್ಲಿ ಇದು ಚಿರಂಜೀವ ಯಾನ! ಗುರಿಯೂ ಬಲು ದೊಡ್ಡದೇ. “ಸೂರ್ಯ ಗುರುತ್ವದ ಆಚೆಗೆ ಹೋಗಿ, ಭೂಮಿಗೆ ಹತ್ತಿರದ ಪ್ರಾಕ್ಸಿಮಾ ಸೆಂಟಾರಿಸ್ ನಕ್ಷತ್ರ ವಲಯಕ್ಕೆ ಹೋಗಬೇಕು. ಅಲ್ಲಿ ಯಾವುದಾದರೂ ಗ್ರಹವಿದೆಯೇ, ಇದ್ದರೆ ಜೀವಿಸಲು ಯೋಗ್ಯವಾಗಿದೆಯೇ ಅನ್ನುವುದನ್ನು ಖುದ್ದಾಗಿ ಅನ್ವೇಷಿಸಬೇಕು.”

ಈ ಕಾದಂಬರಿಯಲ್ಲಿ ನಾಲ್ಕು ಜೋಡಿಗಳು ಪ್ರಧಾನವಾಗಿ ಕಂಡುಬರುವಂಥವು. ಈ ಪಾತ್ರಗಳ ಸ್ವಭಾವ ಮತ್ತು ಬೆಳವಣಿಗೆಗಳನ್ನು ಗಮನಿಸಿದರೆ, ಎಲ್ಲಿ ಮತ್ತು ಯಾಕೆ ಓದುಗರಿಗೆ ಹಿಂಸೆಯಾಗುತ್ತದೆ ಅನ್ನುವುದು ಅರಿವಿಗೆ ಬರುತ್ತದೆ.

ಮೊದಲಿಗೆ, ನಾಯಕ–ನಾಯಕಿಯರನ್ನಾಗಿ ನಾವು ಭಾವಿಸಬಹುದಾದ ಸುದರ್ಶನ–ಉತ್ತರಾ ಇವರಿಬ್ಬರೇ ಆಕಾಶಯಾನದ ಪ್ರಯೋಗದಲ್ಲಿ ಭಾಗಿಯಾಗುವವರು. ಸುದರ್ಶನ ವಿಜ್ಞಾನಿ ಮತ್ತು ತಂತ್ರಜ್ಞಾನಿ. ಈ ನೌಕಾಯಾನಕ್ಕೆ ಮುನ್ನ ಅಮೆರಿಕದ ಒಂದು ಸಂಶೋಧನೆಗಾಗಿ, ಅಂಟಾರ್ಟಿಕದ ಚಳಿಗಾಲದಲ್ಲಿ ಒಬ್ಬಂಟಿಯಾಗಿದ್ದು ಗೆದ್ದು ಬಂದವನು. ಇದೀಗ ಉತ್ತರೆ ಅವನ ಯಾನ ಸಂಗಾತಿಯಾಗುವ ಮುನ್ನ, ಲೀಸಾ ಎಂಬ ಹೆಂಗಸಿನೊಡನೆ, ನಂತರ ಮಧ್ಯ ವಯಸ್ಸಿನ ಇಂಗಾಲೊಡನೆ ರಾತ್ರಿಗಳನ್ನು ಕಳೆದಿದ್ದಾನೆ. ಇಂಗಾಳ ಜತೆ ಹಿಮಾಲಯ ಪ್ರವಾಸ ಕೂಡ ಮಾಡುತ್ತಾನೆ. ಒಂದು ಕಡೆ ಈಕೆ ವಿದೇಶಿ ಮಹಿಳೆ ಎಂಬ ಕಾರಣಕ್ಕೆ ಪ್ರವೇಶ ನಿಷಿದ್ಧವಾದಾಗ, “ವಿದೇಶಿ ಆದರೇನು? ನಾನು ಮದುವೆ ಆಗಿದೀನಿ. ಅವಳ ಹಣೆಯ ಕುಂಕುಮ ನೋಡಿ” ಎಂದು ವಾದಿಸುತ್ತಾನೆ.

ನಂತರ ಬೆಂಗಳೂರಿಗೆ ಬಂದು ಮದುವೆಗೆ ಹುಡುಗಿ ಕಥನ ವಿವರದಂತೆ ನೋಡುತ್ತಾನೆ! “ಜಾಹ್ನವಿ ಆಕರ್ಷಕ ಹೆಂಗಸು. ಅವಳಲ್ಲಿ ಪ್ರಕಾಶವಿತ್ತು” ಮತ್ತು ವಿದ್ಯಾವಂತೆ. ಅವಳೊಡನೆ ಐದಾರು ಬಾರಿ ಸುತ್ತಾಡುತ್ತಾನೆ. ಹೀಗೊಂದು ಬಾರಿ ಹೋದಾಗ ಜಾಹ್ನವಿ ಅವನಿಗೆ ಚೆನ್ನಾಗಿ ಕುಡಿಸಿ, ಅವನಿಂದಲೇ ಈ ಮುಂಚಿನ ಪರಸ್ತ್ರೀ ಸಂಬಂಧಗಳ ಬಗ್ಗೆ ತಿಳಿದುಕೊಳ್ಳುತ್ತಾಳೆ. ಸುದರ್ಶನನ ಅಕ್ಕನಿಗೆ ಇದೆಲ್ಲವನ್ನು ತಿಳಿಸಿ ಕೋಪಿಸಿಕೊಳ್ಳುತ್ತಾಳೆ.

“ನನ್ನನ್ನು ಪರೀಕ್ಷಿಸೋಕೇ ಈ ಕೆಲಸ ಮಾಡಿದಾಳೆ ರಂಡೆ! ... ಕನಿಂಗ್ ಉಮನ್! ... ಇಂಥೋಳನ್ನ ಮದ್ವೆ ಆಗಿದ್ದಿದ್ರೆ ಜೀವನ ನರಕವಾಗುತ್ತಿತ್ತು...”

– ಇದು ಸುದರ್ಶನನ ಸ್ವಗತ.

ಆಮೇಲೆ ಯಾನದಲ್ಲಿ ಕೂಡ ಜಾಹ್ನವಿ ಮತ್ತು ಇಂಗಾರನ್ನು ನೆನಪು ಮಾಡಿಕೊಳ್ಳುತ್ತಾನೆ ;

“ರ್‍ಯಾಸ್ಕಲ್ ಜಾಹ್ನವಿಯ ಮೇಲಿನ ಕೋಪ ಇಂಗಾಳ ನೆನಪನ್ನು ತೇಲಿಸಿ ಮನಸ್ಸನ್ನು ಹುಚ್ಚಾಗಿ ಸುತ್ತಿದೆ. ಕುಳ್ಳಿ ಕಪ್ಪು ಇಲಿಯಂತಹ ಕಿರುಗಣ್ಣಿಯಾದ ಈ ರ್‍ಯಾಸ್ಕಲ್ ಜಾಹ್ನವಿಗೆ ಎಲ್ಲ ವಿಷಯಗಳಲ್ಲೂ ತದ್ವಿರುದ್ಧದವಳೆಂದು ಇಂಗಾಳ ನೆನಪು ಬಾಧಿಸುತ್ತಿದೆಯೇ?”

ಮಹಾಯಾನದಲ್ಲಿ ಇದೀಗ ಸುದರ್ಶನನ ಸಂಗಾತಿ ಯಾಗಿರುವ ಉತ್ತರೆ ಈ ಹಿಂದೆ ಇನ್ನೊಂದು ಆಕಾಶಯಾನದಲ್ಲಿ ಸತತ ನೂರು ದಿನ ಯಾದವ ನೊಂದಿಗೆ ಹೆಂಡತಿಯಾಗಿ ಪಯಣಿಸಿದ್ದವಳು. ವೃತ್ತಿಯಲ್ಲಿ ಅವಳು ಫ್ಲೈಯಿಂಗ್ ಆಫೀಸರ್... ಫೈಟರ್ ಪೈಲಟ್. ಸ್ವಭಾವದಲ್ಲಿ ಸಾಹಸಿ. ಇದೀಗ ಮಹಾ ಯಾನಕ್ಕೆ ಯಾದವ ಒಪ್ಪುವುದಿಲ್ಲವಾಗಿ ವಿಧಿಯಿಲ್ಲದೆ ಸುದರ್ಶನ ನೊಂದಿಗೆ ಬಂದಿದ್ದಾಳೆ. ಆದರೆ ಅವನ ಪತ್ನಿಯಾಗಿ, ಹೆರಲು – ಹೊರಲು ನಿರಾಕರಿಸುತ್ತಾಳೆ. ಸಿದ್ಧಪಡಿಸಿದ ಗರ್ಭಾಂಕುರಗಳಿಂದ ತಾಯಿಯಾಗುವುದಕ್ಕೂ ಒಪ್ಪು ವುದಿಲ್ಲ. ಯಾನದ ಉದ್ದೇಶವೇ ನಿರರ್ಥಕ ವಾಗುತ್ತದೆ ಎಂದು ಸುದರ್ಶನ ಎಷ್ಟೇ ಎಚ್ಚರಿಸಿದರೂ ಅವಳು ಮಣಿಯುವುದಿಲ್ಲ. ಉದ್ದಕ್ಕೂ ಅವಳನ್ನು ಸುದರ್ಶನ “ಹೆಣ್ಣು ಭೂತ, ದರಿದ್ರ, ಭೂತ ಹೆಂಗಸು” ಎಂದೆಲ್ಲ ಧಂಡಿಯಾಗಿ ಬೈದುಕೊಳ್ಳುತ್ತಾನೆ.

ಯಾನದ ಸಫಲತೆಗಂತು ಸಂತಾನ ಮುಂದು ವರಿಯಲೇಬೇಕು. ಈಕೆ ಒಪ್ಪುತ್ತಿಲ್ಲ. ಮತ್ತೆ ಹೇಗೆ? ಈ ಕುರಿತು ಮೇಧಾವಿ ವಿಜ್ಞಾನಿ ಸುದರ್ಶನನ ಆಲೋಚನೆಗಳು :

“... ಇವಳನ್ನು ಹಿಡಿದು ಕಟ್ಟಿಹಾಕಿ ಬಲವಂತವಾಗಿ ಬಸಿರು ಕಟ್ಟಿಸಿಬಿಡಲೆ?”

“... ಸಂರಕ್ಷಿಸಿರುವ ವೀರ್ಯಾಣುವನ್ನು ಬಲವಂತ ವಾಗಿ ಪ್ರಯೋಗಿಸಿ ಬಸುರಿ ಮಾಡಿಬಿಟ್ಟರೆ ಹೇಗೆ?”

“ಮಲಗಿರುವಾಗ ಮೂಗಿನ ಮುಂದೆ ಕ್ಲೋರೋಫಾರಂ ಹಿಡಿದು ಜ್ಞಾನ ತಪ್ಪಿಸಿ ವೀರ್ಯ ಪ್ರಯೋಗ ಮಾಡಿ, ಅನಂತರ ಆಮ್ಲಜನಕ ಹಿಡಿದು ಜ್ಞಾನ ಬರಿಸಿ, ಶಬ್ದವಾಗದಂತೆ ಹೊರಬಂದರಾಯಿತು...”

**ಭಾರತೀ ಕಾಸರಗೋಡು**

"ಮೇಲೆ ಬಿದ್ದು ಯಾಕೆ ಬಲಾತ್ಕಾರ ಮಾಡಬಾರದು ? ಅವಳಿಗೆ ಮೊದಲಿನ ದೇಹಬಲ ಉಳಿದಿಲ್ಲ. ನನ್ನ ದೇಹದಾರ್ಢ್ಯದ ಮುಂದೆ ಇವಳು ಆಳಲ್ಲ. ಮೊಕದ್ದಮೆ ಹೂಡುವ ಯಾವ ನ್ಯಾಯಾಲಯವೂ ಇಲ್ಲ."

ಇದು ನನ್ನ ಬಯಕೆಯ ಪೂರೈಕೆ ಮಾತ್ರವಲ್ಲ, ದೇಶಸೇವೆಯೂ ಹೌದು. !

ಕಡೆಗೂ ಇಷ್ಟೆಲ್ಲ ಚಿಂತನ–ಮಂಥನಗಳ ನಂತರ, ಅವಳ ಹುಟ್ಟು ಹಬ್ಬದ ದಿನ ಚೆನ್ನಾಗಿ ಕುಡಿಸಿ, ಮತ್ತಿನಲ್ಲಿರುವಾಗ ಅವಳನ್ನು ಸೇರಲು ಯತ್ನಿಸುತ್ತಾನೆ. ಅವಳಿಂದ ಕರಾಟೆ ಒದೆತದ ಪ್ರಯೋಗವಾಗಿ, ಅವನ ಪ್ರಯತ್ನ ನಿಲ್ಲುತ್ತದೆ.

ಮುಂದೆ ಈಕೆ "ನೋಡಲು ಕೂಡ ಹೇಸಿಗೆಯಾಗಿ ಅವಳು ತಿರಸ್ಕಾರ ಯೋಗ್ಯ ಅಲ್ಲ..." ಎಂದು ಅನ್ನಿಸಿದರೂ, ಮನಸ್ಸು ತುಸು ಕುದುರಿದ ಮೇಲೆ, ನೇರವಾಗೇ ಆಕ್ರಮಿಸಿಬಿಡುವುದೆಂದು ನಿಶ್ಚಯಿಸಿ ಹಾಗೆಯೇ ಮಾಡುತ್ತಾನೆ. ಸೋತು ನೆಲಕಚ್ಚಿದ ಅವಳು ನಂತರ ತಾನೇ ಸವಾಲಿನಿಂದೆಂಬಂತೆ ಬತ್ತಲು ನಿಂತು ಆಹ್ವಾನಿಸುತ್ತಾಳೆ. ಅವಳ ರೂಪ ನೋಡಲಾಗದೆ ಕಣ್ಣು ಮುಚ್ಚಿಕೊಳ್ಳುತ್ತಾನೆ. ಹೀಗವನ ಪ್ರಯತ್ನ ಮತ್ತೆ ವಿಫಲವಾಗುತ್ತದೆ. ಉತ್ತರೆಯ ದೇಹ ವರ್ಣನೆ, ಕಾಮ ಭಂಗಿಗಳು – ಯಾವ ಹೆಣ್ಣಿಗೂ ಗೌರವ ತರುವಂಥದ್ದಲ್ಲ. ಅದಕ್ಕಿಂತಲೂ ಅಸಹ್ಯವೆಂದರೆ, ತಾಯಿಯ ನಗ್ನತೆಯ ಅಣು ಅಣು ವಿವರ, ಕಾಮ ವಿಕಾರ ಇವುಗಳನ್ನೆಲ್ಲ ಮಕ್ಕಳು ಓದುತ್ತವೆ... ವಿಮರ್ಶಿಸುತ್ತವೆ !

ಕಡೆಗೂ ಉತ್ತರೆಗೆ ನಲವತ್ತು ವರ್ಷ ವಯಸ್ಸಾಗುವ ಹೊತ್ತಿಗೆ ಅವಳಿಗೆ ತಾಯಿಯಾಗುವ ಬಯಕೆ ಮೂಡುತ್ತದೆ. ಸುದರ್ಶನನ ಬಳಿಹೋಗಿ ತನ್ನ ಈ ನಿರ್ಧಾರ ತಿಳಿಸುತ್ತಾಳೆ. ಇದೀಗ ಅವನೇ ನಿರಾಕರಿಸುತ್ತಾನೆ. ಸಿದ್ಧ ಗರ್ಭಾಂಕುರಗಳನ್ನು ಹೊಗಿಸಿಕೊಂಡು ಒಂದು ಹೆಣ್ಣು, ಒಂದು ಗಂಡು ಹೀಗೆ ಇಬ್ಬರು ಮಕ್ಕಳನ್ನು ಹೆರುತ್ತಾಳೆ.

ಯಾನ ಕಾಲದಲ್ಲಿ ಸುದರ್ಶನ – ಉತ್ತರೆಯರ ಕರ್ತವ್ಯ ಹಂಚಿಕೆಗಳನ್ನು ಗಮನಿಸೋಣ. ವಿಜ್ಞಾನ ತಂತ್ರಜ್ಞಾನ ಯಂತ್ರಾಗಾರ ಮೇಲ್ವಿಚಾರಣೆಗಳು ಪುರುಷನಾದ ಸುದರ್ಶನನ ಹೊಣೆಗಾರಿಕೆ. ಇವೆಲ್ಲದರ ತಲೆಬುಡಗಳೇ ಉತ್ತರೆಗೆ ಅರ್ಥವಾಗದಂತೆ ; ಅವಳ ಮನೋಬುದ್ಧಿಗಳ ಶಕ್ತಿಯ ಹೊರಗಿನ ವಂತೆ. ಈ ವಿಷಯ ಪದೇ ಪದೇ ಅವಳ ಬಾಯಲ್ಲೇ ಬರುವಂತೆ ಚಿತ್ರಿತವಾಗಿದೆ. ಹಾಗಾಗಿ ಫೈಟರ್ ಪೈಲಟ್ ಆಗಿ, ಅಂತರಿಕ್ಷದಲ್ಲಿ ವಿಮಾನವನ್ನು ಪಲ್ಟಿ ಹೊಡೆಸುವ ಚಳಕ–ಚಾಕಚಕ್ಯತೆಗಳನ್ನು ಮೆರೆದ, ಈ ಹಿಂದೆ ಸತತ ನೂರು ದಿನ ಆಕಾಶಯಾನ ಪೂರೈಸಿ ಬಂದ, ಸಾಹಸಿ, ಉತ್ತರೆಯ ಈಗಿನ ಕರ್ತವ್ಯಗಳು ಸವುಟು, ಗೃಹಕೃತ್ಯ ಮತ್ತು ಬೇಸಾಯ. ಅರ್ಥಾತ್ ಅವಳೀಗ ಮನೆಮಂದಿಗೆಲ್ಲ ಅಟ್ಟು ಬಡಿಸುವ ಓರ್ವ ರೈತ ಮಹಿಳೆಯಷ್ಟೆ ! ...ಇದಂತೂ ಅತ್ಯಂತ ಹಾಸ್ಯಾಸ್ಪದ.

ಸುದರ್ಶನನ ಪಾತ್ರ ಧೀರೋದಾತ್ತವಾಗಿ ಬಣ್ಣಿತವಾಗಿದೆ. ಎಲ್ಲರೂ, ಮಕ್ಕಳೂ ಸೇರಿದಂತೆ ಅವನನ್ನು ಹೊಗಳುವವರೇ, "ಅವನು ತುಂಬ ಬುದ್ಧಿವಂತ... ಯಾನದ ಸಫಲತೆಗೆ ತನ್ನನ್ನು ತಾನು ಅರ್ಪಿಸಿಕೊಂಡವನು," ಎಂದು.

ಒಂದೊಮ್ಮೆ ಸುದರ್ಶನ ತನ್ನಷ್ಟಕ್ಕೆ ಅಂದುಕೊಳ್ಳುತ್ತಾನೆ :

"ಜೀವನಪರ್ಯಂತ ಯಾನಕ್ಕೆ ಹೊರಡುವಾಗ ಇವಳೊಬ್ಬ ಎಂಜಲಾದ ಹೆಂಗಸು ಎಂಬ ತುಚ್ಛ ಭಾವನೆ ಬರಲಿಲ್ಲ..." ಇದೊಂದು ಹೆಗ್ಗಳಿಕೆ ಎಂದು ಓದುಗರಿಗಂತೂ ಅನ್ನಿಸುವುದಿಲ್ಲ. ಲೀಸಾ – ಇಂಗಾರಿಂದ ಎರಡು ಬಾರಿ ಎಂಜಲಾದ ಗಂಡಸಿಗೆ ಹಾಗಂದುಕೊಳ್ಳುವ ಅಧಿಕಾರ ತಾನೆ ಎಲ್ಲಿದೆ ? ನೈತಿಕತೆ ಎಂಬುದು ಎಲ್ಲರಿಗೂ ಅನ್ವಯವಾಗುವ ಮನುಷ್ಯನಿಯಮ ತಾನೆ ? (ಅಥವಾ, ಗಂಡಸು ಎಂಜಲಾಗುವುದಿಲ್ಲ ಎಂಬರ್ಥವೇ ?)

ಕಡೆಗೂ ಸಂತನಾಗುವುದು ಪುರುಷನೇ. ಧ್ಯಾನ ಯೋಗದಲ್ಲಿ ಮುಳುಗಿಬಿಡುವ ಸುದರ್ಶನ, ಕಟ್ಟಕಡೆಯಲ್ಲಂತೂ ಥೇಟು ಅಧ್ಯಾತ್ಮದ ತುರೀಯಾವಸ್ಥೆಯನ್ನು ತಲುಪಿದ ಪರಮಹಂಸನಂತೆಯೇ ಯಾನ ಸಂಗಾತಿ ಉತ್ತರೆಯ ಕಾಲುಗಳನ್ನು ಹಣೆಗೊತ್ತಿಕೊಳ್ಳುತ್ತಾನೆ. ಉತ್ತರೆ ಮಾತ್ರ ತನ್ನೆಲ್ಲ ಭಾವ ದೌರ್ಬಲ್ಯಗಳೊಡನೆ, ಧಂಡಿ ಧಂಡಿ ಕಣ್ಣೀರಿನೊಂದಿಗೆ, ಸಾಮಾನ್ಯ ಮನುಷ್ಯಳಾಗಿ ಉಳಿಯುತ್ತಾಳೆ.

ಉತ್ತರೆಯ ತಾಯಿ–ತಂದೆ ಕಾದಂಬರಿಯ ಇನ್ನೊಂದು ಜೋಡಿ. ಇಲ್ಲಿಯೂ ಪುರುಷನೇ ಶ್ರೇಷ್ಠ ... ಮಹಿಳೆ ಕನಿಷ್ಠ ತಂದೆಗೆ "ತನ್ನ ಚಾಲನ ಕೌಶಲ ಮತ್ತು ತನ್ನ ವಿಮಾನದ ತಾಂತ್ರಿಕ ಸಾಮರ್ಥ್ಯದಲ್ಲಿ ಭರವಸೆ." ತಾಯಿಗಾದರೋ ವ್ರತಕಥೆ ಹರಕೆ ಉಪವಾಸಗಳಲ್ಲಿ ನಂಬಿಕೆ. ಅಪ್ಪ ವಿಚಾರವಂತ; ಅಮ್ಮನಿಗೆ ವಿಚಾರಹೀನ ಅಂಜಿಕೆಗಳು !

ಎಲ್ಲಕ್ಕಿಂತ ಹೆಚ್ಚಾಗಿ ಮಗಳಿಗೆ ಸಿನಿಮಾ ಅವಕಾಶ ಬಂದಾಗ ಧರ್ಮಬೀರುವೂ, ಮಗಳು ಒಳ್ಳೆಯ ಸಂಸಾರಸ್ಥಳಾಗಲು, ಪೈಲಟ್ ಉದ್ಯೋಗವನ್ನೇ ಬೇಕಾದರೂ ಬಿಡಲಿ ಎಂದು ಒತ್ತಾಯಿಸುತ್ತಿದ್ದಂಥ ಸಂಪ್ರದಾಯನಿಷ್ಠಳೂ ಆದ ಈಕೆ, ಉಬ್ಬಿಹೋಗುತ್ತಾಳಂತೆ. ಆದರೆ ಡಿಫೆನ್ಸ್ ಪಡೆಯಿಂದ ಒಪ್ಪಿಗೆ ಸಿಗುವುದಿಲ್ಲ ಎಂದಾದಾಗ, "ನೀವು ಏನಾದರೂ ಮಾಡಿ ಒಪ್ಪಿಗೆ ಕೊಡಿಸಿ" ಅಂತ ಗಂಡನಿಗೆ ದುಂಬಾಲು ಬೀಳುತ್ತಾಳೆ. ಉತ್ತರೆಗೂ ಡಿಫೆನ್ಸ್ ಸಂಸ್ಥೆಯ ಈ ನಿಲುವಿನ ಬಗ್ಗೆ ಆಕ್ರೋಶ ! ಅದಾಗಲೇ ಅವಳು ನಟಿಯಾಗಿ ತಾನು ಹೇರಳವಾಗಿ ಗಳಿಸಬಹುದಾದ ಹಣ–ಕೀರ್ತಿಗಳ ಕನಸುಗಳಲ್ಲಿ ಮುಳುಗಿರುತ್ತಾಳಂತೆ !

ಇನ್ನು ಮೂರನೇ ಜೋಡಿ ಯಾದವ–ರಜನಿಯರದು ಮೊದಲಿನಿಂದ ವಿರಸ ದಾಂಪತ್ಯ. ದೇವಸ್ಥಾನದಲ್ಲಿ ಉತ್ತರೆಯನ್ನು ಗುಟ್ಟಾಗಿ ಮದುವೆಯಾಗಿದ್ದ ಯಾದವ ಅವಳೊಡನೆ ಮಹಾಯಾನಕ್ಕೆ ಹೋಗಲೊಪ್ಪದೆ ನಂತರ ರಜನಿಯನ್ನು ವಿವಾಹವಾಗುತ್ತಾನೆ. ಮೊದಲ ಮದುವೆಯನ್ನು ಗುಟ್ಟಾಗಿಯೇ ಇಡುವ ಯಾದವನ ಮಟ್ಟಿಗೆ "ರಜನಿ ಮಧುರ ಮಾರ್ದವ ಗುಣದವಳಲ್ಲ. ಸ್ವಭಾವತಃ ಶುಷ್ಕಳು..." ಇತ್ಯಾದಿ ಇತ್ಯಾದಿ. ಆದರೆ ಇದೇ ಶುಷ್ಕತೆಯಲ್ಲಿ ಆರ್ದ್ರತೆ ಬಸರಿ ಅವಳೊಂದು ಹೆಣ್ಣುಮಗುವನ್ನು ಹೆರುತ್ತಾಳೆ ! "ಹೆಣ್ಣಾದರೇನು ಗಂಡಾದರೇನು... ನಮ್ಮ ಮಗು !" ಅಂತ

## ಬಂದೇ ಬರ್ತಾರೆ !



**ಕ**ತ್ತಲಲ್ಲಿ ಕೊಳೆಯುತ್ತಿದ್ದೇವೆ
ನಾನೂ ನನ್ನ ಅಕ್ಷರಗಳೂ...
ಮೋಂಬತ್ತಿ ಇದೆಯೋ ಇಲ್ಲವೋ
ಎಲ್ಲಿಟ್ಟೆನೋ ಹುಡುಕಲಾಗುತ್ತಿಲ್ಲ

ಹೊರಗಿನಿಂದ ಬೆಳಕು ತನ್ನಿ
ಎಂದು ಯಾರನ್ನು ಗೋಗರೆದು ಕರೆಯಲಿ ?
ಕೆಲವರು ಕಾಮೂ ಕಾಫ್ಕಾ ಸಾರ್ತ್ರೇ
ಎಂದರೆ ಮಾತ್ರ ಓಗೊಡುವರು
ಕೆಲವರು ರಾಮಾಖುದಾಕ್ರಿಸ್ತಾ
ಎಂದರೆ ಮಾತ್ರ ಓಗೊಡುವರು
ಅವರು ಗೊತ್ತಿಲ್ಲ : ಇವರು ಬೇಕಿಲ್ಲ
ಕತ್ತಲಲ್ಲಿರುವ ಅಂಧರು
ಅಕ್ಷರಗಳ ಮುಟ್ಟಿ ಓದುವಂತೆ
ನನ್ನ ಅಕ್ಷರಗಳ ಸ್ಪರ್ಶಿಸಿ
ತಟ್ಟಿ ಓದಲು ಯಾರೂ ಬಾರರು
ಕತ್ತಲಲ್ಲಿರುವ ಹೆಣ್ಣಾದರೆ
ಬರುತ್ತಾರೆ ಹಿಂಡಲು ಹೀರಲು...
ಅಕ್ಷರಗಳಲ್ಲೆಲ್ಲಿದೆ ರಕ್ತ ಮಾಂಸ.

ನಾನೂ ನನ್ನ ಅಕ್ಷರಗಳೊ
ಕತ್ತಲಿನಲ್ಲೇ ಕಾಯಬೇಕು
ಬಿಸಿಲೋ ಬೆಳ್ದಿಂಗಳೋ ಬರುವತನಕ
ಅವರ ಪ್ರವೇಶಕ್ಕೆ ಸಾಕಷ್ಟಿದೆ ಸಂದಿ
ಬಡತನಕ್ಕೆ ಕೋಟೆ ಗೋಡೆಗಳಿಲ್ಲ
ಇಲ್ಲಾಗಬೇಕಿಲ್ಲ ಬಂದಿ
ಅವರು ಬಂದೇ ಬರುತ್ತಾರೆ
ಅವರೊಟ್ಟಿಗೆ ಬರುವ ಗಾಳಿಯೇ
ನನ್ನಕ್ಷರಗಳ ಹೊತ್ತೊಯ್ದು ಬಿಸುಡಬೇಡ
ಅವುಗಳಲ್ಲ ಸಂಪಾದಕರ ಬುಟ್ಟಿಯ ಕಸ.

**ಕೆ. ವಿ. ಚಂದ್ರಜ್ಯೋತಿ**
ಪಿ–೨೬, ೧೫ನೇ ಅಡ್ಡರಸ್ತೆ, ಎಸ್. ಎಸ್. ಪುರಂ, ತುಮಕೂರು – ೫೭೨ ೧೦೨

ಉದಾತ್ತಭಾವ ಪ್ರದರ್ಶಿಸುವವನು ಯಾದವನಾದರೆ, ಮಗು ಹೆಣ್ಣೆಂದು ಬೇಸರಿಸಿಕೊಳ್ಳುವವಳು ರಜನಿ !

ಯಾದವ ಉತ್ತರೆಯೊಡನೆ ಯಾನ ಮಾಡಿದ್ದು, ದೈಹಿಕ ಸಂಪರ್ಕ ಇಟ್ಟುಕೊಂಡದ್ದು ಮುಂದೊಮ್ಮೆ ರಜನಿಗೆ ತಿಳಿಯುತ್ತದೆ. ಈ ಕುರಿತು ಯಾದವನನ್ನು ಕೇಳಿದಾಗ "ಪ್ರಯೋಗದಲ್ಲಿ ಭಾಗಿಯಾದ ಗಂಡಸು ನಾನೇ ಅಂತ ಹ್ಯಾಗೆ ಹೇಳ್ತೀಯಾ ?" ಅನ್ನುವುದು ಅವನ ಸವಾಲು ಮಾತ್ರವಲ್ಲ. "ಡ್ರಿಂಕ್ಸ್ ತಗೊಂಡಾಗ ಯಾವ ಮಾತು ಬಂದಿರುತ್ತೋ ಯಾರಿಗೆ ನೆನಪಿರುತ್ತೆ. ಅದಕ್ಕೆ ವಿಪರೀತ ಅರ್ಥ ಹಚ್ಚುವ ಹೆಂಗಸಿನ ಬುದ್ಧಿ ಮಾಡಬೇಡ..." ದಬಾವಣೆ! ಈ ಯಾದವ ರಾಯನ ಮತ್ತಷ್ಟು ಆಣಿಮುತ್ತುಗಳನ್ನು ಗಮನಿಸಬೇಕು ;

"ಅವಳಿಗೆ ತಲೆ ಕೆಟ್ಟಿದೆ, ಸುಳ್ಳು ಸುಳ್ಳೇ ಏನೇನೋ ಮನಸ್ಸಿನಲ್ಲಿ ತುಂಬಿಕೊಂಡಿದಾಳೆ."

"ಗಂಡನ ಮೇಲೆ ಕತೆಕಟ್ಟಿ ಕ್ಲಬ್ಬಿನಲ್ಲಿ ಡಂಗುರ ಹೊಡೆಯೋದು ಲುಚ್ಛಾ ಮನೆತನದಲ್ಲಿ ಹುಟ್ಟಿದೋಳಿಗೆ ಮಾತ್ರ ಸಾಧ್ಯ..."




"ಮದುವೆಗೆ ಮೊದಲು ನೀನು ಯಾವನ ಅಥವಾ ಎಷ್ಟು ಜನರ ಜೊತೆ ಬಿದ್ದಿದ್ದೆಯೋ ನನಗೆ ಹೇಳಿದ್ದೆಯಾ ?"

"ಬಿಟ್ಟಿಕೂಳು ತಿಂದುಕೊಂಡು ಕ್ಲಬ್ಬಿನಲ್ಲಿ ಚಂಗಲು ಹೊಡೆಯುವ ನಿನ್ನ ರಟ್ಟೆಯಲ್ಲಿ ಕಸುವಿಲ್ಲ..." ವಿರಸ ದಾಂಪತ್ಯ ಮುಂದುವರಿಯುತ್ತದೆ. ಮತ್ತವನಿಗೆ ಉತ್ತರೆಯದೇ ಕನಸುಗಳು. ಆಕಾಶದಲ್ಲಿರುವ ಅವಳನ್ನು ಸಂಪರ್ಕಿಸುತ್ತಾನೆ. ತಾಯಿಯಾಗಿ ಯಾನದ ಉದ್ದೇಶ ಪೂರೈಸುವಂತೆ ಅವಳಿಗೆ ಸಂದೇಶಗಳನ್ನು ಕಳಿಸುತ್ತಾನೆ.

ಇನ್ನು ಕಡೆಯ ಜೋಡಿ (ಹಾಗೆಂದು ಕರೆಯಲೇ ಜಿಗುಪ್ಸೆ!) ಮೇದಿನಿ–ಆಕಾಶ. ಇವರಿಬ್ಬರೂ ಉತ್ತರೆಯ ಮಕ್ಕಳು. ಈ ಅಂಶವನ್ನು ಹೌದೆನ್ನಿಸಲು ಮತ್ತು ಅಲ್ಲವೆನ್ನಿಸಲು ಬೇಕಾದಷ್ಟು ತರ್ಕಗಳಿವೆ. ತಾನು ಸುದರ್ಶನನ ಅಥವಾ ಉತ್ತರೆಯ ರಕ್ತ ಅಲ್ಲ ಎಂದು ತಿಳಿದಾಗ ಗೊಂದಲಕ್ಕೊಳಗಾಗುವ ಆಕಾಶನಿಗೆ ಸುದರ್ಶನ ಹೇಳುತ್ತಾನೆ.

"ನಿನ್ನ ಅಂಕುರ ಅಜ್ಞಾತವೇ ಆದರೂ, ತನ್ನ ಗರ್ಭದಲ್ಲಿ ಬೆಳೆಸಿ ಎದೆಹಾಲನ್ನೂ ಉಣಿಸಿದವಳು ಅವಳೇ ತಾನೇ ? ...ನಿನ್ನ ಅಮ್ಮನನ್ನು ನೀನು ಅಮ್ಮ ಅಂತಲೇ ಕರೆಯಬೇಕು."

ಹಾಗಾದರೆ ಇದೇ ತರ್ಕದ ಆಧಾರದ ಮೇಲೆ ಮೇದಿನಿಗೂ ಉತ್ತರೆಯೇ ಅಮ್ಮ. ಅಂದರೆ ಇವರಿಬ್ಬರೂ ಅಕ್ಕ–ತಮ್ಮ. ಆದರೆ ಮದುವೆಯಾಗಿ ಸಂತಾನ ಮುಂದುವರಿಸ ಬೇಕಾದವರು. ಎಲ್ಲವೂ ವಿಜ್ಞಾನಕ್ಕಾಗಿ... ದೇಶಭಕ್ತಿಗಾಗಿ! ಇಂಥ ಸೋದರ ಪ್ರಣಯಗಳನ್ನು ನಾವು ಪ್ರಾಣಿಲೋಕದಲ್ಲಿ ಕಾಣುತ್ತೇವೆ.

ಇಪ್ಪತ್ತೆರಡು ವರ್ಷದ ಆಕಾಶ ಇಪ್ಪತ್ತೈದು ವರ್ಷದ ಅಕ್ಕ ಮೇದಿನಿಯೊಡನೆ ನಡೆಸುವ ಪ್ರಣಯ ಚೆಲ್ಲಾಟಗಳು, ಸಂಭಾಷಣೆಗಳು ವಾಕರಿಕೆ ತರಿಸುವಂಥವು. ಆ ಹೆಣ್ಣೋ... ಅವನನ್ನು ಭಕ್ತಿಯಿಂದ ಆರಾಧಿಸುತ್ತದೆ... ಭಯಪಡುತ್ತದೆ. ಒಟ್ಟಾರೆ ಅವನಲ್ಲಿ ಸಮರ್ಪಣ ಭಾವ !

ಮಹಾಯಾನದ ಮಹಾಪುಂಡನೆಂದೇ ಭಾಸವಾಗುವ ಈ ಆಕಾಶವಾಣಿಯು ತನ್ನ ಅಕ್ಕನಿಗೆ ಹೇಳುವ ಅಹಂಕಾರದ ಮಾತುಗಳನ್ನು ಕೇಳಿ :

"ನೀನು ಹೆದರುಪುಕ್ಲಿಯಾಗಿ ಅವಿತು ಕೂತರೆ ಒದ್ದು ಎಳಕೊಂಡು ಹೋಗ್ತೀನಿ..."

"ಹೆಂಗಸಿಗೆ ಯಾವತ್ತೂ ಕರ್ತವ್ಯನಿಷ್ಠೆ ಇಲ್ಲ... ತಾರ್ಕಿಕ ಬುದ್ಧಿಯೂ ಇಲ್ಲ... ನೀನು ಯಾವಾಗಲೂ ಅಮ್ಮನ ಕಡೆ... ಹೆಣ್ಣು ಹುಡುಗಿ ಬುದ್ಧಿ..."

"ಅಮ್ಮನದು ಮೊದಲಿಂದ ಮೊಂಡುಸ್ವಭಾವ... ಅಪ್ಪನದು ತಾಳ್ಮೆಯ ಗುಣ. ನೀನೇ ಹಾಗೆ ಮೊಂಡುತನ ಮಾಡಿದ್ದರೆ, ನಾನು ಬಿಡ್ತಿರಲಿಲ್ಲ. ಬಲಾತ್ಕಾರ ಮಾಡಿ ಮುಗಿಸುತ್ತಿದ್ದೆ..."

"ಅಮ್ಮನ ಬೆತ್ತಲ ದರ್ಶನ ಮಾಡಿದಾಗ... ಅವರಿಗೆ ಭಯವಾಯಿತು... ನೀನೂ ಹಾಗೆಯೇ ಬೆತ್ತಲು ನಿಂತುಕೋ... ನಾನು ನೋಡುತೀನಿ..."

ಎದೆಹಾಲು ಕುಡಿಸಿ ಬೆಳೆಸಿದ ಅಮ್ಮನಿಗೆ ಈ ಮಗರಾಯ ಅನ್ನುವಂಥ ಮಾತುಗಳು : "ಇವಳದ್ದು ಉದ್ದಕ್ಕೂ ಗೊಂದಲ... ಮಾತುಕೊಟ್ಟು ಬಂದಮೇಲೆ ಅದರಂತೆ ನಡೆಯಬೇಕು. ಅಪ್ಪನಿಗಾದರೂ ಬೇಜಾರಾಗುಲ್ಲವೇ ? ನಾನಾಗಿದ್ದರೆ ಎರಡು ಒದ್ದು..." (ಎಂದು ಹೇಳುತ್ತಿದ್ದವನು ತಡೆದುಕೊಂಡನಂತೆ.)

"ಇವಳಿಗೆ ಏನನ್ನಬೇಕು ? ...ತುಡುಗುತಾಯಿ ಅನ್ನಬಹುದೇ ? ಬೇರೆ ಯಾವುದೋ ...ಸಿದ್ಧ ಅಂಕುರವನ್ನು ತನ್ನದಾಗಿಸಿಕೊಳ್ಳುವುದು ತುಡುಗಲ್ಲವೇ ?" (ತುಡುಗು=ಕಳ್ಳತನ)

ಈ ಬಗೆಯ ತುಂಡುಗಳನ್ನುದುರಿಸುವ ವಯಸ್ಸು–ಅನುಭವ–ಯೋಗ್ಯತೆ ಅವನಿಗಿತ್ತೇ ?!

'ಯಾನ' ಸಂಶೋಧನೆಗಳನ್ನು ಮಾಡಿ ಬರೆದ ಕಾದಂಬರಿಯೇ ಆದರೂ, ಈ ರೀತಿಯ ಆಕಾಶಯಾನದ ಅನುಭವಗಳು ಲೇಖಕರಿಗೆ ದಕ್ಕಿದ್ದಲ್ಲ. ಮನುಷ್ಯ ಪ್ರಪಂಚದ ಸಂಬಂಧಗಳೊಳಗೆ ಮತ್ತು ಭಾವನೆಗಳೊಂದಿಗೆ ಪರಕಾಯ ಪ್ರವೇಶ ಸಾಧ್ಯ; (ಕೃತಿಯ ಜೀವಂತಿಕೆಗೆ ಅದು ಅನಿವಾರ್ಯವೂ ಹೌದು ತಾನೆ ?) ಆದರೆ ಈ ರೀತಿಯ ಪರಕ್ಷೇತ್ರಗಳಲ್ಲಿ ಅದು ಅಸಂಭವ. ಹಾಗಾಗಿ ಇದೊಂದು ಕಟ್ಟುಕತೆ. ಈ ಕಾರಣಕ್ಕಾಗಿ, ಇದು ಶುಷ್ಕವಾಗಿದೆ.

ಡಾ॥ ಭೈರಪ್ಪನವರ ಕಥನಶೈಲಿಯ ಬಗೆಗಂತು ಯಾರೂ ಚಕಾರ ಕೂಡ ಎತ್ತಲಾಗದು. ತುಂಬ ಪಾಂಗಿತವಾಗಿ ಮತ್ತು ಶ್ರದ್ಧೆಯಿಂದ ಕತೆ ಹೇಳುವವರು ಅವರು. ಅದವರ ಅಭಿವ್ಯಕ್ತಿಯ ಶಕ್ತಿ.

ಆದರೂ, ಪ್ರಸ್ತುತ ಕಾದಂಬರಿಯಲ್ಲಿ ಮಹಿಳೆಯರನ್ನು ಹೀಯಾಳಿಸುವ, ರೊಚ್ಚು ತೀರಿಸಿಕೊಳ್ಳುವಂತಹ, ಒಂದು ಕಿಚ್ಚು ಉದ್ದಕ್ಕೂ ಕೆಲಸ ಮಾಡಿದಂಥ ಗಾಢ ಭಾಸವಿದೆ. ಇಲ್ಲಿ ವಿಚಾರ, ವಿವೇಕ, ಶಕ್ತಿ, ಬುದ್ಧಿ, ಧ್ಯೇಯ, ಮೌಲ್ಯ ಎಲ್ಲವೂ ಗಂಡಸಿಗೆ ಮಾತ್ರ! ಆದರೆ ಮಹಿಳೆಯ ಬಗ್ಗೆ ಅಸಭ್ಯ ಮಾತುಗಳ ನಿಸ್ಸಂಕೋಚ ಪ್ರಯೋಗಗಳು ಮಾತ್ರ ಧಾರಾಳವಾಗಿ ಹರಿದಾಡಿವೆ. ಅಚ್ಚರಿಯ ಮತ್ತು ವಿಷಾದದ ಸಂಗತಿ ಅಂದರೆ, ಈ ರೀತಿಯ ಅವಾಚ್ಯ ಶಬ್ದಗಳನ್ನು ಉರುಳಿಸುವವರು, ಸುಶಿಕ್ಷಿತ ಸಭ್ಯರೆಂದು ನಾಗರಿಕ ವಲಯಗಳಲ್ಲಿ ಸ್ತುತಿಸಲ್ಪಡುವ, ಅತ್ಯುನ್ನತ, ದೇಶಭಕ್ತ ಅಧಿಕಾರಿಗಳು !

'ಗೃಹಭಂಗ'ವನ್ನು ಬರೆದ ಮನಸ್ಥಿತಿ 'ಯಾನ'ದ ಸಂದರ್ಭದಲ್ಲಿ ಸುತಾರಾಂ ಕಂಡುಬರುವುದಿಲ್ಲ. "ಬೇಕಿಲ್ಲ" ಅನ್ನಬಹುದೇನೋ ಯಾರಾದರೂ! ಆದರೆ ಭೈರಪ್ಪನವರ ಸಾಹಿತ್ಯ ಸದ್ಗುಣಗಳನ್ನು ಮೆಚ್ಚುವವರ ಪ್ರಾಮಾಣಿಕ ಅನಿಸಿಕೆ ಇದು. ಅಭಿವ್ಯಕ್ತಿ ಸ್ವಾತಂತ್ರ್ಯದ ಹಾಗೆಯೇ ಪ್ರಾಮಾಣಿಕತೆಗೂ ಬೆಲೆ ಬೇಕಲ್ಲವೇ ?

'ಗೃಹಭಂಗ'ದಲ್ಲಿ ಜೀವಕಳೆ ತುಂಬಿ ಸೂಸುತ್ತದೆ. ಎಷ್ಟೊಂದು ರಸಪೂರ್ಣ ನಿರೂಪಣೆಗಳು. ಮುದುಡಿದ ಮನಸ್ಸನ್ನು ಎತ್ತಿಕಟ್ಟುವ ಅದೆಷ್ಟು ಪ್ರೇರೇಪಣೆಗಳು ! ಕೆಟ್ಟ ಜನರ ನಡುನಡುವೆಯೇ ಅದೆಷ್ಟು ಮಂದಿ ಸಜ್ಜನರು ತಂಗಾಳಿಯ ಹಾಗೆ ಸುಳಿದಾಡುತ್ತಾ ಮನಸ್ಸಿಗೆ ತಂಪೆರೆಯುತ್ತಾರೆ... ಬದುಕಿಗೊಂದು ಭರವಸೆ ಕಟ್ಟಿಕೊಡುತ್ತಾರೆ ! ಇವೆಲ್ಲ... ಹೀಗೆ ಹೀಗೆ... ಯಾಕೆಂದರೆ, ಇಲ್ಲಿನ ಪಾತ್ರಗಳ ಬಗ್ಗೆ, ಆಗುಹೋಗುಗಳ ಬಗ್ಗೆ ಲೇಖಕರಿಗೆ ಪ್ರೀತಿಯಿದೆ; ಆಪ್ತತೆಯಿದೆ ಮತ್ತು ಅದೆಲ್ಲವನ್ನು ಆತ್ಮೀಯವಾಗಿ, ಅಷ್ಟೇ ನಿರ್ಭಾವುಕರಾಗಿ ಯಾರಿಗಾದರೂ ಹೇಳಿಕೊಳ್ಳಬೇಕೆನ್ನುವ ಪ್ರಾಮಾಣಿಕ ತುಡಿತ ಕಾದಂಬರಿಯ ಉದ್ದಕ್ಕೂ ಕಂಡುಬರುತ್ತದೆ. ಆದ್ದರಿಂದಲೇ 'ಗೃಹಭಂಗ' ... ವಿಕಾರ–ವಿಕೃತಿಗಳಿಲ್ಲದ, ಓದುಗ ಹೃದಯಗಳನ್ನು ಆರ್ದ್ರವಾಗಿ ಮಿಡಿಯುವ, ಸಮಗ್ರಸುಂದರ ಗದ್ಯಕಾವ್ಯ. ಕಥಾನಾಯಕಿ, ಸಾಧ್ವಿ, ನಂಜಮ್ಮನಂತು ಸದಾಕಾಲ ಎದೆಯಲ್ಲಿ ಕೂತು ಕಾಡುವ, ನಿರಂತರ ಸ್ಫೂರ್ತಿ ಉಕ್ಕಿಸುವ ಮಹತಾಯಿ.

'ಗೃಹಭಂಗ', ಹೀಗೆ, ಒಂದು ಪುರಾತನ ಕಾವ್ಯ ಸಂದೇಶವನ್ನು ನೆನಪಿಸುತ್ತಿದೆ;

*ಪಾಪಮಿದು ಪುಣ್ಯಮಿದು ಹಿತ*
*ರೂಪಮಿದ ಹಿತ ಪ್ರಕಾರಮಿದು ಸುಖಮಿದು ದುಃ*
*ಖೋ ಪಾಪ್ತಮಿದೆಂದರಿಪುಗು*
*ಮಾ ಪರಮಕವಿ ಪ್ರಧಾನರಾ ಕಾವ್ಯಂಗಳ್ ॥*

ಆದರೆ ಇತ್ತೀಚೆಗೆ ಕೆಲವರು ಇದಕ್ಕೆ ವಿರುದ್ಧವಾಗಿಯೋ ಎಂಬಂತೆ... "ಸಾಹಿತಿಗೆ ಯಾವುದೇ ಬಗೆಯ ಸಾಮಾಜಿಕ ಜವಾಬ್ದಾರಿ ಇರಬೇಕಿಲ್ಲ" ಎಂಬೊಂದು ವಾದವನ್ನು ಪ್ರತಿಪಾದಿಸುತ್ತಾರೆ. ಇದು ಸರಿಯೇ ? ವ್ಯಕ್ತಿಯೇ ಸಮಾಜವಲ್ಲವೇ ? (ವ್ಯಕ್ತಿಗಳು ದೊಡ್ಡ ಪ್ರಮಾಣದಲ್ಲಿ ಕೂಡಿಕೊಂಡಾಗ ಸಮಾಜ) ಸಮಾಜದಿಂದ ಸತತವಾಗಿ ಉಪಕೃತನಾಗುವ ವ್ಯಕ್ತಿ, ಸಮಾಜದ ಬಗೆಗೂ ಹೊಣೆಗಾರಿಕೆ ಇರಿಸಿಕೊಳ್ಳಬೇಕಾದದ್ದು ನ್ಯಾಯವೇ ಅಲ್ಲವೇ ?

---


**ಭಾರತೀ ಕಾಸರಗೋಡು**
ಫ್ಲಾಟ್ ನಂ. ಎಫ್.ಎಫ್.ಐ., 'ಅಪೂರ್ವ', ನಂ. ೨೨೯, ೮ನೇ ಅಡ್ಡರಸ್ತೆ
೮ನೇ ಮುಖ್ಯರಸ್ತೆ, ಪೂರ್ಣಪ್ರಜ್ಞ ಬಡಾವಣೆ, ಬೆಂಗಳೂರು – ೫೬೦ ೦೬೧







# ಗ್ರಾಮೀಣ ಸೊಗಡಿನ ಕಲಾವಿದ ಕಡೇಮನಿ



ವಿಜಯಪುರ ಜಿಲ್ಲೆಯ ಕುಮಠೆ ಗ್ರಾಮದಲ್ಲಿ ಜನಿಸಿದ ಪೊನ್ನಪ್ಪ ಎಸ್. ಕಡೇಮನಿಯವರು ಚಿತ್ರಕಲಾವಿದರಾಗಿ ಪ್ರಸಿದ್ಧರು. ಜಲ ಹಾಗೂ ತೈಲವರ್ಣ ಮಾಧ್ಯಮಗಳಲ್ಲಿ ಸಂಯೋಜನೆ, ನಿಸರ್ಗ ಹಾಗೂ ಭಾವಚಿತ್ರಗಳ ರಚನೆಗೆ ಖ್ಯಾತಿ ಪಡೆದವರು. ಇವರ ಕಲೆಯ ಮೂಲ ಸಂವೇದನೆ ಗ್ರಾಮೀಣ ಬದುಕು. ಅನೇಕ ಜನಪದ ಆಚರಣೆ, ವಿಧಿ, ಕ್ರಿಯೆಗಳನ್ನು ತಮ್ಮದೇ (ದೇಶಿ) ಶೈಲಿಯಲ್ಲಿ ಕ್ಯಾನ್ವಾಸ್‌ಗಳ ಮೇಲೆ ಅಭಿವ್ಯಕ್ತಿಸಿದವರು. ಇವರು ತಾಯಿ ಹೊಲಿಯುತ್ತಿದ್ದ ಕೌದಿಗಳನ್ನು ನೋಡಿ ಪ್ರಭಾವಿತರಾಗಿ ಕೌದಿ ಚಿತ್ರಗಳ ಸರಣಿಯನ್ನೇ ಮಾಡಿ ಗಮನ ಸೆಳೆದವರು.

ಕಡೇಮನಿಯವರು ಸಾಕಷ್ಟು ಕಲಾಪ್ರದರ್ಶನಗಳನ್ನು ಮಾಡಿ, ಪ್ರಶಸ್ತಿಗಳನ್ನು ಪಡೆದವರು. ವಿಜಯಪುರದ ಸಿದ್ದೇಶ್ವರ ಕಲಾಮಂದಿರದಲ್ಲಿ ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ ನೂರಾರು ಚಿತ್ರಕಲಾ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿದ್ದಾರೆ. ನಿವೃತ್ತಿಯ ನಂತರವೂ ಸ್ವಂತ ಮನೆಯಲ್ಲೇ ಚಿತ್ರಕಲಾ ಪ್ರದರ್ಶನಕ್ಕಾಗಿ ಗ್ಯಾಲರಿ ನಿರ್ಮಿಸಲು ಶ್ರಮಿಸುತ್ತಿದ್ದಾರೆ.



– **ಡಾ|| ಶಿವಾನಂದ ಎಚ್. ಬಂಟನೂರು,** ಸಹಾಯಕ ಪ್ರಾಧ್ಯಾಪಕ, ಕನ್ನಡ ವಿ.ವಿ. ಹಂಪಿ







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

**HOSATHU** Kannada Monthly / AUGUST 2015 / ₹ 15 (No. of Pages 64)
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.